# ನವೋದಯ ಕಾವ್ಯಗಳಲ್ಲಿ ದೇಶಭಕ್ತಿಯ ವಿನ್ಯಾಸಗಳು

## (ಆಯ್ದ ಕವಿಗಳನ್ನು ಅನುಲಕ್ಷಿಸಿ)

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
ಪ್ರಭಾವತಿ ಯಲ್ಲಪ್ಪ ಹಲಕುರ್ಕಿ

ಮಾರ್ಗದರ್ಶಕರು
ಡಾ. ಬಿ.ಜಿ.ಬಿರಾದಾರ
ಪ್ರಾಚಾರ್ಯರು
ಗುಡ್‌ನ್ಯೂಸ್ ಪ್ರಥಮ ದರ್ಜೆ ಮಹಾವಿದ್ಯಾಲಯ ಕಲಬುರಗಿ

ಮಾನ್ಯತಾ ಸಂಸ್ಥೆ
ಜೆ. ಎಸ್. ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ ಸಂಶೋಧನಾ ಕೇಂದ್ರ,
ವಿದ್ಯಾಗಿರಿ. ಧಾರವಾಡ-೫೮೦೦೦೪



ಭಾಷಾನಿಕಾಯ
ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೮

# ನವೋದಯ ಕಾವ್ಯಗಳಲ್ಲಿ ದೇಶಭಕ್ತಿಯ ವಿನ್ಯಾಸಗಳು

## (ಆಯ್ದ ಕವಿಗಳನ್ನು ಅನುಲಕ್ಷಿಸಿ)

ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ



ಸಂಶೋಧಕರು

ಪ್ರಭಾವತಿ ಯಲ್ಲಪ್ಪ ಹಲಕುರ್ಕಿ

ಮಾರ್ಗದರ್ಶಕರು

ಡಾ. ಬಿ.ಜಿ.ಬಿರಾದಾರ

ಪ್ರಾಚಾರ್ಯರು

ಗುಡ್‌ನ್ಯೂಸ್ ಪ್ರಥಮ ದರ್ಜೆ ಮಹಾವಿದ್ಯಾಲಯ ಕಲಘಟಗಿ

ಮಾನ್ಯತಾ ಸಂಸ್ಥೆ

ಜೆ. ಎಸ್. ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ ಸಂಶೋಧನಾ ಕೇಂದ್ರ,

ವಿದ್ಯಾಗಿರಿ, ಧಾರವಾಡ-580004




ಭಾಷಾ ನಿಕಾಯ

ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ

ಹಂಪಿ - ೫೮೩ ೨೭೬

೨೦೧೮

# ಮಾರ್ಗದರ್ಶಕರ ಪ್ರಮಾಣ ಪತ್ರ

**'ನವೋದಯ ಕಾವ್ಯಗಳಲ್ಲಿ ದೇಶಭಕ್ತಿಯ ವಿನ್ಯಾಸಗಳು'** (ಆಯ್ದ ಕವಿಗಳನ್ನು ಅನುಲಕ್ಷಿಸಿ) ಎಂಬ ವಿಷಯದ ಕುರಿತಾದ ಪಿಎಚ್.ಡಿ. ಸಂಶೋಧನಾ ಮಹಾಪ್ರಬಂಧವನ್ನು **ಪ್ರಭಾವತಿ ಯಲ್ಲಪ್ಪ ಹಲಕುರ್ಕಿ** ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಸಂಶೋಧನಾ ಮಹಾಪ್ರಬಂಧವು ಇದಕ್ಕೂ ಮೊದಲು ಯಾವುದೇ ಪದವಿಗಾಗಿ ಎಲ್ಲಿಯೂ ಸಾದರಪಡಿಸಿಲ್ಲ ಮತ್ತು ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲ್ಪಟ್ಟಿಲ್ಲ. ಈ ಪೂರ್ವದಲ್ಲಿ ಪಸ್ತುತ ಮಹಾಪ್ರಬಂಧವು ಇಡಿಯಾಗಿ ಇಲ್ಲವೆ ಬಿಡಿಯಾಗಿ ಪ್ರಕಟವಾಗಿಲ್ಲವೆಂದು ಪ್ರಮಾಣೀಕರಿಸಿದ್ದೇನೆ.

ಸ್ಥಳ : ಧಾರವಾಡ

ದಿನಾಂಕ: ೨೬-೩-೧೮

**ಡಾ. ಬಿ.ಜೆ.ಬಿರಾದಾರ**

ಮಾರ್ಗದರ್ಶಕರು

ಜೆ. ಎಸ್. ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ

ಸಂಶೋಧನಾ ಕೇಂದ್ರ,

ವಿದ್ಯಾಗಿರಿ, ಧಾರವಾಡ-೫೮೦೦೦೪

# ಸಂಶೋಧಕರ ಘೋಷಣಾ ಪ್ರಮಾಣ ಪತ್ರ

**'ನವೋದಯ ಕಾವ್ಯಗಳಲ್ಲಿ ದೇಶಭಕ್ತಿಯ ವಿನ್ಯಾಸಗಳು'** (ಆಯ್ದ ಕವಿಗಳನ್ನು ಅನುಲಕ್ಷಿಸಿ)ಎಂಬ ವಿಷಯದ ಕುರಿತಾದ ಪಿಎಚ್.ಡಿ. ಸಂಶೋಧನಾ ಮಹಾಪ್ರಬಂಧವನ್ನು ನಾನು **ಡಾ. ಬಿ.ಜಿ.ಬಿರಾದಾರ** ಪ್ರಾಚಾರ್ಯರು, ಗುಡ್‌ನ್ಯೂಸ್ ಸರ್ಕಾರಿ ಪ್ರಥಮ ದರ್ಜೆ ಮಹಾವಿದ್ಯಾಲಯ, ಕಲಘಟಗಿ. ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಈ ಸಂಶೋಧನಾ ಮಹಾಪ್ರಬಂಧವು ಇದಕ್ಕೂ ಮೊದಲು ಯಾವುದೇ ಪದವಿಗಾಗಿ ಎಲ್ಲಿಯೂ ಸಾದರಪಡಿಸಿಲ್ಲ ಮತ್ತು ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲ್ಪಟ್ಟಿಲ್ಲ. ಈ ಪೂರ್ವದಲ್ಲಿ ಪಸ್ತುತ ಮಹಾಪ್ರಬಂಧವು ಇಡಿಯಾಗಿ ಇಲ್ಲವೆ ಬಿಡಿಯಾಗಿ ಪ್ರಕಟವಾಗಿಲ್ಲವೆಂದು ಪ್ರಮಾಣೀಕರಿಸಿದ್ದೇನೆ.

PK

ಸ್ಥಳ : ಧಾರವಾಡ

ದಿನಾಂಕ: ೨೨-೨-೧೮

**ಪ್ರಭಾವತಿ ಯಲ್ಲಪ್ಪ ಹಲಕುರ್ಕಿ**

ಸಂಶೋಧಕರು

ಜೆ. ಎಸ್. ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ

ಸಂಶೋಧನಾ ಕೇಂದ್ರ,

ವಿದ್ಯಾಗಿರಿ, ಧಾರವಾಡ–೫೮೦೦೦೪

# ನವೋದಯ ಕಾವ್ಯಗಳಲ್ಲಿ ದೇಶಭಕ್ತಿಯ ವಿನ್ಯಾಸಗಳು

## (ಆಯ್ದ ಕವಿಗಳನ್ನು ಅನುಲಕ್ಷಿಸಿ)

### ಪರಿವಿಡಿ

# ಅಧ್ಯಾಯ–೧
# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

**ವಿಷಯ ಪ್ರವೇಶ :**

ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ದೇಶಭಕ್ತಿಯ ವಿನ್ಯಾಸ ಮತ್ತು ಅದರ ಹರವು ವಿಶಿಷ್ಟವಾದುದು. ಹಿಂದಿ, ಬಂಗಾಲಿ ಮೊದಲಾದ ಸಾಹಿತ್ಯದಲ್ಲಿ ದೇಶದ ಸಾಂಸ್ಕೃತಿಕ ಪರಂಪರೆ ಅನಾವರಣಗೊಂಡಿದೆ. ಇದಕ್ಕೆ 'ವಂದೇ ಮಾತರಂ' ಒಂದು ಉತ್ತಮ ನಿದರ್ಶನ. ಕನ್ನಡ ಸಾಹಿತ್ಯ ಲೋಕ ಇದಕ್ಕೆ ಹೊರತಾಗಿಲ್ಲ. ದೇಸಿಪ್ರಜ್ಞೆ ಮೂಡಿದಾಗ ಸಹಜವಾಗಿಯೇ ಜನರಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆ ಚಿಗುರೊಡೆಯಲು ಆರಂಭವಾಯಿತು. ಈ ಆರಂಭವೇ ದೇಶಭಕ್ತಿ, ದೇಶಪ್ರೇಮಕ್ಕೆ ಮುನ್ನುಡಿಯಾಯಿತು. 'ದೇಶಭಕ್ತಿ' ಎಂದರೇನು ಅದೊಂದು ಧಾರ್ಮಿಕ ಹಿನ್ನೆಲೆಯ ಪದವಲ್ಲ, ಅದೊಂದು ಪ್ರಜ್ಞೆ, ತಾಯಿ ಮಗುವಿನ ಮಧುರ ಸಂಬಂಧದ ಮಾದರಿ. ಭಕ್ತಿ, ತಾಯಿ, ಭೂಮಿತಾಯಿ ಎಂಬಪದಗಳು ಇತ್ತೀಚೆಗೆ ಹೆಚ್ಚು ಚರ್ಚೆಗೆ ಗ್ರಾಸವಾಗುತ್ತಿವೆ. ಈ ಹಿನ್ನೆಲೆಯಲ್ಲಿ ದೇಶಭಕ್ತಿ ಎಂಬುದನ್ನು ಗ್ರಹಿಸಬೇಕಾಗಿಲ್ಲ. ಬೇಕಾದರೆ ಅದನ್ನು ದೇಶಪ್ರೇಮವೆಂದು ಪರಿಗಣಿಸಿದರೆ ಸಾಕು.

ನವೋದಯ ಹೊಸಗನ್ನಡ ಸಾಹಿತ್ಯದ ಆರಂಭಿಕ ಘಟ್ಟ. ಇಪ್ಪತ್ತನೆಯ ಶತಮಾನದ ಆರಂಭದೊಂದಿಗೆ ನವೋದಯದ ಆರಂಭವೂ ಆಯಿತೆಂದು ಸರಳವಾಗಿ ಪರಿಗಣಿಸಬಹುದು. ನವೋದಯ ಯುಗವನ್ನು ಕಾವ್ಯಯುಗವೆಂದೇ ಕರೆಯುವಷ್ಟು ಕಾವ್ಯ ಕ್ಷೇತ್ರಕ್ಕೆ ಕೊಡುಗೆ ನೀಡಿದೆಯೆಂಬುದು ಕಣ್ಣಮುಂದಿನ ಸತ್ಯ. ಅದರ ನಡಿಗೆ ವೈವಿಧ್ಯಮಯವಾಗಿದೆ. ಪ್ರಕೃತಿ ಪ್ರೇಮ, ಮಾನವ ಪ್ರೇಮ, ವಿಶ್ವಬಂಧುತ್ವಗಳ ಜೊತೆ ಜೊತೆಗೆ ದೇಶಪ್ರೇಮ, ದೇಶಭಕ್ತಿ ಹಾಗೂ ಸ್ವಾಭಿಮಾನವನ್ನು ಸಹೃದಯರ ಎದೆಯಲ್ಲಿ ಬಿತ್ತಲು ಪ್ರಯತ್ನಿಸಿದ್ದು ಸಟೆಯಲ್ಲ ದಿಟ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದ ಉದ್ದೇಶ ಅದರ ಸ್ವರೂಪ ಮತ್ತು ವ್ಯಾಪ್ತಿ ವಿಧಾನವನ್ನು ಅಧ್ಯಯನ ಮಾಡುವುದಾಗಿದೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಆಧುನಿಕ ಕನ್ನಡ ಸಾಹಿತ್ಯ ಕುಡಿಯೊಡೆದ ಪರಿಯನ್ನು ನೋಡಿದರೆ ಒಂದು ಮಹತ್ವ ಪೂರ್ಣವಾದ ಬೆಳವಣಿಗೆ ಎದ್ದು ಕಾಣುತ್ತದೆ. ಈ ಹೊಸ ರೂಪವು ವಿವಿಧ ಬೆಳವಣಿಗೆಗೆ ಕಾರಣವಾಗಿದೆ. ಹಳೇ ನೀರು ಹೋಗಿ ಹೊಸ ನೀರು ಬರುವಂತೆ ಸಾಹಿತ್ಯದಲ್ಲಿಯೂ ಹಳಗನ್ನಡದಿಂದ ಹೊಸಗನ್ನಡಕ್ಕೆ ದಾರಿ ಮಾಡಿಕೊಂಡು ತನ್ನ ಸೃಜನಶೀಲತೆಯಿಂದ ಅನೇಕ ಆಯಾಮಗಳನ್ನು ಹೊಂದಿದೆ. ಹಳಗನ್ನಡ ಸಾಹಿತ್ಯವು ಪ್ರೇರಣೆ ಪರಿಕರಗಳನ್ನು ಸ್ವೀಕರಿಸಿ,

ಪರಂಪರೆಯ ಪ್ರಜ್ಞೆಯೊಂದಿಗೆ ಹೊಸದನ್ನು ಹುಡುಕುತ್ತಾ ಸ್ವತಂತ್ರವಾಗಿ ಶ್ರೀಮಂತವಾಗಿ ಬೆಳೆದು ಬಂದಿದೆ.

ಹೊಸಗನ್ನಡ ಸಾಹಿತ್ಯ ಕ್ಷೇತ್ರದಲ್ಲಿ ನವೋದಯ, ಪ್ರಗತಿಶೀಲ, ನವ್ಯ ದಲಿತ ಬಂಡಾಯ, ಕಾಲಘಟ್ಟಗಳಲ್ಲಿ ಕನ್ನಡ ಸಾಹಿತ್ಯ ಅನೇಕ ಕವಿಗಳನ್ನು, ಸಾಹಿತಿಗಳನ್ನು ಕಾಣಿಕೆಯಾಗಿ ನೀಡಿದೆ. ನವೋದಯದ ಪ್ರಮುಖ ಕವಿಗಳ ಸಾಲಿನಲ್ಲಿ ನಿಲ್ಲುವ ಬಿ.ಎಂ. ಶ್ರೀ. ಗೋವಿಂದ ಪೈ, ಮಾಸ್ತಿ, ಪು.ತಿ.ನ ಕುವೆಂಪು, ಬೇಂದ್ರೆ, ಕಾರಂತ, ಪಂಜೆ ಮಂಗೇಶರಾಯ, ಡಿ.ವಿ.ಜಿ. ಚನ್ನವೀರ ಕಣವಿ ಮುಂತಾದವರು ಹೊಸಗನ್ನಡ ಕಾವ್ಯಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನ ಪಡೆದಿದ್ದಾರೆ.

## ೧.೧ ಅಧ್ಯಯನ ಉದ್ದೇಶ :

ನವೋದಯ ಸಾಹಿತ್ಯದ ಹಲವಾರು ಲಕ್ಷಣ ಧ್ಯೇಯ, ಧೋರಣೆ, ಪ್ರೇರಣೆಗಳಲ್ಲಿ ದೇಶಭಕ್ತಿ ಎನ್ನುವುದು ಅತ್ಯಂತ ಪ್ರಮುಖವಾದುದಾಗಿದೆ. ಜಾಗತೀಕರಣ, ಪಾಶ್ಚಾತ್ಯನುಕರಣ, ನೂತನ ತಂತ್ರಜ್ಞಾನ ಬೆಳವಣಿಗೆ ಮುಂತಾದವುಗಳ ಮಧ್ಯ ಕಳೆದುಹೋಗಿರುವ ಜನರು ಅದರಲ್ಲೂ ಯುವ ಜನಾಂಗವನ್ನು ದೇಶ, ದೇಶಭಕ್ತಿ, ಪ್ರೀತಿ, ಅಭಿಮಾನ, ಅನುಕಂಪ, ಮಾನವಪ್ರೇಮ, ವಿಶ್ವಭಾತೃತ್ವ, ಹೃದಯ ವೈಶಾಲ್ಯತೆ, ನಾಡು–ನುಡಿಯ ಮೌಲ್ಯಗಳನ್ನು ಕುರಿತು ವಿವೇಚಿಸಬೇಕಾಗಿದೆ; ಒಲವು ಮೂಡಿಸಬೇಕಾಗಿದೆ.

ಭಾರತ ದಾಸ್ಯದಲ್ಲಿರುವ ಜನರ ಬಿಡುಗಡೆಯನ್ನು ಬಯಸಿದ ಚೇತನಗಳೂ ತಮ್ಮ ಸಾಮರ್ಥ್ಯವನ್ನು ಕಂಡುಕೊಳ್ಳಲು ಬಯಸಿದವು, ಇತಿಹಾಸ, ಸಂಸ್ಕೃತಿ, ಜನಾಂಗಗಳಿಂದ ತೀರ ಭಿನ್ನವಾದ ಒಂದು ಜಾಗೃತಿ ಲಭ್ಯವಾಯಿತು. ಕೊಳಕು ಬಟ್ಟೆಯಲ್ಲಿ ಮರೆಯಾದ ವಜ್ರದಂತೆ ದಾಸ್ಯದಲ್ಲಿ ಮರೆಯಾದರೂ, ಉಳಿದಿದ್ದ ಈ ನಾಡಿನ ಒಳಗಿನ ಸತ್ಯ ಶ್ರೀಮಂತಿಕೆಗಳು ಪ್ರತ್ಯಕ್ಷವಾದವು.

* ೨೦ ನೇ ಶತಮಾನದ ಏಕೀಕರಣಪೂರ್ವ ಸಾಹಿತ್ಯ ಮುಖ್ಯವಾಗಿ, ನವೋದಯ, ಪ್ರಗತಿಶೀಲ, ನವ್ಯ ಈ ಮೂರು ಸಾಹಿತ್ಯ ಚಳುವಳಿಗೆ ಮಾರ್ಗವನ್ನು ಹಾಕಿಕೊಟ್ಟಿದೆ. ಕನ್ನಡ ನಾಡಿನ ವಿಭಿನ್ನ ಮನೋಧರ್ಮದ ಬೇರೆ ಬೇರೆ ಪ್ರಾಂತದ ಕವಿ ಲೇಖಕರು ಈ ಎಲ್ಲ ಸಾಹಿತ್ಯ ಚಳಿವಳಿಗಳಲ್ಲಿ ತೊಡಗಿಸಿಕೊಂಡು ಅಮೂಲ್ಯ ಕೊಡುಗೆಗಳನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟಿದ್ದಾರೆ.

* ದೇಶಕ್ಕಾಗಿ ಮಾಡಿ ಮಡಿದ ಸ್ವಾತಂತ್ರ್ಯ ಸೇನಾನಿಗಳ ಒಂದೊಂದು ರಕ್ತದ ಹನಿಯೂ ರಾಷ್ಟ್ರಪ್ರೇಮಿ ಕವಿಗಳ ಲೇಖನಿಗೆ ಮಸಿಯಾಗಿದೆ. ಅವರ ಒಂದೊಂದು ಶಬ್ದವೂ ಸ್ವಾತಂತ್ರ್ಯದ ಕನಸು ಕಾಣುವವರಿಗೆ ಸುರಂಗದಾಚೆಯ ಬೆಳಕಿನ ಕಿಂಡಿಯಾಗಿ ಪರಿಣಮಿಸುತ್ತದೆ, ದೇಶಕ್ಕಾಗಿ ತನು–ಮನ–ಧನಗಳನ್ನೆಲ್ಲ ಅರ್ಪಿಸಿ ಹೋದ ವೀರ ಧೀರರ ತ್ಯಾಗ–ಬಲಿದಾನಗಳ ಗಳಿಗೆಗಳನ್ನೆ ನೆನೆದುಕೊಂಡರೆ ನಮ್ಮ ದೇಶದ ಚರಿತ್ರೆಯೇ ಕಣ್ಣೆದುರು ಕಟ್ಟಿದಂತಾಗುತ್ತದೆ.

* ಕನ್ನಡ ನವೋದಯ ಕಾವ್ಯದ ಪ್ರೇರಣೆಗಳಲ್ಲಿ ದೇಶಪ್ರೇಮ ಹಾಗೂ ರಾಷ್ಟ್ರಾಭಿಮಾನವೂ ಪ್ರಮುಖ ಸ್ಥಾನ ಪಡೆದು ನೂರೊಂದು ಹಾಡು-ಕವಿತೆಗಳಾಗಿ ಹೊರಹೊಮ್ಮಿತು. ೧೮೮೨ ರಲ್ಲಿ ಬೆಳಕಿಗೆ ಬಂದ ಬಂಗಾಳದ ಬಂಕಿಮಚಂದ್ರ ಚಟ್ಟೋಪಾಧ್ಯಾಯ ಅವರ ಆನಂದಮಠ ಕಾದಂಬರಿಯಲ್ಲಿ ಪ್ರಕಟವಾದ 'ವಂದೇ ಮಾತರಂ' ಗೀತೆಯಂತೂ ಇಡೀ ಭಾರತದ ಜನಮಾನಸವನ್ನು ವ್ಯಾಪಿಸಿಕೊಂಡು ಬಿಟ್ಟಿತ್ತು. ಆ ಕಾಲದಲ್ಲಿ ಕಾವ್ಯರಚನೆಯಲ್ಲಿ ಭಾರತ ಮಾತೆ ವಿವಿಧ ರೂಪಗಳಲ್ಲಿ ವಿಜೃಂಭಿಸಿದಳು.

* ದೇಶಭಕ್ತಿಯ ಉತ್ಕಟತೆ ಆ ದಿನಗಳಲ್ಲಿ ಭಾರತದ ಇಡಿ ಕವಿ ಕುಲಕ್ಕೆ ಮಾದರಿಯೆನಿಸಿತ್ತು. ಕಟ್ಟಾ ದೇಶಾಭಿಮಾನಿ ಕವಿಗಳು ಕವಿತೆಗಳನ್ನು ಬರೆದುದು ಮಾತ್ರವಲ್ಲದೆ ಸಮರದ ಪ್ರತ್ಯಕ್ಷ ಅನುಭವವನ್ನೆ ಪಡೆದವರು. ಕೆಲವು ಕವಿಗಳದು ಸಿಂಹಗರ್ಜನೆಯಾದರೆ ಮತ್ತೆ ಹಲವರದು ಸೌಮ್ಯ ಸ್ವರೂಪದ ಪ್ರತಿಭಟನೆಯಾಗಿತ್ತು. ಎಲ್ಲ ಹಿರಿಯ ಕವಿಗಳ ಪ್ರಾತಿನಿಧಿಕ ಕವಿತೆಗಳನ್ನು ಅಧ್ಯಯನ ಮಾಡುವುದಾಗಿದೆ. ಕವಿಗಳ ಜಾಗೃತ ವಾಣಿಯ ಅಲೆಗಳ ಕುರಿತು ವಿವರಿಸುವುದಾಗಿದೆ.

* ಕನ್ನಡ ಕವಿಗಳು ತಮ್ಮ ರಾಷ್ಟ್ರಪ್ರೇಮವನ್ನೆಲ್ಲ ಕನ್ನಡಾಂಬೆಯ ಭಾವುಕ ಆರಾಧನೆಗೆ ಬಳಸಿ ಕೈ ತೊಳೆದು ಕೂತವರಲ್ಲ. ಪಾರತಂತ್ರ್ಯದ ಪಂಜರದಲ್ಲಿ ಭಾರತಿಯರುಂಡ ಕಷ್ಟ-ಕಾರ್ಪಣ್ಯಗಳ ಹಿನ್ನೆಲೆಯಲ್ಲಿ ಮೂಡಿನಿಂತ ಅವರ ಅದಮ್ಯ ಅಭಿಲಾಷೆ, ದನಿಕೊಟ್ಟು ತಮ್ಮ ಅಪ್ರತಿಮ ರಾಷ್ಟ್ರನಿಷ್ಠೆಯನ್ನು ಮೆರೆದಿರುವುದರ ಕುರಿತು ಅಧ್ಯಯನ ಮಾಡುವುದಾಗಿದೆ.

* ತಾಯ್ನಾಡಿನ ಬಂಧ ವಿಮೋಚನೆಗಾಗಿ ಅವರು ಮರಣ ಅಥವಾ ಸ್ವಾತಂತ್ರ್ಯ ಎಂಬ ಉದ್ದೇಶದ ಉಜ್ವಲ ವೀರಸ್ಫೂರ್ತಿಯಾದ ಹಾಡುಗಳನ್ನು ರಚಿಸಿ ಜನ ಜಾಗೃತಗೊಳಿಸುವುದು ಕುರಿತು ಅಧ್ಯಯನ ಮಾಡುವುದಾಗಿದೆ.

* ಹೊಸಗನ್ನಡದ ನವೋದಯ ಕಾಲಘಟ್ಟದಲ್ಲಿ ನವೋದಯ ಸಾಹಿತಿಗಳು ತಮ್ಮ ಕಾವ್ಯಗಳಲ್ಲಿ ದೇಶಾಭಿಮಾನ ರಾಷ್ಟ್ರದ ಹಿತಾಸಕ್ತಿ ಕಾಳಜಿಯನ್ನು ಇಟ್ಟುಕೊಂಡು ಅಪ್ಪಟ ರಾಷ್ಟ್ರೀಯತೆಯನ್ನು ತೋರ್ಪಡಿಸಿದ್ದನ್ನು, ನಾಡು ನುಡಿಯ ಕುರಿತು ಆಡಿದ ಅಭಿಮಾನದ ಮಾತುಗಳನ್ನು, ಕರ್ನಾಟಕ ಏಕೀಕರಣ ಚಳುವಳಿಗೆ ಸಾಹಿತ್ಯದ ಮೂಲಕ ಕರೆಕೊಟ್ಟು ಹೋರಾಟ ಮಾಡಿರುವ ಕನಸನ್ನು ನನಸು ಮಾಡಲು ಶ್ರಮಿಸಿರುವದನ್ನು ನಾವೆಲ್ಲರೂ ವಿವೇಚಿಸಬೇಕಾಗಿದೆ.

* ನವೋದಯ ಕಾವ್ಯಗಳಲ್ಲಿ ಭಾವೈಕ್ಯತೆಯನ್ನು ಬಿತ್ತರಿಸುವ ಅನೇಕ ಕಾವ್ಯಗಳು ವಿಫುಲವಾಗಿವೆ. ಹಲವಾರು ಭೇದಗಳಿದ್ದರೂ ಒಂದೇ ಎನ್ನುವುದನ್ನು ಕಾವ್ಯಗಳ ಮೂಲಕ ಗುರುತಿಸುವುದಾಗಿದೆ.

* ನವೋದಯ ಕಾವ್ಯದಲ್ಲಿ ನಾಡಿನ ವಿಮೋಚನೆಯ ಮುನ್ಸೂಚನೆಯ ಕವನಗಳು ನಿಚ್ಚಳವಾಗಿ ಪಲ್ಲವಿಸಿ, ನಮ್ಮನ್ನು ಆಳುವ ಆಂಗ್ಲ ಸಂಸ್ಕೃತಿಯ ವಿರುದ್ಧದ ಕಾವ್ಯಾತ್ಮಕ ಪ್ರತಿಭಟನೆ ಈ ನೆಲದ ಮೂಲ ಸಂಸ್ಕೃತಿಯ ಅಂತಃಶ್ಚೇತನದಿಂದ ದೀಪ್ತಿಗೊಂಡ ದೇಶಪ್ರೇಮದ ಉಜ್ವಲ ಕಾವ್ಯಧಾರೆ ದೇಶಭಕ್ತಿಗೀತೆಗಳನ್ನು ಹೋರಾಟದ ಆಯುಧವನ್ನಾಗಿ ಮಾಡಿಕೊಂಡ ಕವಿಗಳ ಜಾಣ್ಮೆಯನ್ನು ಹೋರಾಟದ ವಿವಿಧ ಆಶಯಗಳನ್ನು ಕಾವ್ಯಗಳಲ್ಲಿ ಅಧ್ಯಯನ ಮಾಡುವುದಾಗಿದೆ.

* ನವೋದಯ ಕಾಲಘಟ್ಟದಲ್ಲಿ ರಚಿತವಾದ ನಾಡುನುಡಿಯ ಕಾವ್ಯಗಳನ್ನು ಗುರುತಿಸುವುದು, ಸಾಹಿತ್ಯ ಸಂವೇದನೆಯ ಮೂಲಕ ಸರ್ವೋದಯವನ್ನು ಸ್ಥಾಪಿಸುವುದಾಗಿದೆ. ಬ್ರಿಟೀಷರ ಕಪ್ಪಿಮುಷ್ಟಿಯಲ್ಲಿದ್ದ ಭಾರತ ಬಂಧನದ ಬಿಡುಗಡೆಗಾಗಿ ಹಂಬಲಿಸಿದ ಕವಿಮನಗಳ ಕಾವ್ಯಗಳನ್ನು ಅಧ್ಯಯನ ಮಾಡುವುದಾಗಿದೆ.

* ಸ್ವಾತಂತ್ರ್ಯ ಹೋರಾಟಕ್ಕೆ ಕರೆಕೊಟ್ಟ ಚಿತ್ರಣವನ್ನು, ಸ್ವಾತಂತ್ರ್ಯ ಬಂದ ಶುಭಸಂದರ್ಭವನ್ನು ಸ್ವಾತಂತ್ರ್ಯ ಸಂಗ್ರಾಮದ ಕವನಗಳ ಶಕ್ತಿ, ಯುಕ್ತಿ ಕಾವ್ಯಗಳ ಮುಖೇನ ವಿವೇಚಿಸುವುದಾಗಿದೆ. ಬ್ರಿಟೀಷರು ಭಾರತ ವಶಪಡಿಸಿಕೊಂಡಿರುವುದುನ್ನು ಭಾರತೀಯರ ಸ್ವಾತಂತ್ರ್ಯ ಚಳುವಳಿಯನ್ನು ಕಾವ್ಯಗಳಲ್ಲಿ ಬಣ್ಣಿಸಿದ ಕುರಿತು ಕಾವ್ಯಗಳಲ್ಲಿ ಹೇಗೆ ಅಭಿವ್ಯಕ್ತಗೊಂಡಿದೆ ಎಂಬುದನ್ನು ಅನಾವರಣಗೊಳಿಸುವುದಾಗಿದೆ.

* ದೇಶಕ್ಕಾಗಿ ತಮ್ಮ ಪ್ರಾಣವನ್ನೇ ಪಣಕಿಟ್ಟು ಹೋರಾಡಿದ ಮಹಾತ್ಮಾಗಾಂಧೀಜಿಯವರ ವ್ಯಕ್ತಿತ್ವದ ಕುರಿತು ಮೂಡಿಬಂದ ಕವನಗಳನ್ನು ಗಾಂಧೀಜಿಯವರು ಭಾರತದ ಬಿಡುಗಡೆಗಾಗಿ ಹಂಬಲಸಿದ ಚಿತ್ರಣವನ್ನು ವಿಶ್ಲೇಷಿಸುವುದಾಗಿದೆ.

* ದೇಶಾದ್ಯಂತ ಮಹಿಳೆಯರು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿರುವುದರ ಕುರಿತು ಅವರಲ್ಲಿಯ ದೇಶಾಭಿಮಾನದ ಹಂಬಲ, ಗಾಂಧೀಜಿವರ ಕರೆಗೆ ಓಗೊಟ್ಟು ಸ್ವಾತಂತ್ರ್ಯಕ್ಕಾಗಿ ತಮ್ಮ ಜೀವನವನ್ನು ಮುಡಪ್ಪಾಗಿಟ್ಟ ಮಹಿಳೆಯರ ಕಾವ್ಯಗಳನ್ನು ಅಧ್ಯಯನ ಮಾಡುವುದುದಾಗಿದೆ.

೧೯೨೧ ರಲ್ಲಿ ಬಿ.ಎಂ. ಶ್ರೀಯವರು 'ಇಂಗ್ಲೀಷ ಗೀತೆಗಳು' ಪ್ರಕಟಗೊಳಿಸಿದರು. ಈ ಹಿಂದೆ ಮುದ್ದಣ್ಣನ ರಾಮಾಶ್ವಮೇಧದಲ್ಲಿ ಅರಣೋದಯದ ಕೋಳಿ ಕೂಗಿತೆಂದು ಹೇಳಬಹುದಾದರೂ. ನವೋದಯದ ಆರಂಭಕ್ಕೆ ಇಂಗ್ಲೀಷ್ ಗೀತೆಗಳೇ ಹೆಬ್ಬಾಗಿಲು. ಇದನ್ನು ರೋಮ್ಯಾಂಟಿಕ್ ಯುಗವೆಂದು ಬಹಳಷ್ಟು ಜನ ಕರೆದರು. ಆ ರೋಮ್ಯಾಂಟಿಕ್ ಯುಗವೇ ಕನ್ನಡದ ನವೋದಯ ಕಾಲ. ಬದಲಾವಣೆ ಬೆಳವಣಿಗೆಯ ಸಂಕೇತ. ಅದು ಪ್ರಕೃತಿ ಧರ್ಮವೂ ಹೌದು. ಹಳಗನ್ನಡದ ಕೊಂಡಿ ಕಳಚಿ, ಹೊಸಗನ್ನಡ ಚಿಗುರೊಡೆಯಿತು. ಈ ಚಿಗುರು ಕಾವ್ಯದತ್ತ ಹೆಚ್ಚಾಗಿ ಮುಖಮಾಡಿತು. ಕಥೆ-ಕಾದಂಬರಿ

ಮೊದಲಾದ ಪ್ರಕಾರಗಳು ಮೂಡಿಬಂದರೂ ಅವು ಕಾವ್ಯಗಳಷ್ಟು ಪ್ರಬಲವಾಗಿ ಮೂಡಿ ಬರಲಿಲ್ಲ. ಕಾವ್ಯವೇ ಮುಖ್ಯವಾಹಿನಿಯಾಗಿ ಹರಿಯತೊಡಗಿತು. ಈ ಸಂದರ್ಭದಲ್ಲಿ ಇತಿಹಾಸ, ಸಂಸ್ಕೃತಿ, ಧರ್ಮ ಮೊದಲಾದ ಸಂಗತಿಗಳು ಜನರಲ್ಲಿ ನಾಡು–ನುಡಿ, ದೇಶಪ್ರೇಮ, ದೇಶಭಕ್ತಿ, ಸ್ವಾತಂತ್ರ್ಯ ಹೋರಾಟದಂಥ ಸಂದರ್ಭಗಳು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದವು. ಈ ರೀತಿಯ ಆ ಸಂದರ್ಭದ ನಿರೂಪಣೆ ಅನಿವಾರ್ಯತೆಯೂ ಹೌದು. ಯಾಕೆಂದರೆ ಅದು ಸ್ವಾತಂತ್ರ್ಯ ಹೋರಾಟದ ಕಾಲ. ಬ್ರಿಟೀಷರ ವಿರುದ್ಧ ಭಾರತೀಯರು ಸಾವಕಾಶವಾಗಿ ತಲೆ ಎತ್ತಿ ಸೆಟೆದು ನಿಂತು ಪ್ರತಿರೋಧ ಒಡ್ಡುತ್ತಿರುವ ಕಾಲವದು. ನಾಡಿನ ಆಂತರಿಕ ಒತ್ತಡಗಳೇ ಬದಲಾವಣೆಗಾಗಿ ಅಭಿವ್ಯಕ್ತಿ ಪಡೆಯಲಾರಂಭಿಸಿತು. ಹಾಗೆ ದೇಶಭಕ್ತಿ, ದೇಶಪ್ರೇಮ, ರಾಷ್ಟ್ರೀಯ ಪ್ರಜ್ಞೆಯನ್ನು ಜನರ ಎದೆಯಲ್ಲಿ ಬಿತ್ತಲು ನವೋದಯದ ಅನೇಕ ಕವಿಗಳು ತಮ್ಮ ಕಾವ್ಯಗಳ ಮೂಲಕ ಪ್ರಯತ್ನಿಸತೊಡಗಿದರು. ಕುವೆಂಪು, ಬೇಂದ್ರೆ, ಗೋವಿಂದ ಪೈ, ಪು.ತಿ.ನ ಮೊದಲಾದ ಕವಿಗಳು ಈ ನೆಲೆಯಲ್ಲಿ ಮುನ್ನಡೆದರು. ದೇಶಭಕ್ತಿಯಲ್ಲಿಯೇ ಹೊರಾಟದ ಶಕ್ತಿಯಿದೆಯೆಂದರಿತ ಈ ಕಾಲಘಟ್ಟದ ಕವಿಗಳು ಜನರಲ್ಲಿ ದೇಶಪ್ರೇಮದ ದೀಪಹತ್ತಿಸಿ ಸ್ವಾತಂತ್ರ್ಯದ ಕಿಚ್ಚನ್ನು ಅದರೊಳಗಿಟ್ಟು ಸ್ವತಂತ್ರ ಭಾರತದ ಕನಸು ಕಂಡರು. 'ನಡೆಮುಂದೆ ನಡೆಮುಂದೆ ನುಗ್ಗಿ ನಡೆ ಮುಂದೆ ಜಗ್ಗದೆಯೆ ಕುಗ್ಗದೆಯೆ ನುಗ್ಗಿ ನಡೆ ಮುಂದೆ'– ಎಂಬಿತ್ಯಾದಿ ಕಾವ್ಯದ ಅನಿವಾರ್ಯತೆ ಸೃಷ್ಟಿಯಾಯಿತು.

ಇಂದಿನ ಭಾರತೀಯ ಪರಿಸರದಲ್ಲಿ ದೇಶಭಕ್ತಿ, ರಾಷ್ಟ್ರೀಯತೆ, ರಾಷ್ಟ್ರಪ್ರೇಮ ನಾಡಭಕ್ತಿಯಲ್ಲಿ ರಾಷ್ಟ್ರಭಾಷೆ ಮತ್ತು ಮಾತೃಭಾಷೆಯ ಅಭಿಮಾನಗಳಲ್ಲಿ ವ್ಯಕ್ತವಾಗಿದೆ. ರಾಷ್ಟ್ರೀಯತೆ ಮಾತ್ರವಲ್ಲದೆ ಈ ದೇಶದ ಮಂದಾಳುತನ ಹಾಗೂ ಸ್ವಾತಂತ್ರ್ಯದ ಉತ್ಕಟ ಬಯಕೆ ಜನರಲ್ಲಿ ಹೊಸತನ ತಂದಿತು. ಗಾಂಧೀಜಿಯಂತವರ ಮುಂದಾಳುತನ ಮತ್ತು ಉಜ್ವಲ ವ್ಯಕ್ತಿತ್ವ ಈ ದೇಶದ ಜನತೆಯ ಹೃದಯದಲ್ಲಿ ಸ್ವಾತಂತ್ರ್ಯದ ಕಿಡಿಯನ್ನು ಹೊತ್ತಿಸಿತು. ಈ ಹೋರಾಟ ಕಾಲದಲ್ಲಿ ಜನತೆಯನ್ನು ಪ್ರೇರೇಪಿಸಿದ ಸಾಹಿತಿಗಳ ಪಾತ್ರವೂ, ಹೋರಾಟದಿಂದ ಸ್ಫೂರ್ತಿಗೊಂಡ ಸಾಹಿತ್ಯಾಭಿವ್ಯಕ್ತಿಯನ್ನು ಅಧ್ಯಯನ ಮಾಡುವುದಾಗಿದೆ.

### ೧.೨.ಅಧ್ಯಯನದ ಸ್ವರೂಪ, ವ್ಯಾಪ್ತಿ:

ದೇಶಭಕ್ತಿ–ಸ್ವಾತಂತ್ರ್ಯ ಹೋರಾಟ, ದೇಶಪ್ರೇಮ ಮೊದಲಾದ ಸಂಗತಿಗಳು ನವೋದಯ ಕಾಲಘಟ್ಟದ ಕಥೆ–ಕಾದಂಬರಿಗಳಲ್ಲಿಯೂ ಮೂಡಿ ಬಂದಿರುವುದುಂಟು. ಆದರೆ ಅದು ನನ್ನ ಅಧ್ಯಯನಕ್ಕೆ ಅಪ್ರಸ್ತುತ. ಅದು ನನ್ನ ಅಧ್ಯಯನದ ವ್ಯಾಪ್ತಿಗೆ ಬರಲಾರದು. ಕೇವಲ ನವೋದಯದ ಆಯ್ದ ಪ್ರಮುಖ ಕವಿಗಳಾದ ಪಂಜೆಮಂಗೇಶರಾಯ, ಗೋವಿಂದ ಪೈ, ಶಾಂತಕವಿಗಳು, ಹುಯಿಲಗೋಳ ನಾರಾಯಣರಾಯರು, ಕಡೆಂಗೋಡ್ಲು ಶಂಕರ ಭಟ್ಟ, ಸಾಲಿರಾಮಚಂದ್ರರಾಯರು,

ಬಿ.ಎಂ.ಶ್ರೀ., ದಿನಕರದೇಸಾಯಿ, ರಂ. ಶ್ರೀ ಮುಗಳಿ, ಮಾಸ್ತಿ, ಆನಂದಕಂದ, ಜಿ.ಪಿ.ರಾಜರತ್ನಂ, ಬೇಂದ್ರೆ, ಕುವೆಂಪು ಪು.ತಿ.ನ, ವಿ,ಸೀತಾರಾಮಯ್ಯ,ಡಿ.ಎಸ್. ಕರ್ಕಿ, ಸಿದ್ಧಯ್ಯ ಪುರಾಣಿಕ, ಕೆ.ಎಸ್. ನರಸಿಂಹಸ್ವಾಮಿ, ಕಯ್ಯಾರ ಕಿಞ್ಞಣ್ಣರೈ, ಜಿ.ಎಸ್. ಶಿವರುದ್ರಪ್ಪ, ಚನ್ನವೀರ ಕಣವಿ, ಕೆ.ಎಸ್. ನಿಸ್ಸಾರ ಅಹಮ್ಮದ್–ಮುಂತಾದವರ ಕಾವ್ಯಗಳಲ್ಲಿ ಅಭಿವ್ಯಕ್ತಗೊಂಡ ದೇಶಭಕ್ತಿಯ ವಿನ್ಯಾಸಗಳನ್ನು ನಾನಿಲ್ಲಿ ಅಧ್ಯಯನಕ್ಕೊಳಪಡಿಸಿದ್ದೇನೆ. ಭಾರತ ಸರ್ವಜನಾಂಗದ ಶಾಂತಿಯ ತೋಟವೆಂದು ಎಲ್ಲರೂ ಹೇಳುವ ಮಾತಾದರೂ ಅದರ ಮಗ್ಗಲು ಮುಳ್ಳಾಗಿ ಬೆಳೆಯುತ್ತಿರುವ ಜಾತೀಯತೆಯನ್ನು ಮೀರಿಯೂ ಇಲ್ಲಿ ಹೇಗೆ ದೇಶಭಕ್ತಿ–ದೇಶಪ್ರೇಮ ಪ್ರಕಟಗೊಂಡಿದೆಯೆಂಬುದನ್ನು ತಲಸ್ಪರ್ಶಿಯಾದ ಅಧ್ಯಯನಕ್ಕೊಳಪಡಿಸುವುದೇ ನನ್ನ ಸಂಶೋಧನ ಪ್ರಬಂಧದ ಆಶಯವಾಗಿದೆ. ನವೋದಯದ ಅನೇಕ ಕವಿಗಳು ಈ ಕುರಿತು ತಮ್ಮ ಕಾವ್ಯಗಳಲ್ಲಿ ಅಭಿವ್ಯಕ್ತಿಸಿರುವುದುಂಟು. ಅವುಗಳನ್ನೆಲ್ಲ ಅಧ್ಯಯನಕ್ಕೊಳಪಡಿಸಿದರೆ ಅದರ ಹರವು ವಿಸ್ತಾರವಾಗುವುದು.ಹಾಗಾಗಿ ಪ್ರಮುಖವಾದ ಕವಿಗಳ ಕಾವ್ಯಗಳನ್ನು ಆಯ್ದುಕೊಂಡು ಅಲ್ಲಿನ ದೇಶಭಕ್ತಿಯ ವಿನ್ಯಾಸಗಳ ಸ್ವರೂಪವನ್ನು ತಿಳಿಸಲು ಪ್ರಯತ್ನಿಸಿದ್ದೇನೆ. ಪ್ರಖರವಾದ ಸೂರ್ಯನ ಬೆಳಕಿನೆದುರು ಕೈದೀವಿಗೆಗಳು ಮಸಕಾಗುವ ಅಪಾಯವಿದ್ದರೂ, ಅದು ಅಧ್ಯಯನದ ವ್ಯಾಪಕತೆಯ ದೃಷ್ಟಿಯಿಂದ ಅನಿವಾರ್ಯವೂ ಹೌದು. ಹಾಗಾಗಿ ನನ್ನ ಅಧ್ಯಯನಕ್ಕೊಂದು ಸೀಮಿತ ಚೌಕಟ್ಟನ್ನು ರೂಪಿಸಿಕೊಳ್ಳಲಾಗಿದೆ.

ಕಾವ್ಯವೆಂದರೆ ಅನುಭವಕ್ಕೆ ಗೊತ್ತು. ಅದನ್ನು ಮಾತಿನಲ್ಲಿ ಖಚಿತವಾಗಿ ಹಿಡಿದಿಡಲಾಗದು. ಭಾವ ಮತ್ತು ಭಾಷೆಯ ವಿಶಿಷ್ಟ ಸಂಯೋಜನೆಯ ಅಭಿವ್ಯಕ್ತಿಯೇ ಕಾವ್ಯವೆಂದು ಸಾಮಾನ್ಯವಾಗಿ ಹೇಳಬಹುದಾದರೂ, ಅದು ಅವರವರ ಭಾವಕ್ಕೆ ಅವರ ಅನುಭವಕ್ಕೆ ಬಿಟ್ಟ ಸಂಗತಿ. ಹೆಚ್ಚಾಗಿ ಅನುಭವದ ಅಭಿವ್ಯಕ್ತಿಯೇ ಸಾಹಿತ್ಯವೆಂದು ಹೇಳುವ ಮಾತೊಂದಿದೆ. ನೂರಾರು ವರ್ಷಗಳಿಂದ ಬ್ರಿಟೀಷರು ಆಳುತ್ತ ಬಂದದ್ದು, ಅವರು ನಡೆಸುತ್ತಿದ್ದ ಲೂಟಿ, ಜನರಮೇಲಿನ ಅವರ ಆಕ್ರಮಣ ಮತ್ತು ಶೋಷಣೆಗಳನ್ನು ಕಣ್ಣಾರೆ ಕಂಡ ಕವಿಗಳಿಗೆ ಬ್ರಿಟೀಷರಿಂದ ದೇಶ ಮುಕ್ತವಾಗಬೇಕೆಂಬ ಸಹಜತೆಯೆ ಕಾವ್ಯದಲ್ಲಿ ಅಭಿವ್ಯಕ್ತಿ ಪಡೆಯಿತು. ದೇಶಭಕ್ತಿ, ರಾಷ್ಟ್ರ ಪ್ರಜ್ಞೆಯ ತಿರುಳನ್ನು ಹೊತ್ತು ಕಾವ್ಯಗಳು ಜನರನ್ನು ತಲುಪಲಾರಂಭಿಸಿದವು. ಇಂಥ ಸಂದರ್ಭಗಳಲ್ಲಿ ಕಥೆ ಕಾದಂಬರಿಗಳಿಗಿಂತ ಕಾವ್ಯಗಳೇ ಹೆಚ್ಚಾಗಿ ಮೂಡಿಬಂದವು.

ನವೋದಯ ಯುಗ ಮೂಡುವಾಗ ಮೂರು ಬೆಳಕಿನ ಬುಗ್ಗೆಗಳು ಕಾಣಿಸಿಕೊಂಡವು. ಮೈಸೂರು, ಧಾರವಾಡ, ಮಂಗಳೂರು ಈ ಕೇಂದ್ರಗಳಲ್ಲಿ ೧೯೨೧ ರಲ್ಲಿ ಪ್ರಕಟವಾದ ಆಚಾರ್ಯ ಬಿ.ಎಂ. ಶ್ರೀಯವರ 'ಇಂಗ್ಲೀಷ ಗೀತೆಗಳು' ಸ್ಪಷ್ಟವಾಗಿ ಹೊಸ ಯುಗದ ಉದಯವನ್ನು ಸಾರಿತು. ಧಾರವಾಡದಲ್ಲಿ ಗೆಳೆಯರ ಗುಂಪು ಚಿರಸ್ಮರಣೀಯವಾದ ಕೆಲಸವನ್ನು ಮಾಡಿತು. ೧೯೧೧ ರಲ್ಲಿ ಗೋವಿಂದ ಪೈಯವರು ಪ್ರಾಸವನ್ನು ಬಿಡುವ ದಿಟ್ಟ ನಿರ್ಧಾರವನ್ನು ಕೈಗೊಂಡು ಕಾವ್ಯದಲ್ಲಿ ಮುಖ್ಯ

ಹೆಜ್ಜೆ ಇಟ್ಟರು. ಕಾವ್ಯದ ಮಟ್ಟಿಗೆ ಮೂರು ಕಡೆಯೂ ಕಾಣುವುದು ಹೊಸ ಸಂವೇದನೆಯ ಅಭಿವ್ಯಕ್ತಿಯ ಹುಡುಕಾಟ. ಪ್ರಾರಂಭದಲ್ಲಿ ಅನುವಾದಗಳು ಬಂದವು. ಇಂಗ್ಲೀಷ್ ಸಂಸ್ಕೃತ ಎರಡೂ ಮೂಲಗಳಿಂದಲೂ ಕೃತಿಗಳನ್ನು ಅನುವಾದಕರು ಆರಿಸಿಕೊಂಡರು.

ಅಂದಿನ ಸಮಯದಲ್ಲಿ ಕನ್ನಡ ನಾಡಿನಲ್ಲಿದ್ದ ಅಭಿಮಾನ ಶೂನ್ಯತೆಯ ಕತ್ತಲೆಯನ್ನು ಹೋಗಲಾಡಿಸಲು ಬೆಳಕನ್ನು ಮೂಡಿಸುವ ಅನೇಕ ಪ್ರಫುಲ್ಲವಾದ ಕಾವ್ಯಗಳ ಮುಖೇನ ಅಧ್ಯಯನ ಮಾಡುವುದಾಗಿದೆ. ದೇಶದ ಅಭಿಮಾನ, ಪ್ರೇಮ, ನಾಡುನುಡಿ ಸ್ವಾತಂತ್ರ್ಯ ಇವುಗಳ ಕುರಿತು ಗದ್ಯ ಸಾಹಿತ್ಯದಲ್ಲಿ ಅನೇಕ ಸಂಶೋಧನೆಗಳು ನಡೆದಿವೆ. ಆದರೆ ಕಾವ್ಯಗಳಲ್ಲಿ ಮೂಡಿದ ಸ್ವಾತಂತ್ರ್ಯ, ದೇಶಭಕ್ತಿಗಳ ಕುರಿತಾದ ಅಧ್ಯಯನಗಳು ಆಂಶಿಕ ಅಧ್ಯಯನಗಳಾಗಿವೆ.

"ನವೋದಯ ಕಾವ್ಯಗಳಲ್ಲಿ ದೇಶಭಕ್ತಿಯ ವಿನ್ಯಾಸಗಳು" (ಆಯ್ದ ಕವಿಗಳನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯಡಿ ನವೋದಯ ಕವಿಗಳ ಕಾವ್ಯದ ವಸ್ತುವಾದ ದೇಶಪ್ರೇಮ, ಭಕ್ತಿ, ಐಕ್ಯತೆ ನಾಡು-ನುಡಿ, ರಾಷ್ಟ್ರೀಯತೆ ಇವುಗಳು ಪ್ರಸ್ತುತ ವಾತಾವರಣದಲ್ಲಿ ಮರೆಯಾಗುತ್ತಿವೆ. ಇಂದಿನ ಆಧುನಿಕ ಯುಗದಲ್ಲಿ ದೇಶ ನನ್ನದು, ಎಲ್ಲರೂ ಒಂದು ಎನ್ನುವ ಮನೋಭಾವ ಕಡಿಮೆಯಾಗಿ, ಭ್ರಷ್ಟಾಚಾರ. ಭಯೋತ್ಪಾದನೆಯಂತಹ ಸಮಸ್ಯೆಗಳಿಂದ ದೇಶಪ್ರೇಮ ಕಡಿಮೆಯಾಗುತ್ತಿದೆ. ಜಾತಿ, ಧರ್ಮ ಮೇಲು-ಕೀಳು ಹೀಗೆ ವ್ಯಕ್ತಿ ಸಮುದಾಯಗಳು ಪ್ರಾದೇಶಿಕತೆಯ ಪ್ರತ್ಯೇಕತೆಯ ಕೂಗು ಕೇಳಿಬರುತ್ತಿದೆ. ಇಂತಹ ನೆಲೆಗಟ್ಟಿನಲ್ಲಿ ದೇಶಭಕ್ತಿ ಅಧ್ಯಯನ ಅವಶ್ಯವೆನಿಸಿದೆ. ಭಾರತೀಯ ಯುವಶಕ್ತಿಯಲ್ಲಿ ಆತ್ಮಸ್ಥೈರ್ಯ, ಹೋರಾಟದ ಮನೋಭಾವವನ್ನು ಬೆಳೆಸಲು ಹಾಗೂ ಕೈ ಬೆರಳುಗಳ ಆಕಾರ ಸ್ವರೂಪ ಕ್ರಿಯಾವಿಧಿಗಳಲ್ಲಿ ಭಿನ್ನವಾಗಿದ್ದರೂ ಒಟ್ಟಾಗಿ ಸೇರಿದಾಗ ಅದು ಮುಷ್ಠಿಯಾಗುವಂತೆ ವಿವಿಧತೆಯಲ್ಲಿ ಏಕತೆ ಕಂಡಾಗ ಮಾತ್ರ ಅದೊಂದು ದೇಶ ಎನಿಸಿಕೊಳ್ಳುತ್ತದೆ ಎಂಬುದನ್ನು ಕಾಣಬೇಕಾಗಿದೆ.

ನವೋದಯ ಕಾಲಘಟ್ಟದಲ್ಲಿ ಕವಿಗಳು ತಮ್ಮ ಕಾವ್ಯಗಳಲ್ಲಿ ದೇಶಭಕ್ತಿಯನ್ನು ಸ್ವಾತಂತ್ರ್ಯ ಹೋರಾಟದ ಚಿತ್ರಣವನ್ನು ಕಾವ್ಯಗಳಲ್ಲಿ ಸೂರೆಗೈದಿದ್ದಾರೆ. ಇದಕ್ಕೆ ನಿರ್ಧಿಷ್ಟವಾದ ಒಂದು ಚೌಕಟ್ಟನ್ನು ಹಾಕಿಕೊಳ್ಳಲಾಗಿದೆ.

**೧.೩. ಅಧ್ಯಯನದ ವಿಧಾನ :**

ನವೋದಯ ಕಾವ್ಯಗಳಲ್ಲಿ ದೇಶಭಕ್ತಿಯ ವಿನ್ಯಾಸಗಳನ್ನು ರಾಷ್ಟ್ರೀಯತೆ ದೇಶಪ್ರೇಮ ನಾಡು-ನುಡಿ ಕುರಿತು ಮೂಡಿ ಬಂದ ಕವನಗಳನ್ನು ವಿಶ್ಲೇಷಿಸುವುದೇ ಅಧ್ಯಯನದ ಪ್ರಮುಖ ಉದ್ದೇಶವೆಂದು ಹಿಂದೆಯೇ ಸ್ಪಷ್ಟಪಡಿಸಲಾಗಿದೆ. ನವೋದಯ ಕವಿಗಳ ಕಾವ್ಯಗಳನ್ನು ಅಧ್ಯಯನ ಮಾಡಿ ದೇಶಭಕ್ತಿಯ ವಿನ್ಯಾಸಗಳನ್ನು ವಿಶ್ಲೇಷಿಸುವುದು ಅಧ್ಯಯನದ ಪ್ರಮುಖ ಉದ್ದೇಶ. ಕನ್ನಡದಲ್ಲಿ ಸಾಹಿತ್ಯ

ಸಂಶೋಧನೆಗಾಗಿ ಸಮೀಕ್ಷಾ ಮಾದರಿ, ಸಂಗ್ರಹ ಮಾದರಿ, ವಿಶ್ಲೇಷಣಾ ಮಾದರಿ, ತೌಲನಿಕ ಮಾದರಿಗಳೆಂಬ ಅಧ್ಯಯನದ ಮಾದರಿಗಳಿವೆ. ಪ್ರಸ್ತುತ ಅಧ್ಯಯನವು ದೇಶಭಕ್ತಿಯುತವಾದ ಕಾವ್ಯಗಳನ್ನು ವಿಶ್ಲೇಷಣೆ ಮಾಡಿರುವುದರಿಂದ ವಿಶ್ಲೇಷಣಾ ವಿಧಾನವಾಗಿದೆ.

ನವೋದಯ ಕಾವ್ಯಗಳನ್ನು ಸಂಶೋಧನೆ ನೆಲೆಯಲ್ಲಿ ಗಮನಿಸಿದಾಗ ವಿಮರ್ಶೆ, ಸಂಗ್ರಹ, ಸಂಪಾದನೆ ಸಾಕಷ್ಟು ನಡೆದಿವೆ. ಆದರೆ ಪ್ರಸ್ತುತ ಕಾಲಘಟ್ಟದಲ್ಲಿ ಸಂಶೋಧನೆ ಅಧ್ಯಯನವು ವಿಭಿನ್ನ ಆಯಾಮಗಳತ್ತ ಮುಖ ಮಾಡಿದೆ. ಕಾವ್ಯಗಳಲ್ಲಿ ಮೂಡಿಬಂದ ದೇಶಭಕ್ತಿ ದೇಶಪ್ರೇಮ, ಸ್ವಾತಂತ್ರ್ಯ, ರಾಷ್ಟ್ರೀಯತೆ ವಿಭಾಗಿಸಿ ಇವುಗಳ ಕುರಿತು ಅಧ್ಯಯನ ಮಾಡುವುದಾಗಿದೆ.ಇದುವರೆಗೆ ಪ್ರಕಟವಾದ ನವೋದಯ ಕಾವ್ಯ, ಮೂಲ ಅಥವಾ ಸಂಪಾದಿತ ಕೃತಿಗಳನ್ನು ಪ್ರಾಥಮಿಕ (Primary Source) ಆಕರವಾಗಿ ಬಳಸಿಕೊಳ್ಳಲಾಗಿದೆ. ಪ್ರಾಥಮಿಕ ಆಕರ ದೊರೆಯದ ಸಂದರ್ಭದಲ್ಲಿ ಪೂರಕ ಅಥವಾ ಪೋಷಕ ಆಕರಗಳನ್ನು ಬಳಸಿಕೊಳ್ಳಲಾಗಿದೆ. ದೇಶಭಕ್ತಿಯನ್ನು ಕುರಿತಾದ ಮಹಾಕಾವ್ಯ ರೂಪಗೊಳ್ಳದೆ ಇದ್ದರೂ ವ್ಯಕ್ತಿನಿಷ್ಠವಾದ ಕವನ, ಕವಿತೆ ಕಾವ್ಯಗಳಲ್ಲಿ ದೇಶಪ್ರೇಮದ ಚಿತ್ರಣಗಳು ಕಂಡುಬರುತ್ತವೆ.

# ಅಧ್ಯಾಯ–೨

## ಇದುವರೆಗೆ ನಡೆದ ಅಧ್ಯಯನಗಳ ತಾತ್ವಿಕ ಸಮೀಕ್ಷೆ

ಪ್ರಸ್ತುತ ಪ್ರಬಂಧವು ನವೋದಯ ಕಾಲಘಟ್ಟದಲ್ಲಿ ರಚಿತವಾದ ದೇಶಭಕ್ತಿಗೆ ಸಂಬಂಧಿಸಿದ ಕಾವ್ಯಗಳನ್ನು ಅಧ್ಯಯನ ಮಾಡುವ ಪ್ರಯತ್ನವಾಗಿದೆ. ಇದಕ್ಕೆ ಸಂಬಂಧಿಸಿದಂತೆ ರಚಿತವಾದ ಅನೇಕ ಕೃತಿಗಳು ನಮ್ಮ ಮುಂದಿವೆ.

'ಹಿಂದಣ ಹೆಜ್ಜೆಯನರಿಯದೆ ಮುಂದನ ದಾರಿ' ತಿಳಿಯದು. ನವೋದಯ ಕಾವ್ಯಗಳಿಗೆ ಸಂಬಂಧಿಸಿದಂತೆ ಇದುವರೆಗೆ ನಡೆದ ವಿವಿಧ ಆಯಾಮಗಳ ಅಂಶಿಕವಾದ ಅಧ್ಯಯನಗಳನ್ನು ಅವಲೋಕಿಸುವುದು ಅಗತ್ಯ. ನವೋದಯ ಕವಿಗಳ ಕಾವ್ಯ ವಿಮರ್ಶೆ ಮೊದಲಾದ ಸಂಗತಿಗಳ ತಾತ್ವಿಕ ಸಮೀಕ್ಷೆಯೊಡನೆ ಪ್ರಸ್ತುತವಾದ ನನ್ನ ಅಧ್ಯಯನಕ್ಕೆ ಸಿದ್ಧತೆಗೊಂಡರೆ ಹೆಚ್ಚು ಸೂಕ್ತ ಎಂದು ಭಾವಿಸಿ ಮುನ್ನಡೆಯುವುದು ಒಳಿತು. ಹಾಗಾಗಿ ನನ್ನ ಅಧ್ಯಯನಕ್ಕೊಂದು ಸಿದ್ಧತೆಯೊದಗಿ ಮುನ್ನಡೆಯಬಹುದು. ಆದ್ದರಿಂದ ಇದುವರೆಗೆ ನಡೆದ ಅಧ್ಯಯನಗಳನ್ನು ಸ್ಥೂಲವಾಗಿ ಇಲ್ಲಿ ಹೇಳಿದ್ದೇನೆ.

"ನವೋದಯ ಕಾವ್ಯಗಳಲ್ಲಿ ದೇಶಭಕ್ತಿಯ ವಿನ್ಯಾಸಗಳು" ಎಂಬ ವಿಷಯದ ಕುರಿತು ಇದುವರೆಗೆ ಯಾವುದೇ ನಿರ್ಧಿಷ್ಟವಾದ ಅಧ್ಯಯನಗಳು ನಡೆದಿಲ್ಲ. ಆದರೆ ಈ ವಿಷಯಕ್ಕೆ ಸಂಬಂಧಿಸಿದ ಹಾಗೆ ಕೆಲವು ಆಂಶಿಕ ಅಧ್ಯಯನಗಳು ಆಗಿವೆ. ಹಾಗೆ ನಡೆದ ಅಧ್ಯಯನಗಳನ್ನು ಕೆಳಗಿನಂತೆ ವಿಭಜಿಸಿ ಗಮನಿಸಬಹುದು.

೧. ನವೋದಯ ಘಟ್ಟದಲ್ಲಿ ದೇಶಭಕ್ತಿ, ರಾಷ್ಟ್ರೀಯತೆಯನ್ನು ಆಧರಿಸಿ ರಚಿತವಾದ ಕಾವ್ಯಗಳ ಕುರಿತು ಬಂದಿರುವ ಪಿಎಚ್.ಡಿ. ಮಹಾಪ್ರಬಂಧಗಳು.

೨. ನವೋದಯ ಕಾವ್ಯಗಳಲ್ಲಿ ಸ್ವಾತಂತ್ರ್ಯಕ್ಕೆ ಸಂಬಂಧಿಸಿದಂತೆ ಬಂದಂತಹ ಕೆಲವು ವಿಮರ್ಶೆಗಳು.

ನವೋದಯ ಕಾಲಘಟ್ಟದಲ್ಲಿ ರಚಿತವಾದ ಕಾವ್ಯಗಳಲ್ಲಿ ದೇಶಭಕ್ತಿ, ಸ್ವಾತಂತ್ರ್ಯ, ರಾಷ್ಟ್ರೀಯತೆಗಳು ಕಾವ್ಯದ ವಸ್ತುವನ್ನಾಗಿಸಿಕೊಂಡಿವೆ. ನವೋದಯ ಕಾಲದ ಕೆಲವು ಕವಿಗಳು ಕೂಡ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗಿದ್ದರು. ಅನೇಕೆ ಕವಿಗಳ ಅಂತರಂಗದಿಂದ ದೇಶಪ್ರೇಮದ, ಸ್ವಾತಂತ್ರ್ಯದ ಕಾವ್ಯಗಳು ಹುಟ್ಟಿಕೊಂಡಿವೆ. ರಾಷ್ಟ್ರೀಯತೆಯನ್ನು ಕುರಿತಂತೆ ರಚಿತವಾದ ಕೆಲವು ಕವಿಗಳ ಕಾವ್ಯಗಳನ್ನು ಕುರಿತು ಕೆಲವು ಸಂಶೋಧಕರು ಅಧ್ಯಯನ ನಡೆಸಿ ಪಿಎಚ್.ಡಿ. ಮಹಾಪ್ರಬಂಧವನ್ನು ರಚಿಸಿದ್ದಾರೆ. ಆದರೆ ಆ ಪ್ರಬಂಧಗಳಲ್ಲಿ ದೇಶಭಕ್ತಿಯ ಕುರಿತಂತೆ ಪೂರ್ಣವಾದ ಅಧ್ಯಯನ ನಡೆದಿಲ್ಲ. ಆಂಶಿಕ ಅಧ್ಯಯನವಿದೆ. ಕೆಲವೊಂದು ಮಹಾಪ್ರಬಂಧಗಳು ನಿರ್ಧಿಷ್ಟ ಲೇಖಕರ ಕೃತಿಗಳಿಗೆ ಮಾತ್ರ

ಸೀಮಿತವಾದವು. ಕವಿಗಳ ಕಾವ್ಯದಲ್ಲಿಯ ವಸ್ತುಗಳೇ ಸೀಮಿತ ವ್ಯಾಪ್ತಿಯನ್ನೊಳಗೊಂಡಿರುವುದರಿಂದ ಅವುಗಳನ್ನು ಆಧರಿಸಿ ನಡೆಸಿದ ಅಧ್ಯಯನಗಳಿಗೆ ಸಹಜವಾಗಿಯೇ ಈ ಮಿತಿ ಉಂಟಾಗಿದೆ.

**ತಾತ್ವಿಕ ಸಮೀಕ್ಷೆ :**

**ರಾಷ್ಟ್ರೀಯ ಚಳುವಳಿಯನ್ನು ಆಧರಿಸಿ ರಚಿತವಾದ ಕಾವ್ಯಗಳ ಅಧ್ಯಯನಗಳು:**

ನವೋದಯ ಕಾವ್ಯಗಳಲ್ಲಿ ದೇಶಭಕ್ತಿಯನ್ನು ಕುರಿತು ಕೆಲವು ಕವಿಗಳು ಕಾವ್ಯಗಳನ್ನು ರಚಿಸಿದ್ದಾರೆ. ಅವುಗಳನ್ನು ಆಧರಿಸಿ ಈ ಕೆಳಗಿನ ಪಿಎಚ್.ಡಿ. ಅಧ್ಯಯನಗಳು ಬಂದಿವೆ.

**೧. ಬೇಂದ್ರೆ ಮತ್ತು ಕುವೆಂಪು ಕಾವ್ಯ–ತೌಲನಿಕ ಅಧ್ಯಯನ:**

ಡಾ. ಎಂ. ಭಾಗ್ಯವತಿ ಅವರ ಪಿಎಚ್.ಡಿ ಪ್ರಬಂಧವಾಗಿದೆ. ಪ್ರಬಂಧವು ಬೇಂದ್ರೆ ಮತ್ತು ಕುವೆಂಪು ಅವರ ಕಾವ್ಯಗಳಲ್ಲಿಯ ದೇಶಪ್ರೇಮ, ರಾಷ್ಟ್ರೀಯತೆಯನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದೆ. ಬೇಂದ್ರೆ ಮತ್ತು ಕುವೆಂಪು ಕಾವ್ಯದ ಪರಸ್ಪರ ತುಲನೆಗೆ ಒಳಪಡಿಸುತ್ತ ಮತ್ತು ಅವರ ಕಾವ್ಯವನ್ನು ರಾಷ್ಟ್ರೀಯತೆ ವೈಚಾರಿಕತೆಯ ಸಂದರ್ಭಗಳಲ್ಲಿ ಕೇಂದ್ರೀಕರಿಸಿ ವಿಶ್ಲೇಷಿಸಿರುವುದು ಅಧ್ಯಯನದ ವಿಶೇಷತೆಯನ್ನು ತೋರಿಸುತ್ತದೆ.

ಕನ್ನಡ ನವೋದಯ ಕಾವ್ಯ ಸೃಷ್ಟಿಗೊಳ್ಳುವ ಸಂದರ್ಭದಲ್ಲಿ ಭಾರತವು ಬ್ರಿಟೀಷರ ಆಳ್ವಿಕೆಗೆ ಒಳಪಟ್ಟಿದ್ದು, ರಾಜಕೀಯ ಮತ್ತು ಸಾಮಾಜಿಕ ಅಸ್ತಿತ್ವ ದುರ್ಬಲಗೊಂಡಿತ್ತು. ಅದೇ ಕಾಲಕ್ಕೆ ದೇಸೀ ಸಂಸ್ಕೃತಿ ಅವನತಿ ಮತ್ತು ಹಳ್ಳಿ ನಗರಗಳ ತಾರತಮ್ಯ, ರಾಷ್ಟ್ರೀಯತೆ, ಸ್ವಾಭಿಮಾನ ಇವು ಭಾರತ ಎದುರಿಸುತ್ತಿದ್ದ ಸಮಸ್ಯೆಗಳಾಗಿದ್ದವು, ಎಂಬುದನ್ನು ಚರ್ಚಿಸಿದ್ದಾರೆ. ದೇಶಪ್ರೇಮ ನಾಡುನುಡಿ ಚಿಂತನೆ ಮುಂತಾದವುಗಳ ಬಗ್ಗೆ ಆ ಕಾಲದ ಎಲ್ಲ ಕವಿಗಳು ಬರಹಗಾರರು ತಮ್ಮ ಬರವಣಿಗೆಯ ಮೌಲ್ಯವನ್ನಾಗಿ ಸ್ವೀಕರಿಸಿದರು. ಕುವೆಂಪು ಅವರ "ಪಾಂಚಜನ್ಯ" ಕೋಗಿಲೆ ಮತ್ತು ಸೋವಿಯತ್ ರಷ್ಯಾ, ಬೇಂದ್ರೆಯವರ 'ಗರಿ' 'ಅರಳು ಮರಳು' ಈ ಕಾವ್ಯಗಳನ್ನು ಅಧ್ಯಯನ ಮಾಡಲಾಗಿದೆ. ಬೇಂದ್ರೆ ಮತ್ತು ಕುವೆಂಪುರವರ ಎಲ್ಲಾ ಕವನಗಳಲ್ಲಿ ರಾಷ್ಟ್ರೀಯ ಭಾವನೆ ಅತ್ಯಂತ ಕಳಕಳಿಯಾಗಿ ಮೂಡಿದೆ. ಕನ್ನಡ ನಾಡು–ನುಡಿಗಳ ಬಗೆಗೆ ಉತ್ಕಟವಾದ ಅಭಿಮಾನವನ್ನು ಹೊಂದಿದ್ದ ಬೇಂದ್ರೆ ಮತ್ತು ಕುವೆಂಪು ರಾಷ್ಟ್ರೀಯ ಭಾವನೆಯನ್ನು ತಮ್ಮ ಕಾವ್ಯಗಳಲ್ಲಿ ಮೊಳಗಿಸಿ ಜನರನ್ನು ನಿದ್ರೆಯಿಂದ ಎಚ್ಚರಿಸಿದರು.

**೨. ಡಾ. ಜಿ.ಎಸ್. ಶಿವರುದ್ರಪ್ಪನವರ ಸಾಹಿತ್ಯ-ಒಂದು ಅಧ್ಯಯನ:**

ಇದು ಸುಭಾಸ ಸಂ. ಪೋರೆ ಅವರ ಮಹಾಪ್ರಬಂಧವಾಗಿದೆ. ಇದರಲ್ಲಿ "ಐಕ್ಯಗಾನ" ಕವನದಲ್ಲಿ ಭಾವೈಕ್ಯತೆಯನ್ನು ಮೆರೆದಿದ್ದಾರೆ. ದೇಶದ ಏಕತೆ, ಅಖಂಡತೆ, ಒಕ್ಕಟ್ಟನ್ನು ಹೇಳಿರುವರು. ಚಕ್ರಗತಿ ಸಂಕಲನದಲ್ಲಿ "ಒಂದು ಹಾಡು" ಕಾವ್ಯವು ಭಾವೈಕ್ಯತೆಯುಳ್ಳದ್ದಾಗಿದೆ. ಭಾರತೀಯರಾದ ನಾವೆಲ್ಲರೂ ಒಂದು ಎನ್ನುವುದರ ಕುರಿತು ವಿಶ್ಲೇಷಿಸಿದ್ದಾರೆ. 'ಚಂದ್ರಮುಖಿಗೆ' ಕವನದಲ್ಲಿ ಚೀನಾದ ದಾಳಿಯ ಕುರಿತು, ಚೀನಾದಂತಹ ದೊಡ್ಡ ರಾಷ್ಟ್ರದ ಕುರಿತು, ಚೀನಿ ಆಕ್ರಮಣಕಾರರನ್ನು ಹಿಮ್ಮೆಟ್ಟಿಸಿ ಸಾಹಸ ಶೌರ್ಯದಿಂದ ಹೋರಾಡಿದವರ ಕುರಿತು ತಮ್ಮ ಅನುಭವಗಳ ಮೂಲಕ ಭಾವನೆಗಳನ್ನು ಅಭಿವ್ಯಕ್ತಿಸಿದುದರ ಕುರಿತು ವಿವರಿಸಿದ್ದಾರೆ.

**೩. ದಿನಕರ ದೇಸಾಯಿ ಬದುಕು-ಬರಹ :**

ಈ ಮಹಾಪ್ರಬಂಧವನ್ನು ಡಾ. ಶ್ರೀಪಾದಶೆಟ್ಟಿ ಅವರು ಅಧ್ಯಯನ ಮಾಡಿದ್ದಾರೆ. ಇವರ ಜೀವನ ಮತ್ತು ಸಾಹಿತ್ಯ ಮತ್ತು ನಾಡುನುಡಿ ಚಿಂತನೆ ಕುರಿತು ಅಧ್ಯಯನ ಕೈಗೊಂಡಿದ್ದಾರೆ. ನಾಡು ನುಡಿ ವಸ್ತುವನ್ನಾಧರಿಸಿ ತಮ್ಮ ಕವನಗಳ ಮೂಲಕ ರಚನೆಗೈದದ್ದನ್ನು ಈ ಪ್ರಬಂಧದಲ್ಲಿ ವಿಶ್ಲೇಷಿಸಿದ್ದಾರೆ. ಕರ್ನಾಟಕ ಏಕೀಕರಣಕ್ಕಾಗಿ ಶ್ರಮಿಸಿದ ದಿನಕರ ದೇಸಾಯಿಯವರು ಅಸಾಧಾರಣವಾದ ಕನ್ನಡಾಭಿಮಾನವನ್ನು ಮೆರೆದವರು. ಕನ್ನಡ ಆಡಳಿತ ಭಾಷೆಯಾಗಬೇಕು, ಭಾಷಾವಾರು ಪ್ರಾಂತ ರಚನೆಯಾಗಬೇಕು ಎಂಬ ವೈಜ್ಞಾನಿಕ ಸಲಹೆಗಳನ್ನು ಜನರ ಮುಂದಿಟ್ಟರು. "ರಾಷ್ಟ್ರೀಯ ಯೋಜನೆ" ಎಂಬ ಕವನದಲ್ಲಿ ರಾಷ್ಟ್ರದ ಉದ್ಧಾರದ ಹಂಬಲವನ್ನು ಹೊತ್ತು ರೂಪುಗೊಂಡ ಯೊಜನೆಗಳ ಕುರಿತಾಗಿ ಹೇಳಿದ್ದಾರೆ. "ಗಾಂಧೀಜಿಯವರಲ್ಲಿ ಭಿನ್ನವತ್ತಳೆ"ಯಲ್ಲಿ ಲಂಚವನ್ನು ತಿಂದ ಮಂತ್ರಿಯೊಬ್ಬ ಸಿಕ್ಕಿಬಿದ್ದು ಮಂತ್ರಿ ಪದವಿ ಕಳೆದುಕೊಂಡಾಗ ಆತ ತಾನು ಮಾಡಿದ ತಪ್ಪನ್ನು ಗಾಂಧೀಜಿಯವರು ಹೇಳಿಕೊಳ್ಳುವ ರೀತಿಯ ಬಗ್ಗೆ ವಿಶ್ಲೇಷಿಸಿದ್ದಾರೆ.

"ಏಕೀಕೃತ ಕರ್ನಾಟಕ" ಎಂಬ ಕವನದಲ್ಲಿ ಕರ್ನಾಟಕ ಏಕೀಕರಣಕ್ಕೆ ಕನ್ನಡಿಗರೆಲ್ಲ ಒಗ್ಗಟ್ಟಾಗಬೇಕಾದ ಅವಶ್ಯಕತೆಯನ್ನು ಸಾರಿ ಹೇಳಿದ್ದಾರೆ. ಭವ್ಯವಾಗಿರುವ ಕನ್ನಡನಾಡು ಬರಿಯ ಬಣ್ಣಗಳ ನಕ್ಷೆಯಲ್ಲ. ಜನ ಏಕೀಕರಣದ ಸಲುವಾಗಿ ಒಟ್ಟಾಗಬೇಕು ಎಂಬುದನ್ನು ವಿವರಿಸಿದ್ದಾರೆ. "ಕನ್ನಡ ತಾಯಿ" ಎಂಬ ಕವನದಲ್ಲಿ ಕರ್ನಾಟಕದ ಭೌಗೋಳಿಕ ಪರಿಸರವನ್ನು ಸಾಂಸ್ಕೃತಿಕ ಹಿರಿಮೆಯನ್ನು ಸಾರಿ ಹೇಳಿದ್ದಾರೆ. "ಕರ್ನಾಟಕಾಂಬೆಯ ಹೆಸರು" ಎಂಬ ಕವನದಲ್ಲಿ ಕನ್ನಡ ನಾಡಿನ ಪ್ರಕೃತಿ ಸೌಂದರ್ಯವನ್ನು ಬಣ್ಣಿಸುತ್ತಾ ಕನ್ನಡದ ನುಡಿಯೇ ಕರ್ನಾಟಕದ ಬಾಯಿ ಎಂದು ಕವಿ ಹೇಳಿದ್ದಾರೆ. ಕರ್ನಾಟಕ ರಾಜ್ಯದ ನಕಾಶೆಯನ್ನು ಕುರಿತು ಕವಿ ಅಲ್ಲಿ ಹತ್ತು ಬಣ್ಣ ಬೇಡ, ಕನ್ನಡನಾಡು ಚಿಂದಿ ಚಿಂದಿಯಾಗಿ ಹೋಗುವದನ್ನು ಕಲ್ಪಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ ಎಂಬುದನ್ನು ಈ

ಮಹಾಪ್ರಬಂಧದಲ್ಲಿ ವಿಶ್ಲೇಷಿಸಿದ್ದಾರೆ. ಕನ್ನಡ ಭಾಷೆ, ಕರ್ನಾಟಕದ ಕುರಿತು ರಾಜಧಾನಿ ಮೈಸೂರಿನ ಹಿರಿಮೆ ಗರಿಮೆಗಳನ್ನು ಒಟ್ಟಿನಲ್ಲಿ ಕನ್ನಡದ ಜನರೆಲ್ಲ ಒಂದಾಗಬೇಕಾದ ವಿಚಾರವನ್ನು, ಕವಿ ಕನ್ನಡಿಗರ ಒಕ್ಕಟ್ಟನ್ನು ಸಾಧಿಸಿರುವುದರ ಕುರಿತು ಮಹಾಪ್ರಬಂಧದಲ್ಲಿ ಕಾವ್ಯಗಳನ್ನು ವಿಶ್ಲೇಷಿಸಿದ್ದಾರೆ.

**೪. ಹುಲಕುಂದದ ಲಾವಣಿ ಸಂಪ್ರದಾಯ–ಒಂದು ಅಧ್ಯಯನ:**

ಡಾ. ಬಿಎಸ್. ಭಜಂತ್ರಿ ಅವರ ಮಹಾಪ್ರಬಂಧವಾಗಿದೆ. ಸ್ವಾತಂತ್ರ್ಯ ಸಂಗ್ರಾಮಕ್ಕೂ ಲಾವಣಿಗೂ ಒಂದು ಬಗೆಯ ನಂಟುತನವುಂಟು ಗ್ರಾಮೀಣ ಪ್ರತಿಭೆಗಳು ಬರಹಕ್ಕಿಂತ ಕಟ್ಟುವ ಕಡೆ ತನ್ನ ಗಮನವನ್ನು ಹರಿಸುತ್ತದೆ ಅದರಲ್ಲೂ ಸ್ವಾತಂತ್ರ್ಯ ಸಂಗ್ರಾಮದ ಜೊತೆ ಮನೋದೈಹಿಕ ಸಂಬಂಧವನ್ನು ಹೊಂದಿರುವರು ಎಂಬುದನ್ನು ಕುರಿತು ಅಧ್ಯಯನ ಕೈಗೊಂಡಿದ್ದಾರೆ. ಹುಲಕುಂದದ ಗೆಳೆಯರ ಗುಂಪನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಹುಲಕುಂದದ ಗೆಳೆಯರ ಗುಂಪು ಸಾಹಿತ್ಯಿಕ ಆಧ್ಯಾತ್ಮಿಕಕ್ಕಿಂತ ಸ್ವಾತಂತ್ರ್ಯದ ನೆಲೆಯತ್ತ ಕಣ್ಣೂರಿದ್ದನ್ನು ಪ್ರಬಂಧದಲ್ಲಿ ವಿಶ್ಲೇಷಿಸಿದ್ದಾರೆ. ರಾಷ್ಟ್ರೀಯ ಲಾವಣಿಗಳ ಕುರಿತು ಅಧ್ಯಯನ ಮಾಡಿದ್ದಾರೆ.

**೫. ಎಂ.ಕೆ. ಇಂದಿರಾ ಸಮಗ್ರ ಅಧ್ಯಯನ :**

ಡಾ. ಮಂದಾಕಿಣಿ ಪುರೋಹಿತ ಅವರ ಮಹಾಪ್ರಬಂಧವಾಗಿದೆ. ಈ ಪ್ರಬಂಧದಲ್ಲಿ ಮಹಾತ್ಮಾಗಾಂಧೀಜಿ ಮತ್ತು ಸ್ವಾತಂತ್ರ್ಯ ಹೋರಾಟದ ಕುರಿತು ಅಧ್ಯಯನ ಮಾಡಿದ್ದಾರೆ. ಸಾಮಾಜಿಕ ಸ್ಥಿತ್ಯಂತರದಲ್ಲಿ ೧೮೫೭ಕ್ಕಿಂತ ಮೊದಲೇ ಸ್ವಾತಂತ್ರ್ಯ ಹೋರಾಟ ಭಾರತದ ರಾಜಕೀಯ ರಂಗದಲ್ಲಿ ಕಾಣಿಸಿಕೊಂಡರೂ ಗಾಂಧೀಜಿಯವರ ಪ್ರವೇಶದಿಂದ ಹೊಸದೊಂದು ತಿರುವು ದೊರೆಯಿತು. ೧೯೪೭ ರಲ್ಲಿ ಗಾಂಧೀಜೀಯವರ ನೇತೃತ್ವದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟ ಪ್ರಪಂಚದ ಇತಿಹಾಸದಲ್ಲಿ ಮಹತ್ವದ ದಾಖಲೆಯಾಯಿತು. ನಮ್ಮ ದೇಶ ಸ್ವತಂತ್ರವಾಯಿತು. ಸ್ವಾತಂತ್ರ್ಯ ಹೋರಾಟ ಬ್ರಿಟೀಷರ ದಾಸ್ಯದಲ್ಲಿದ್ದ ಭಾರತೀಯರಲ್ಲಿ ರಾಷ್ಟ್ರಪ್ರಜ್ಞೆಯನ್ನುಂಟು ಮಾಡಿತು. ಎಂಬುದನ್ನು ಈ ಪ್ರಬಂಧದಲ್ಲಿ ವಿಶ್ಲೇಷಿಸಿದ್ದಾರೆ.

**೬. ಡಾ. ಪಾಟೀಲ ಪುಟ್ಟಪ್ಪನವರ ಬದುಕು, ಬರಹ ಹಾಗೂ ಸಾಧನೆ :**

ಡಾ. ಶಿವಾನಂದ ಬಸಪ್ಪ ಕಲ್ಲೂರ ಅವರ ಮಹಾಪ್ರಬಂಧವಾಗಿದೆ. ಈ ಪ್ರಬಂಧದಲ್ಲಿ ಪುಟ್ಟಪ್ಪನವರ ಕನ್ನಡ ನಾಡುನುಡಿಗಾಗಿ ಹೋರಾಟ ಮಾಡಿದುದನ್ನು ವಿಶ್ಲೇಷಿಸಿದ್ದಾರೆ. ಸ್ವಾತಂತ್ರ್ಯ ಹೋರಾಟದಲ್ಲಿ ಯುವ ಧುರೀಣರಾಗಿ ಚಳುವಳಿಯಲ್ಲಿ ಭಾಗವಹಿಸಿದ್ದು, ಕನ್ನಡ ನಾಡಿಗಾಗಿ ಕನ್ನಡಕ್ಕಾಗಿ ಹೋರಾಟ, ಮಾಡಿದ್ದನ್ನು, ಕನ್ನಡ ನಾಡು–ನುಡಿಯನ್ನು ತಮ್ಮ ಉಸಿರನ್ನಾಗಿ ಮಾಡಿಕೊಂಡು, ಹರಿದು

ಹಂಚಿಹೋಗಿದ್ದ ಕನ್ನಡ ಜನಪದರ ಪ್ರದೇಶವನ್ನು, ಒಂದೇ ರಾಜಕೀಯ ಅಧಿಪತ್ಯಕ್ಕೆ ಒಳಪಡಿಸಲು ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದರ ಕುರಿತು ಮಹಾಪ್ರಬಂಧದಲ್ಲಿ ವಿಶ್ಲೇಷಿಸಿದ್ದಾರೆ.

**೭. ಕಡೆಂಗೋಡ್ಲು ಶಂಕರಭಟ್ಟರ ಬದುಕು-ಬರಹ ಒಂದು ಅಧ್ಯಯನ:**

ಶ್ರೀಮತಿ ರಾಜಮ್ಮ ನಾಯಕ ಅವರ ಮಹಾ ಪ್ರಬಂಧವಾಗಿದೆ ಇದರಲ್ಲಿ "ವಸ್ತ್ರಾಪಹರಣ ಕೃತಿಯಲ್ಲಿ ದೇಶದ ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದ ವಿಷಯಗಳ ಕುರಿತು ತಮ್ಮ ಕಾವ್ಯಗಳ ಮೂಲಕ ವಿಶ್ಲೇಷಿಸಿದ್ದಾರೆ.

ಬ್ರಿಟೀಷರು ತಮ್ಮ ಕುಟಿಲ ವ್ಯಾಪಾರ ತಂತ್ರಗಳಿಂದ ಭಾರತವನ್ನು ವಶಪಡಿಸಿಕೊಂಡಿದ್ದನ್ನು ದೇಶದ ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದ ವಿಷಯಗಳನ್ನು ದೇಶದ್ರೋಹಿಗಳನ್ನು ಕುರಿತು ತಮ್ಮ ಕಾವ್ಯಗಳಲ್ಲಿ ವಿಶ್ಲೇಷಿಸಿದ್ದಾರೆ.

**೮. ಹುಯಿಲಗೋಳ ನಾರಾಯಣರಾಯರ ಜೀವನ ಹಾಗೂ ಸಾಹಿತ್ಯ:**

ಜಿ.ಡಿ. ಜೋಶಿ ಅವರ ಮಹಾಪ್ರಬಂಧವಾಗಿದೆ. ಹುಯಿಲಗೋಳ ನಾರಾಯಣರಾಯರು ತಮ್ಮ ಕಾವ್ಯಗಳಲ್ಲಿ ಭಾರತ ಮಾತೆಯ ಗುಣಗಾಣ ಮಾಡಿದ್ದಾರೆ. ಭಾರತ ಭೂವನ ಪದ್ಯಗಳಲ್ಲಿ ಬ್ರಿಟೀಷರ ಕುಟಿಲ ನೀತಿ, ಭಾರತವನ್ನು ವಶಪಡಿಸಿಕೊಂಡ ಬಗೆಯನ್ನು ಚಿತ್ರಿಸಿದ್ದಾರೆ. ಬ್ರಿಟೀಷರು ಭಾರತವನ್ನು ವಶಪಡಿಸಿಕೊಂಡಿರುವುದನ್ನು ಭಾರತೀಯ ಸ್ವಾತಂತ್ರ್ಯ ಚಳುವಳಿಯನ್ನು ಪ್ರಬಂಧದಲ್ಲಿ ವಿಶ್ಲೇಷಿಸಿದ್ದಾರೆ.

**೯ ಕನ್ನಡ ರಾಷ್ಟ್ರೀಯತೆ :**

ಸಾಮಾಜಿಕ, ಸಾಂಸ್ಕೃತಿಕ ಬೇರುಗಳ ರಾಜಕೀಯಾರ್ಥಿಕ ಅಧ್ಯಯನ ಇದು ಡಾ. ಬಂಜಗೆರೆ ಜಯಪ್ರಕಾಶ ಅವರ ಪಿಎಚ್.ಡಿ ಮಹಾಪ್ರಬಂಧವಾಗಿದೆ. ಇದರಲ್ಲಿ ರಾಷ್ಟ್ರೀಯತೆ ರಾಷ್ಟ್ರತ್ವದ ಪರಿಕಲ್ಪನೆಯ ಬಗ್ಗೆ ವಿಶ್ಲೇಷಿಸಿದ್ದಾರೆ. ಏಕೀಕರಣದ ಉದಯ, ನೆಲ, ಜಲ, ಭಾಷೆ, ಅದರ ಇತಿಹಾಸ ಹಾಗೂ ಸಮಕಾಲೀನ ವರ್ತಮಾನಗಳು ಕರ್ನಾಟಕವೆಂಬ ಹೆಸರಿನಲ್ಲಿ ಸೂಚಿಸಲ್ಪಡುತ್ತದೆ.

**೧೦. ಡಿ.ಎಸ್. ಕರ್ಕಿ ಸಮಗ್ರ ಸಾಹಿತ್ಯ ಅಧ್ಯಯನ:**

ಇದು ಎಸ್.ಎಸ್. ಪರಡ್ಡಿಯವರ ಮಹಾಪ್ರಬಂಧವಾಗಿದೆ. ಕರ್ಕಿಯವರ ಕಾವ್ಯದ ಅಧ್ಯಯನ, ನವೋದಯ ಸಾಹಿತ್ಯದ ಕುರಿತು ಚರ್ಚಿಸಿದ್ದಾರೆ. ಕನ್ನಡ ಸಾಹಿತ್ಯ ರಚನೆಯಲ್ಲಾದ ಹಲವಾರು ಬದಲಾವಣೆಗಳನ್ನು ವಿಶ್ಲೇಷಿಸಿದ್ದಾರೆ. ರಾಷ್ಟ್ರೀಯ ಚಳುವಳಿ, ಸ್ವಾತಂತ್ರ್ಯ ಸಂಗ್ರಾಮಗಳನ್ನು ಕರ್ಕಿಯವರ ಅಧ್ಯಯನದ ಮೂಲಕ ಸ್ಪಷ್ಟಪಡಿಸಿದ್ದಾರೆ.

ಮೇಲ್ಕಾಣಿಸಿದ ಎಲ್ಲಾ ಮಹಾಪ್ರಬಂಧಗಳು ನಿರ್ದಿಷ್ಟ ಕವಿಗಳ ಕೃತಿಗಳನ್ನು ಮಾತ್ರ ತಮ್ಮ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದೆ. ದೇಶಪ್ರೇಮ ಸ್ವಾತಂತ್ರ್ಯ ಚಳುವಳಿಯನ್ನು ಕುರಿತಂತೆ ಲಭ್ಯವಿರುವ ಕಾವ್ಯಗಳನ್ನು ನನ್ನ ಅಧ್ಯಯನಕ್ಕೆ ಬಳಸಿಕೊಂಡಿದ್ದೇನೆ.

**೧೧. ನವ್ಯ ಕಾವ್ಯ ಪ್ರಯೋಗ ಕೀರ್ತಿನಾಥ ಕುರ್ತಕೋಟಿ :**

ಕೀರ್ತಿನಾಥ ಕುರ್ತಕೋಟಿಯವರ ನವ್ಯಕಾವ್ಯ ಪ್ರಯೋಗ (ಸಾಹಿತ್ಯಿಕ ವಿಮರ್ಶಾತ್ಮಕ ವಿವೇಚನೆ) ಕೃತಿಯಾಗಿದೆ. ಉದ್ಯಮ (ಕನ್ನಡದ ಪರಿಸ್ಥಿತಿ) ಭಾರತದ ಎಲ್ಲ ಭಾಷೆಗಳಲ್ಲಿಯ ಕಾವ್ಯದಲ್ಲಿಯೂ ಸ್ವಾತಂತ್ರ್ಯ ಸಂಗ್ರಾಮದ ಭಾವನೆ ಒಂದು ಪ್ರಮುಖ ಸ್ವರವಾಗಿರುವದರಿಂದ ಆ ಯುಗಕ್ಕೆ ಅಡಿಗರು ಅದನ್ನು ಗಾಂಧಿಯುಗ ಎಂದು ಕರೆದಿದ್ದಾರೆ. ಸ್ವಾತಂತ್ರ್ಯದ ಕಲ್ಪನೆ ಒಂದು ಸಾಮೂಹಿಕ ಭಾವನೆಯಾಗಿ ನಮ್ಮ ಕಾವ್ಯಕ್ಕೆ ಹೊಸ ಚೈತನ್ಯ ತಂದುಕೊಟ್ಟಿದ್ದಾರೆ. ಅಡಿಗರು ಆಧುನಿಕ ಕಾವ್ಯದಲ್ಲಿಯ ಯುಗಾಂತರದ ಬಗ್ಗೆ ಹೇಳಿದ್ದಾರೆ.

# ಅಧ್ಯಾಯ–ಮೂರು

## ನವೋದಯ ಸಾಹಿತ್ಯ ಮತ್ತು ದೇಶಭಕ್ತಿ ಪರಿಕಲ್ಪನೆ

'ಕಾವ್ಯಂ ನಿಚ್ಚಂ ಪೊಸತು.........ಎಂದು ಪಂಪ ಕಾವ್ಯದ ನಿತ್ಯನೂತನತೆ ಮತ್ತು ಚಲನಶೀಲತೆಯನ್ನು ತುಂಬಾ ಆಸ್ಥೆಯಿಂದ ಹೇಳಿರುವುದುಂಟು. ಹಾಗಾಗಿಯೇ ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಕನ್ನಡ ಸಾಹಿತ್ಯಕ್ಕೆ ವಿಶಿಷ್ಟವಾದ ಸ್ಥಾನವಿದೆ. ಕನ್ನಡ ಸಾಹಿತ್ಯ ಪರಂಪರೆಯೂ ತುಂಬ ದಿರ್ಘವಾದುದು ಮತ್ತು ವಿಶಿಷ್ಟವಾದುದು. ಈಗ ದೊರಕಿರುವ ಕನ್ನಡದ ಮೊಟ್ಟ ಮೊದಲನೆಯ ಗ್ರಂಥ ಕ್ರಿ.ಶ. ೮೫೦ ರ ಸುಮಾರಿನಲ್ಲಿ ರಚಿತವಾದ ಕವಿರಾಜಮಾರ್ಗವು ಮುಂದಿನ ಕನ್ನಡ ಸಾಹಿತ್ಯಕ್ಕೆ ರಾಜಮಾರ್ಗವನ್ನು ತೋರಿಸುವ ಕೃತಿಯಾಗಿದೆ. ಸಾಹಿತ್ಯದ ಮೇಲೆ ಬೆಳಕನ್ನು ಬೀರುವ ಕನ್ನಡಿಯೂ ಆಗಿದೆ. ಕನ್ನಡ ನಾಡಿನ ಗಡಿ ರೇಖೆಯ ಉಲ್ಲೇಖವು ಮೊದಲಬಾರಿಗೆ ದಾಖಲಾಗಿರುವುದು ಈ ಕೃತಿಯಲ್ಲಿಯೆ; ಅವರ ಕವಿತ್ವಶಕ್ತಿ ಮುಂತಾದವುಗಳನ್ನು ಕಾವ್ಯದಲ್ಲಿ ಬಣ್ಣಿಸಿದ್ದಾನೆ.

ಕವಿರಾಜ ಮಾರ್ಗಕ್ಕಿಂತಲೂ ಪೂರ್ವದಲ್ಲಿ ಕೃತಿ ರಚನೆ ಮಾಡಿದ ಗದ್ಯ ಮತ್ತು ಪದ್ಯ ಕವಿಗಳ ಉಲ್ಲೇಖವು ಕೃತಿಯಲ್ಲಿ ದೊರೆಯುತ್ತದೆ. ಕವಿರಾಜ ಮಾರ್ಗದಲ್ಲಿಯ ಉಲ್ಲೇಖಗಳು ಮತ್ತು ಕವಿರಾಜಮಾರ್ಗ ಪೂರ್ವದ ಕನ್ನಡ ಶಾಸನಗಳನ್ನು ಗಮನಿಸಿ ಹೇಳುವುದಾದರೆ, ಕವಿರಾಜ ಮಾರ್ಗಕ್ಕಿಂತಲೂ ಒಂದೆರಡು ಶತಮಾನಗಳ ಹಿಂದಿನಿಂದಲೇ ಕನ್ನಡದಲ್ಲಿ ಕಾವ್ಯ ರಚನೆ ನಡೆದಿರಬಹುದು. ಕವಿರಾಜ ಮಾರ್ಗ ತರುವಾಯದಲ್ಲಿ ಕನ್ನಡದಲ್ಲಿ ವಿಫುಲವೂ ವೈವಿಧ್ಯಪೂರ್ಣವಾದ ಸಾಹಿತ್ಯ ಸೃಷ್ಟಿಯಾಗಿದೆ. ಶಾಸನ, ಚಂಪೂ ಸಾಹಿತ್ಯದಿಂದ ಮೊದಲುಗೊಂಡು ಇಂದಿನ ದಲಿತ ಬಂಡಾಯ, ಮಹಿಳಾ ಸಂವೇದನೆಯ ಸಾಹಿತ್ಯದವರೆಗೂ ಅನೇಕ ದೃಷ್ಟಿ ಧೋರಣೆಗಳು, ರೂಪ ವೈವಿಧ್ಯತೆಗಳು ಅಭಿವ್ಯಕ್ತಗೊಂಡಿರುವುದು ಕನ್ನಡ ಸಾಹಿತ್ಯದ ಜೀವಂತಿಕೆಗೆ ಸಾಕ್ಷಿ "ನೆಲೆಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ" ಎಂಬ ಶ್ರೀವಿಜಯನ ಹೇಳಿಕೆಯಂತೆ ಆಯಾ ಕಾಲದ ಕಾವ್ಯಗಳು ಸಮಕಾಲೀನ ಸಮಾಜದ ಚಿತ್ರಣವನ್ನು ಸಾಹಿತ್ಯಿಕವಾಗಿ ಮೇಳೈಸಿಕೊಂಡಿವೆ.

ಕನ್ನಡ ಸಾಹಿತ್ಯದಲ್ಲಿ ಪ್ರವಹಿಸಿದ ಭಾಷೆಯನ್ನು ಹಿನ್ನೆಲೆಯಾಗಿಟ್ಟುಕೊಂಡು ಮಾಡಿದ ವಿಭಾಗವು ಹೆಚ್ಚು ಸಮ್ಮತವಾದುದರಿಂದ ಅದನ್ನೆ ಇಲ್ಲಿ ನೋಡಲಾಗಿದೆ. ಹಳೆಗನ್ನಡ (ಕ್ರಿ.ಶ. ೭೫೦ ರಿಂದ ೧೧೫೦ ರವರೆಗೆ), ನಡುಗನ್ನಡ ೧೧೫೦ ರಿಂದ ೧೫೦೦ ರ ವರೆಗೆ), ಹೊಸಗನ್ನಡ ಕ್ರಿ.ಶ. ೧೫೦೦–೧೮೫೦ ರವರೆಗೆ) ಆಧುನಿಕ ಕನ್ನಡ ಸಾಹಿತ್ಯ ಕಾಲ (೧೮೫೦ ರಿಂದ ಮುಂದೆ) ಎಂದು ವಿಭಾಗಿಸಲಾಗಿದೆ, ಆಯಾ ಕಾಲದ ಕನ್ನಡ ಸಾಹಿತ್ಯಕ್ಕೆ ಹೊಸ ತಿರುವು ನೀಡಿದ ಕಾವ್ಯ ಛಂದೋರೂಪಗಳನ್ನು ಅನುಸರಿಸಿ

ಚಂಪೂ, ವಚನ, ರಗಳೆ, ಷಟ್ಪದಿ, ಕೀರ್ತನೆ-ತ್ರಿಪದಿ ಸಾಂಗತ್ಯ, ಭಾವಗೀತೆ-ಗದ್ಯ, ಎಂದು ಜಿ.ಎಸ್. ಶಿವರುದ್ರಪ್ಪನವರು ಸೂಚಿಸಿರುವ ವಿಭಾಗ ಕ್ರಮ ಹೆಚ್ಚು ಅನುಕೂಲಕರ.ಆದರೆ ಯಾವ ರೀತಿಯಲ್ಲಿ ವಿಭಾಗ ಮಾಡಿದರೂ ಕೂಡ ಅವೇ ಸಂಗತಿಗಳು ಮತ್ತೆ ಮತ್ತೆ ಕಾಣಿಸಿಕೊಳ್ಳುವುದರಿಂದ ಅವುಗಳನ್ನು ನೇರವಾಗಿ ನಾಲ್ಕು ಯುಗಗಳೆಂದು ಕರೆಯಬಹುದಾಗಿದೆ.

**ನವೋದಯ ಸಾಹಿತ್ಯ :**

ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಕನ್ನಡ ಸಾಹಿತ್ಯಕ್ಕೊಂದು ವಿಶಿಷ್ಟ ಮತ್ತು ವಿಸ್ತಾರವಾದ ಪರಂಪರೆ ಇದೆ. ಈ ವಿಸ್ತಾರವಾದ ಸಾಹಿತ್ಯವನ್ನು ಅಧ್ಯಯನದ ಅನುಕೂಲಕೋಸ್ಕರವಾಗಿ ಕವಿಗಳ ಮತ, ಧರ್ಮ ಸಾಹಿತ್ಯದ ರೂಪ ಭಾಷೆ ಕಾಲಗಳ ಹಿನ್ನೆಲೆಯಲ್ಲಿ ಹಲವು ರೀತಿಯಲ್ಲಿ ವಿಭಾಗಿಸಿರುವುದು ಕಂಡುಬರುತ್ತದೆ. ಅದೇ ರೀತಿಯಲ್ಲಿ ಆಧುನಿಕ ಕನ್ನಡ ಸಾಹಿತ್ಯವನ್ನು ಕೂಡಾ ಆಯಾ ಕಾಲಘಟ್ಟದ ಕವಿಗಳ ಸಾಹಿತ್ಯದ ದೃಷ್ಟಿ ಧೋರಣೆಗಳ ಹಿನ್ನೆಲೆಯಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಎಂದು ವಿಭಾಗಿಸಿಕೊಂಡಿರುವುದು ಕಂಡುಬರುತ್ತದೆ. ಪ್ರಸ್ತುತ ಅಧ್ಯಾಯದಲ್ಲಿ ನವೋದಯ ಸಾಹಿತ್ಯದ ಲಕ್ಷಣಗಳೇನು? ಈ ಸಾಹಿತ್ಯಕ್ಕೆ ಪ್ರೇರಣೆಗಳು ಎಲ್ಲಿಂದ ಬಂದವು. ಇತ್ಯಾದಿ ವಿಷಯವನ್ನು ಕುರಿತು ಸಂಕ್ಷಿಪ್ತವಾಗಿ ಇಲ್ಲಿ ವಿವೇಚನೆಗೊಳಪಡಿಸಲಾಗಿದೆ.

ಯಾವುದೇ ಒಂದು ಸಾಹಿತ್ಯ ವರ್ತಮಾನದ ಅಗತ್ಯತೆ ಮತ್ತು ಅನಿವಾರ್ಯತೆ ಕಾರಣವಾಗಿ ಹುಟ್ಟಿದರೂ ಕೂಡ ಅದು ತನ್ನ ಪರಂಪರೆಯ ಪ್ರಭಾವ ಮತ್ತು ಸಮಕಾಲೀನ ಸಂದರ್ಭದ ಪ್ರೇರಣೆಗಳು ಆಯಾ ಕಾಲಘಟ್ಟದ ಸಾಹಿತ್ಯವನ್ನು ಪ್ರಭಾವಿಸಿರುತ್ತವೆಯೆಂಬುದನ್ನು ಮರೆಯುವ ಹಾಗಿಲ್ಲ. ಈ ಹಿನ್ನೆಲೆಯಲ್ಲಿ ನೋಡಿದಾಗ ಆಧುನಿಕ ಕನ್ನಡ ಸಾಹಿತ್ಯದ ಮೊದಲ ಬೆಳೆಯಾದ ನವೋದಯ ಸಾಹಿತ್ಯದ ಸೃಷ್ಟಿಯ ಅನಿವಾರ್ಯತೆ ಅದಕ್ಕೆ ಒದಗಿಬಂದ ಪ್ರೇರಣೆ ಕಾರಣಗಳನ್ನು ಅಧ್ಯಯನ ಮಾಡಲಾಗಿದೆ.

ಪ್ರಾಚೀನ ಕನ್ನಡ ಸಾಹಿತ್ಯವನ್ನು ಅಧ್ಯಯನದ ಅನುಕೂಲಕ್ಕೆ ಸಾಹಿತ್ಯದ ರೂಪ. ಮತ ಧರ್ಮ, ಕವಿಗಳ ಕಾಲ-ಸಾಹಿತ್ಯದ ಭಾಷೆ ಅನುಸರಿಸಿ ಹಲವಾರು ದೃಷ್ಟಿಕೋನಗಳಿಂದ ಹಲವಾರು ವಿದ್ವಾಂಸರು ವಿಭಾಗಿಸಿದ್ದಾರೆ. ಅದೇ ರೀತಿ ಆಧುನಿಕ ಸಾಹಿತ್ಯವನ್ನು ಇದರ ಧೋರಣೆ, ಪ್ರೇರಣೆ, ಪ್ರಭಾವ ಸ್ವರೂಪವನ್ನು ಅನುಲಕ್ಷಿಸಿ, ನವೋದಯ ಪ್ರಗತಿಶೀಲ, ನವ್ಯ ದಲಿತ-ಬಂಡಾಯವೆಂದು ವಿಭಾಗ ಮಾಡಲಾಗಿದೆ. ನವೋದಯ ಕಾವ್ಯಪರಂಪರೆಗೆ ಇಂಗ್ಲೀಷ ಪ್ರೇರಣೆ, ರಾಜಾಶ್ರಯದ ಪೋಷಣೆ, ಸಂಘ ಸಂಸ್ಥೆಗಳ ಪಾಲನೆ, ಅದಲ್ಲದೆ ಅನೇಕ ಧಾರ್ಮಿಕ, ಸಾಮಾಜಿಕ ಚಳುವಳಿಗಳ ನೆಲೆಯಿದೆ ಎಂಬುದನ್ನು ಇದುವರೆಗೆ ಅನೇಕರು ಚರ್ಚಿಸಿರುವುದುಂಟು. ಹಾಗಾಗಿ ಆ ರೀತಿಯ ಚರ್ಚೆಗೆ ತೊಡಗದೆ ನವೋದಯದ ಸ್ವರೂಪ ಲಕ್ಷಣ ಅದರ ಆಶಯಗಳನ್ನು ಚರ್ಚಿಸಬೇಕೆನಿಸುತ್ತದೆ. ಯಾಕೆಂದರೆ

ನವೋದಯದ ಆಶಯಗಳಲ್ಲಿಯೆ ದೇಶಭಕ್ತಿ, ರಾಷ್ಟ್ರಪ್ರಜ್ಞೆ ಮೊದಲಾದ ಸಂಗತಿಗಳು ಸಮ್ಮಿಳಿತಗೊಂಡಿವೆ ಎಂಬುದನ್ನು ಗಮನಿಸಬಹುದು.

**೩.೧. ನವೋದಯ ಕಾಲಘಟ್ಟ:**

ರವೀಂದ್ರನಾಥ ಠಾಕೂರರು ಭಾರತೀಯ ಸಾಹಿತ್ಯದ ನವೋದಯಕ್ಕೆ ನಾಂದಿ ಹಾಡಿದರು. ಅರವಿಂದ ಮತ್ತು ರಮಣ ಮಹರ್ಷಿಗಳು ಈ ಶತಮಾನದ ಭಾರತೀಯ ಸಂಸ್ಕೃತಿ ಮತ್ತು ಸಾಹಿತ್ಯದ ಮೇಲೆ ಪ್ರಭಾವ ಬೀರಿದರು. ರಾಷ್ಟ್ರೀಯ ಕಾಂಗ್ರೆಸ್ಸಿನ ಉದಯ ದಾದಾಬಾಯಿ ನವರೋಜಿ, ಗೋಪಾಲಕೃಷ್ಣ ಗೋಖಲೆ, ಬಾಲಗಂಗಾಧರ ತಿಲಕರ ನೇತೃತ್ವದಲ್ಲಿ ರಾಜಕೀಯ ಕ್ಷೇತ್ರಕ್ಕೆ ಭದ್ರ ಬುನಾದಿ ಹಾಕಿದರು. ಇಪ್ಪತ್ತನೇ ಶತಮಾನದ ಆರಂಭ ಕಾಲದ ರಾಷ್ಟ್ರೀಯ ಚಳುವಳಿಯು ಮಹಾತ್ಮಾ ಗಾಂಧೀಜಿಯವರ ಆಗಮನಕ್ಕೆ ಪೂರ್ವ ಸಿದ್ಧತೆಯಾಗಿತ್ತು. ಇಲ್ಲಿಗೆ ಆಧುನಿಕ ಭಾರತದ ರಾಜಕೀಯ ಮತ್ತು ಸಾಮಾಜಿಕ ಇತಿಹಾಸದಲ್ಲಿ ಒಂದು ಪರ್ವವು ಮುಗಿದು ಗಾಂಧೀಯುಗವು ಆರಂಭವಾಯಿತು. ಆಧುನಿಕ ಭಾರತೀಯ ಸಾಹಿತ್ಯ ಮತ್ತು ಅದರ ಅವಿಭಾಜ್ಯ ಅಂಗವೇ ಆದ ಹೊಸಗನ್ನಡ ಸಾಹಿತ್ಯವೂ ಈ ಕಾಲಕ್ಕೆ (೧೯೨೦)ಒಂದು ಸ್ಪಷ್ಟ ರೂಪ ಪಡೆಯಿತು. ಭಾರತದ ನವೋದಯದ ಅಂಗವಾಗಿಯೇ ನಡೆದ ಕನ್ನಡ ನಾಡು-ನುಡಿ, ಮತ್ತು ಸಂಸ್ಕೃತಿಯ ಪುನರುಜ್ಜೀವನ ಚಳುವಳಿಯು ನವೋದಯ ಸಾಹಿತ್ಯದ ಪ್ರಮುಖ ಪ್ರೇರಣೆಗಳಲ್ಲೊಂದಾಯಿತು.

ನವೋದಯಕ್ಕೆ ಹಿನ್ನೆಲೆಯಾಗಿ ನವೋದಯ ಪೂರ್ವಘಟ್ಟವೆಂದೂ ವಿಭಾಗಿಸಲಾಗುವುದುಂಟು. "ನವೋದಯ ಪೂರ್ವದ ಕಾಲವನ್ನು ರಂ. ಶ್ರೀ. ಮುಗಳಿಯವರು ೧೮೨೦ ರಿಂದ ೧೯೨೦ ಎಂದೂ,"(ಶೇಷಗಿರಿರಾವ್ ಎಲ್.ಎಸ್,೨೦೦೬, ಪುಟ-೨೧)ಶೇಷಗಿರಿರಾವ್ ಅವರು ೧೮೭೦ರಿಂದ ೧೯೨೦ ಎಂದು ಹೇಳಿದ್ದಾರೆ. ಇವರಿಬ್ಬರೂ ತಮ್ಮ ಹೇಳಿಕೆಗೆ ನಿದರ್ಶನಗಳನ್ನು ಕೊಟ್ಟು ಸಮರ್ಥಿಸಿಕೊಂಡಿದ್ದಾರೆ. ರಂ.ಶ್ರೀ.ಮುಗಳಿಯವರು ೧೮೨೩ ರಲ್ಲಿಯೇ ಕೆಂಪು ನಾರಾಯಣನ "ಮುದ್ರಾ ಮಂಜೂಷ" ರಚನೆಗೊಂಡಿದೆ; ಇದರಲ್ಲಿ ಹಳೆಯದರ ಜೊತೆಗೆ ಹೊಸತು ಸೇರಿಕೊಂಡಿದೆ ಎಂದು ಹೇಳಿದರೆ, ಪ್ರೊ. ಎಲ್. ಎಸ್. ಶೇಷಗಿರಿರಾವ್‌ರು ಕೆಂಪು ನಾರಾಯಣನ "ಮುದ್ರಾ ಮಂಜೂಷ"-ವು ಯುಗ ಬದಲಾಗುತ್ತಿರುವ ಸೂಚನೆಯಾಗಿದೆ. ೧೮೭೦ ರಿಂದ ೧೯೨೧ರ ಅವಧಿಯಲ್ಲಿ ಕೆಲವು ಅನುವಾದಗಳನ್ನು ಬಿಟ್ಟರೆ ಯಾವುದೇ ಶ್ರೇಷ್ಠ ಮಟ್ಟದ ಕೃತಿಗಳು ರಚನೆಗೊಂಡಿಲ್ಲವೆಂದು ಹೇಳಿದ್ದಾರೆ.

ರಂ.ಶ್ರೀ. ಮುಗಳಿಯವರು ೧೯೨೧ ರಿಂದ ೧೯೫೮ರವರೆಗಿನ ಕಾಲವನ್ನು ಹೊಸಗನ್ನಡ (ನವೋದಯ) ಸಾಹಿತ್ಯದ 'ದ್ವಿತೀಯ ಹಂತ'ವೆಂದು ಗುರುತಿಸಿದರೆ."(ಶೇಷಗಿರಿರಾವ್ ಎಲ್.ಎಸ್, ೨೦೦೬, ಪುಟ-೨೧)ಎಲ್.ಎಸ್. ಶೇಷಗಿರಿರಾವ್‌ರು ೧೯೨೦ ರಿಂದ ೧೯೪೫ ರ ವರೆಗಿನ ಕಾಲವನ್ನು

ನವೋದಯ ಸಾಹಿತ್ಯದ ಸಂಭ್ರಮದ ಸುಗ್ಗಿಯ ಕಾಲ."(ಶೇಷಗಿರಿರಾವ್ ಎಲ್.ಎಸ್, ೨೦೦೬, ಪುಟ–೨೧) ಎಂದು ಹೇಳಿದ್ದಾರೆ. ಅಂದರೆ ಈ ಕಾಲದಲ್ಲಿ ಮಾತ್ರ ಈ ಬಗೆಯ ಸಾಹಿತ್ಯ ರಚಿತವಾಯಿತೆಂದು ಅನಂತರ ಕಾಲದಲ್ಲಿ ಆ ಬಗೆಯ ಸಾಹಿತ್ಯ ರಚನೆಯಾಗಿಲ್ಲವೆಂದು ಅರ್ಥವಲ್ಲ. ಒಂದು ನಿರ್ಧಿಷ್ಟಪಡಿಸಿದ ಕಾಲ ಮತ್ತು ರೀತಿ ಮನೋಧರ್ಮದಲ್ಲಿ ಬರೆಯಲ್ಪಟ್ಟಂತೆ ಅದೇ ಬಗೆಯಲ್ಲಿ ನಂತರದಲ್ಲಿಯೂ ಬರೆಯಲ್ಪಟ್ಟ ಸಾಹಿತ್ಯವೆಲ್ಲವೂ ಅದರಲ್ಲಿ ಸಮಾವೇಶಗೊಳ್ಳುತ್ತದೆ.

ಗೋವಿಂದ ಪೈ, ಕಡೆಂಗೋಡ್ಲು ಶಂಕರಭಟ್ಟ, ಮಾಸ್ತಿ, ಬೇಂದ್ರೆ, ಕಾರಂತ, ಕುವೆಂಪು, ಪು.ತಿ.ನ. ವಿ.ಸೀ. ಗೊರೂರು ರಾಮಸ್ವಾಮಿ ಅಯ್ಯಂಗಾರ್, ಎಂ. ಸೀತಾರಾಮಯ್ಯ ಇವರೆಲ್ಲರ ಹಲವಾರು ಕೃತಿಗಳು ಕವನಗಳು ೧೯೪೫ ರ ನಂತರವೇ ರಚನೆಗೊಂಡಿವೆ. ಇವರೆಲ್ಲ ನವೋದಯ ಮಾರ್ಗದಲ್ಲಿಯೇ ಮುಂದುವರೆದವರು.

ಹೊಸಗನ್ನಡದ ೧೯೫೦ರ ವರೆಗಿನ ಕನ್ನಡ ಸಾಹಿತ್ಯವನ್ನು ಹೊಸಗನ್ನಡ ಕಾವ್ಯ, ಆಧುನಿಕ ಕಾವ್ಯ, ರೋಮ್ಯಾಂಟಿಕ್ ಕಾವ್ಯ, ರಮ್ಯಕಾವ್ಯ, ನವೋದಯ ಕಾವ್ಯ ಮೊದಲಾದ ಹೆಸರುಗಳಿಂದ ಕರೆದಿರುವದಕ್ಕೆ ಹಲವಾರು ಕಾರಣಗಳುಂಟು. ಈ ಕಾಲದ (ನವೋದಯ) ಪ್ರಮುಖ ಸಾಹಿತಿಗಳು ತಮ್ಮ ಕಾವ್ಯವನ್ನು, ತಮ್ಮ ಕಾಲದ ಕಾವ್ಯವನ್ನು ಹೊಸಗನ್ನಡ ಕಾವ್ಯವೆಂದೋ, ಆಧುನಿಕ ಕಾವ್ಯವೆಂದೋ ಕರೆದುಕೊಂಡರೆ ವಿನಃ ರೋಮ್ಯಾಂಟಿಕ್ ಅಥವಾ ರಮ್ಯ ಕಾವ್ಯವೆಂದು ಕರೆಯಲಿಲ್ಲ. ಇವುಗಳಲ್ಲಿ ಯಾವುದೂ ಉಚಿತವಲ್ಲದ ಕಾರಣ ಕುವೆಂಪುರವರು "ನವೋದಯ"(ಶಿವರುದ್ರಪ್ಪ ಜಿ.ಎಸ್, ೧೯೭೬, ಪುಟ–೧)ಎಂದು ಕರೆದವರಲ್ಲಿ ಮೊದಲಿಗರು.

೧೯೫೦ ರ ಸುಮಾರಿಗೆ ಪ್ರಾರಂಭವಾದ ನವ್ಯ ಪಂಥದ ಸಾಹಿತಿಗಳು ತಮ್ಮ ಸಾಹಿತ್ಯ ಚಳುವಳಿಯ ಹಿಂದಿನ ೧೯೫೦ರ ರ ವರೆಗಿನ ಸಾಹಿತ್ಯಕ್ಕೂ, ಇಂಗ್ಲೀಷ್‌ನ ರೋಮ್ಯಾಂಟಿಕ್ ಸಾಹಿತ್ಯಕ್ಕೂ ಕೆಲವು ಸಾಮ್ಯತೆಗಳನ್ನು ಕಂಡುಕೊಂಡು ಹಾಗೂ ಇದು ಇಂಗ್ಲೀಷ್ ರೋಮ್ಯಾಂಟಿಕ್ ಕಾವ್ಯದಿಂದಲೇ ಪ್ರೇರಣೆ ಪಡೆಯಿತೆಂಬ ಕಾರಣದಿಂದ ಈ ಕಾಲದ ಕಾವ್ಯಕ್ಕೆ 'ರೋಮ್ಯಾಂಟಿಕ್ ಕಾವ್ಯ, ರಮ್ಯಕಾವ್ಯ' ಎಂದು ಕರೆದರು. ಅಡಿಗರು ತಮ್ಮ ಹಿಂದಿನ ಕಾವ್ಯ ಮಾರ್ಗವನ್ನು ರೋಮ್ಯಾಂಟಿಕ್ ಸಂಪ್ರದಾಯವೆಂದು ಕರೆದು (ಆಮೂರ ಜಿ.ಎಸ್, ನವೋದಯ ಕಾವ್ಯ (ಲೇಖನ): ೧೯೯೯, ಪುಟ–೭)ಅದರ ಗುಣ ದೋಷಗಳನ್ನು ವಿಮರ್ಶೆ ಮಾಡಿದರು.

ಇಂಗ್ಲೀಷ್‌ನಲ್ಲಿ ರೋಮ್ಯಾಂಟಿಕ್ ಚಳುವಳಿ ತನ್ನ ಹಿಂದಿನ ನಿಯೋಕ್ಲಾಸಿಕಲ್ ಕಾವ್ಯ ಪದ್ದತಿಯಿಂದ ಬೇರೊಂದು ಭಾವಗೀತಾತ್ಮಕವಾದ ಅಭಿವ್ಯಕ್ತಿಗೆ ತಿರುಗಿದಂತೆ, ಈ ಕಾಲದ ಕನ್ನಡ ಸಾಹಿತ್ಯವು ತನ್ನ ಹಿಂದಿನ ಮಹಾಕಾವ್ಯಗಳ ಸಾಂಪ್ರದಾಯಿಕ ಕಾವ್ಯ ಮಾರ್ಗವನ್ನು ತೊರೆದು ಭಾವಗೀತಾತ್ಮಕವಾದ ಅಭಿವ್ಯಕ್ತಿ ಪಡೆಯಿತು. ಹಾಗೂ ಈ ಕಾವ್ಯವು ಇಂಗ್ಲೀಷ್ ರೋಮ್ಯಾಂಟಿಕ್

ಕಾವ್ಯಗಳಿಂದಲೇ ಪ್ರೇರಣೆ ಪಡೆಯಿತು. ಅದಕ್ಕಾಗಿ ನವ್ಯದವರು ಇದನ್ನು 'ರೋಮ್ಯಾಂಟಿಕ್ ಕಾವ್ಯ' ಅಥವಾ 'ರಮ್ಯ ಕಾವ್ಯ' ಎಂದು ಕರೆದರು. ಈ ರೀತಿ ಪ್ರಭಾವ ಬೀರಿದ ಇಂಗ್ಲೀಷ್ ರೋಮ್ಯಾಂಟಿಕ್ ಕಾವ್ಯದ ಸಿಂಹಾವಲೋಕನವು ಪ್ರಸ್ತುತ ಸಂದರ್ಭದಲ್ಲಿ ಅವಶ್ಯವಾಗಿದೆ.

'ರೋಮ್ಯಾಂಟಿಕ್'-ಎಂಬುದು ಮೂಲತಃ ಒಂದು ಭಾಷೆಯ ಹೆಸರಾಗಿದ್ದಿತು. ೮ನೇ ಶತಮಾನದಲ್ಲಿ ರೋಮ್ ರಾಜ್ಯಕ್ಕೆ ವಲಸೆ ಬಂದ ಬರ್ಬರ ಜನಾಂಗದ ಸಂಪರ್ಕದಿಂದಾಗಿ ಇವರ ಭಾಷೆಗೂ ಹಾಗೂ ಅಲ್ಲಿಯ ಅಂದಿನ ಅಧಿಕೃತ ಭಾಷೆಯಾದ ಲ್ಯಾಟಿನ್ ಜೊತೆಗೆ ಒಂದು ಬಗೆಯ ದೇಶ ಭಾಷೆ ರೂಪುಗೊಂಡಿತು. ಅದಕ್ಕೆ-"ರೋಮ್ಯಾನಿಕಾ"(ಶಿವರುದ್ರಪ್ಪ ಜಿ.ಎಸ್, ೧೯೭೬, ಪುಟ-೩) ಎಂದು ಹೆಸರು. ಇದರ ಕ್ರಿಯಾವಿಶೇಷಣ-'ರೋಮ್ಯಾನಿಸ್'-(ಶಿವರುದ್ರಪ್ಪ ಜಿ.ಎಸ್, ೧೯೭೬, ಪುಟ-೩) ಈ ಕ್ರಿಯಾವಿಶೇಷಣದಿಂದ ಮಾಡಿಕೊಂಡ ನಾಮ ಪದವೇ- 'ರೋಮಾನ್ಸ್' (Romanz)"(ಶಿವರುದ್ರಪ್ಪ ಜಿ.ಎಸ್, ೧೯೭೬, ಪುಟ-೩) ಈ ನಾಮಪದವನ್ನು ಮೊದಲು ಹಳೆಯ ಫ್ರೆಂಚ್ ಭಾಷೆಯನ್ನು ಸೂಚಿಸಲು ಬಳಸುತ್ತಿದ್ದರು. ಕಾಲ ಕ್ರಮೇಣ ಇತರ ಲ್ಯಾಟಿನ್ ಭಾಷಾ ಪ್ರಭೇದಗಳಿಗೂ ಬಳಸಲಾರಂಭಿಸಲಾಯಿತು.

ಒಂದು ಭಾಷಾ ಪ್ರಭೇದಗಳಿಗೆ ಹೆಸರಾದ Romanz (ರೋಮಾನ್ಸ) ಎಂಬ ನಾಮಪದ ಕ್ರಮೇಣ ಆ ಭಾಷೆಯಲ್ಲಿ ರಚಿತವಾದ 'ಸಾಹಿತ್ಯಿಕ ಬರವಣಿಗೆ' ಎಂಬ ಅರ್ಥದಲ್ಲಿ ಬಳಕೆಯಾಗತೊಡಗಿತು. ಹದಿನೇಳನೆಯ ಶತಮಾನದ ಹೊತ್ತಿಗೆ 'ರೋಮಾನ್ಸ'-ಎಂದರೆ 'ಕಟ್ಟುಕಥೆ', ಕಲ್ಪಿತಗಳ ಕಂತೆ, ಯಕ್ಷ ಕಿನ್ನರರ ಕತೆಯಂತೆ ವಿಲಕ್ಷಣವಾದ"-ಎಂಬ ಅರ್ಥವನ್ನು ಪಡೆಯಿತು. ಇನ್ನೂ ಮುಂದುವರೆದು 'Romancer' ಎಂದರೆ ಸುಳ್ಳುಗಾರ ಎಂದೂ ಅರ್ಥವನ್ನು ಪಡೆಯಿತು. 'ರೋಮ್ಯಾಂಟಿಕ್'-ಎಂಬ ಪದ ಹತ್ತೊಂಬತ್ತನೆಯ ಶತಮಾನದಲ್ಲಿ ನಿಸರ್ಗ ಪರಿಸರವನ್ನು ಸೂಚಿಸಲು ಬಳಕೆಯಾಗತೊಡಗಿತು. ವಿಶೇಷವಾಗಿ ಮಧ್ಯಯುಗದ ರಮ್ಯ ಕಥಾನಕಗಳಲ್ಲಿಯ ಪ್ರಕೃತಿವರ್ಣನೆ ಎಂಬ ಅರ್ಥವನ್ನು ಪಡೆಯಿತು. ನಿಸರ್ಗದ ಹಿನ್ನೆಲೆಯನ್ನು ಸೂಚಿಸುವ 'ರೋಮ್ಯಾಂಟಿಕ್'-ಕಾವ್ಯ ಎನ್ನುವದು ವಾಸ್ತವತೆಯಿಂದ ದೂರವಾದದ್ದು ಎಂದಾಯಿತು. ಅಲ್ಲದೆ 'ರೋಮ್ಯಾಂಟಿಕ್'-ಎಂದರೆ ಲೋಕವನ್ನು ನೋಡುವ ವಿಶಿಷ್ಟ ದೃಷ್ಟಿ ಅಥವಾ ಅನುಭವಗಳನ್ನು ರೂಪಿಸುವ ಒಂದು ವಿಧಾನವಾಗಿ ೧೮-೧೯ನೇ ಶತಮಾನದಲ್ಲಿ ಒಂದು ಸಾಹಿತ್ಯಿಕ ಚಳುವಳಿಯ ಹೆಸರಾಗಿ ರೂಢಿಯಾಯಿತು.

ಒಟ್ಟಿನಲ್ಲಿ ಈಗ 'ರೋಮ್ಯಾಂಟಿಕ್' ಎಂಬ ಪದವನ್ನು ಎರಡು ಅರ್ಥದಲ್ಲಿ ಬಳಸಲಾಗುತ್ತದೆ."(ಶಿವರುದ್ರಪ್ಪ ಜಿ.ಎಸ್, ೧೯೭೬, ಪುಟ-೫) ೧) ಅದೊಂದು ವಿಶಿಷ್ಟ ಮನೋಧರ್ಮ, ೨) ಒಂದು ಸಾಹಿತ್ಯಿಕ ಚಳುವಳಿ.

'ರೋಮ್ಯಾಂಟಿಕ್' ಒಂದು ಸಾಹಿತ್ಯಿಕ ಚಳುವಳಿಯಾದ ಮೇಲೆ ಈ ಸಾಹಿತ್ಯದ ಲಕ್ಷಣ ಹೇಳುವದು ಪ್ರಾರಂಭವಾಯಿತು. ರಾಬರ್ಟ ಬರ್ನ್ಸ್ (೧೭೫೯ ರಿಂದ ೧೭೯೬) ಮತ್ತು ವಿಲಿಯಂ ಬ್ಲೇಕ್ (೧೭೫೭–೧೮೨೭) ರ ಕವನಗಳಲ್ಲಿ ರೋಮ್ಯಾಂಟಿಕ್‌ದ ಉದಯವನ್ನು ಕಾಣಬಹುದು. ಆದರೆ ಇವರಿಂದ ಒಂದು ಹೊಸ ಪರಂಪರೆ ಪ್ರಾರಂಭವಾಗಲಿಲ್ಲವಾದ್ದರಿಂದ ೧೭೯೮ ರಲ್ಲಿ ವರ್ಡ್ಸವರ್ಥ ಮತ್ತು ಕೋಲ್‌ರಿಜ್ ಇವರಿಬ್ಬರ ಕವನಗಳು ಸೇರಿದ "ಲಿರಿಕಲ್ ಬ್ಯಾಲೆಡ್ಸ್"–ಪ್ರಕಟಣೆಯೊಂದಿಗೆ 'ರೋಮ್ಯಾಂಟಿಕ್ ಯುಗ'ದ ಉದಯವಾಯಿತು.

ವರ್ಡ್ಸವರ್ಥ 'ಲಿರಿಕಲ್ ಬ್ಯಾಲೆಡ್ಸ್'ಗೆ ಬರೆದ ಮುನ್ನುಡಿ (ಫ್ರಿಫೇಸ್‌ನಲ್ಲಿ)ಯಲ್ಲಿ ಹೊಸಬಗೆಯ ಕಾವ್ಯದ ಅಗತ್ಯವನ್ನು ಪ್ರತಿಪಾದಿಸುತ್ತಾನೆ. ಆದರೆ 'ರೋಮ್ಯಾಂಟಿಕ್'–ಎನ್ನುವ ಪದವನ್ನು ಬಳಸುವದಿಲ್ಲ. ಇವನ ಮತ್ತು ಕೋಲರಿಜ್‌ನ ಸಮಕಾಲೀನರು ಇವರಿಬ್ಬರ ಕಾವ್ಯವನ್ನು 'ಲೇಕ್‌ಸ್ಕೂಲ್'– ಎಂದು ಕರೆದರೇ ವಿನಃ 'ರೋಮ್ಯಾಂಟಿಕ್'ಎಂದು ಕರೆಯಲಿಲ್ಲ. ಸಾಮಾನ್ಯವಾಗಿ ವರ್ಡ್ಸವರ್ಥ ಮತ್ತು ಕೋಲರಿಜ್‌ರಿಂದ ಪ್ರಾರಂಭವಾಯಿತೆನ್ನುವ 'ರೋಮ್ಯಾಂಟಿಕ್' ಸಾಹಿತ್ಯದ ಲಕ್ಷಣಗಳನ್ನು ಈಗ ನೋಡಬಹುದು.

ರೋಮ್ಯಾಂಟಿಕ್ ಯುಗದ ಹಿಂದಿನ ನಿಯೋಕ್ಲಾಸಿಕ್ ಸಾಹಿತ್ಯ ಕವಿಯನ್ನು ಸಮುದಾಯದ ಕಂಠ, ನಾಲಿಗೆ, ಎಂದು ತಿಳಿದಿತ್ತು. ಕವಿ ನಿಸರ್ಗವನ್ನು (ಮನುಷ್ಯನ ಬದುಕು) ಅನುಕರಿಸುತ್ತಾನೆ. ಹೇಳುವದನ್ನು ಸರಿಯಾಗಿ ಹೇಳುತ್ತಾನೆ. ಆದರೆ ರೋಮ್ಯಾಂಟಿಕ್ ಕವಿಗಳ ದೃಷ್ಟಿಯಲ್ಲಿ ಕಾವ್ಯ ಅನುಕರಣೆಯಷ್ಟೇ ಅಲ್ಲ, ಅದು ಪುನರ್‌ಸೃಷ್ಟಿ. ಈ ಪುನರ್ ಸೃಷ್ಟಿಗೆ–'ಇಮ್ಯಾಜಿನೇಷನ್' ಬಹುಮುಖ್ಯ. 'ಫ್ಯಾನ್ಸಿ', 'ಇಮ್ಯಾಜಿನೇಷನ್'– ಈ ಪದಗಳನ್ನು ಈ ಯುಗಕ್ಕೆ ಮುನ್ನವೇ ಕವಿಗಳೂ, ವಿಮರ್ಶಕರು ಬಳಸಿದ್ದರು. ಆದರೆ ಈ ಯುಗದಲ್ಲಿ ಈ ಶಬ್ದಗಳ ಅರ್ಥವೇ ಬದಲಾಯಿತು. ದೈಹಿಕ ಕಣ್ಣಿಗೆ ಕಾಣದುದನ್ನು ಕಾಣಿಸುವದು, ಹೊರಗಣ್ಣಿಗೆ ಕಾಣುವ ವಾಸ್ತವದಾಚೆ ಸರ್ವವ್ಯಾಪಿ ಆದರ್ಶವನ್ನು, ತತ್ತ್ವವನ್ನು, ಸತ್ಯವನ್ನು ಕಾಣುವ ಶಕ್ತಿ, ರೋಮ್ಯಾಂಟಿಕ್ ಕವಿಗೆ ಬಾಹ್ಯ ಜಗತ್ತು ಕ್ಷಣ–ಕ್ಷಣಕ್ಕೆ ಬದಲಾಗುತ್ತಿರುವ ಜಗತ್ತು. ಅದರಾಚೆ ಅವಿನಾಶಿಯಾದ ಸತ್ಯ, ಸೌಂದರ್ಯಗಳ ಜಗತ್ತಿದೆ. ಈ ಜಗತ್ತನ್ನು ಇಮ್ಯಾಜಿನೇಷನ್ ಕಾಣುತ್ತದೆ. 'ಇಮ್ಯಾಜಿನೇಷನ್'–ಸೃಜನ ಕ್ರಿಯೆಯ ಆಧಾರ ಮೂಲಶಕ್ತಿ.

ರೋಮ್ಯಾಂಟಿಕ್ ಸಾಹಿತ್ಯ ವ್ಯಕ್ತಿಯ ಘನತೆಯಲ್ಲಿ ನಂಬಿಕೆಯನ್ನು ಹೊಂದಿದೆ. ಮನುಷ್ಯ ರಾಜಕುಮಾರನಾಗಲಿ, ರೈತನಾಗಲಿ, ಸಿಪಾಯಿಯಾಗಲಿ, ಸಿರಿವಂತನಾಗಲಿ, ಮನುಷ್ಯ ಮನುಷ್ಯನೇ. ಬರ್ನ್ಸ್‌ನ 'A man is a man for all that' ಕವನದಲ್ಲಿ ಈ ಅಂಶಗಳು ವ್ಯಕ್ತವಾಗಿವೆ. ಇದಕ್ಕೆ ವ್ಯತಿರಿಕ್ತವಾಗಿ ಇದರ ಹಿಂದಿನ ನಿಯೋಕ್ಲಾಸಿಕ್ ಸಾಹಿತ್ಯ ಸಿರಿವಂತ, ವಿದ್ಯಾವಂತ, ಫ್ಯಾಸನ್ನಿನ ಜನರ ಬದುಕನ್ನು ವಸ್ತುವನ್ನಾಗಿವುಳ್ಳದ್ದಾಗಿತ್ತು. ರೋಮ್ಯಾಂಟಿಕ್ ಬಂಡಾಯದ ನಾಯಕರಾದ ವರ್ಡ್ಸವರ್ಥ

ಮತ್ತು ಕೋಲರಿಜ್‌ರು ಕಾವ್ಯಕ್ಕೆ ಜನಸಾಮಾನ್ಯರ ಬದುಕನ್ನು ಅಲೌಕಿಕ ಅನುಭವವನ್ನು ತಂದು ಕೊಟ್ಟರು.

ನಿಯೋಕ್ಲಾಸಿಕ್ ಯುಗ ಬುದ್ಧಿ ಶಕ್ತಿಗೆ ಪ್ರಾಧಾನ್ಯತೆ ದೊರೆತ ಯುಗ. ಕ್ರಿ.ಶ. ೧೬೬೦ರಲ್ಲಿ ಇಂಗ್ಲೆಂಡದ ಸಿಂಹಾಸನವೇರಿದ ಎರಡನೇ ಚಾರ್ಲ್ಸ್ ವಿಜ್ಞಾನಕ್ಕೆ ಪ್ರೋತ್ಸಾಹ ಕೊಟ್ಟ, ಕೋಪರ್ನಿಕಸ್, ಗೆಲಿಲಿಯೋ ಡೆಕಾರ್ತ್ ಮೊದಲಾದವರು ವಿಜ್ಞಾನದಲ್ಲಿ ಸಾಧನೆ ಮಾಡಿದ್ದರು. ಐಝುಕ್ ನ್ಯೂಟನ್‌ನ "ಪ್ರಿನ್ಸಿಪಿಯ"-ಗ್ರಂಥ ಕ್ರಿ.ಶ. ೧೬೮೭ರಲ್ಲಿ ಪ್ರಕಟವಾಯಿತು. ತತ್ವಶಾಸ್ತ್ರಜ್ಞ ಥಾಮಸ್ ಹಾಬ್ಸ್ (ಕ್ರಿ.ಶ. ೧೫೮೮-೧೬೭೯) ಮತ್ತು ಜಾನ್ ಲಾಕ್ (ಕ್ರಿ.ಶ. ೧೬೩೨-೧೭೦೪) ಇವರ ಪ್ರಭಾವದಿಂದಾಗಿ ಜನ ತರ್ಕ, ಜಿಜ್ಞಾಸೆ, ವೈಚಾರಿಕತೆಗಳತ್ತ ಹೊರಳಿದರು. ಜಗತ್ತು ಒಂದು ಯಂತ್ರದಂತೆ ಎಂಬ ಪರಿಸರದ ಕಾಲದಲ್ಲಿ ನಿಯೋಕ್ಲಾಸಿಕ್ ಸಾಹಿತ್ಯ ಸೃಷ್ಟಿಯಾಗಿತ್ತು. ಇದು ಮುಖ್ಯವಾಗಿ ಕಂಡದ್ದು ಬುದ್ಧಿಶಕ್ತಿಯನ್ನು. 'ಬುದ್ಧಿಯೇ ಜ್ಞಾನಕ್ಕೆ ರಾಜಮಾರ್ಗ' ಎಂಬ ಧೋರಣೆಯನ್ನು ಹೊಂದಿತ್ತು.

ಆದರೆ ರೋಮ್ಯಾಂಟಿಕ್ ಸಾಹಿತ್ಯ ಜಗತ್ತು ಒಂದು ಜೀವಂತ ಪ್ರಾಣಿಯಂತೆ, ಯಂತ್ರದಂತಲ್ಲ-ಎಂಬ ಮನೋಧರ್ಮದ್ದು. ನಮ್ಮ ಸುತ್ತಲಿನ ಜಗತ್ತನ್ನು ಗ್ರಹಿಸುವ ರೀತಿಗಳು ಹಲವಿವೆ. ಇಂದ್ರಿಯಗಳ ಮೂಲಕ ಗ್ರಹಿಸುತ್ತೇವೆ.' 'ಕಲ್ಪನೆ', 'ಅನುಭಾವ' ಇವೆಲ್ಲ ಜಗತ್ತನ್ನು ನಮ್ಮ ಅನುಭವಕ್ಕೆ ತಂದು ಕೊಡಬಲ್ಲವು-ಎಂಬುದು ರೋಮ್ಯಾಂಟಿಕ್ ಸಾಹಿತ್ಯದ ನಿಲುವು.

ನಿಯೋಕ್ಲಾಸಿಕ್ ಸಾಹಿತಿಗಳು ಸುತ್ತ ಕಾಣುವ ವಾಸ್ತವತೆಗೆ ಬದ್ಧರಾದವರು. ಆದರೆ ರೋಮ್ಯಾಂಟಿಕ್ ಸಾಹಿತಿಗಳು ಈ ವಾಸ್ತವವನ್ನು ಬದುಕಿನ ವಾಸ್ತವದ ಒಂದು ಭಾಗವಾಗಿಯಷ್ಟೇ ಕಂಡವರು. ಆದ್ದರಿಂದ ಕನಸುಗಳು ಅನುಭಾವ ಮಾನವಾತೀತವಾದದ್ದು ಎಲ್ಲ ಇವರಿಗೆ ವಾಸ್ತವತೆ. ನಿಯೋಕ್ಲಾಸಿಕ್ ಸಾಹಿತಿಗೆ ನಿಸರ್ಗವು ನಿರ್ಜೀವ ಯಂತ್ರದಂತೆ, ಜಡ, ವಾಸ್ತವವಾದದ್ದು. ರೋಮ್ಯಾಂಟಿಕ್ ಸಾಹಿತಿಗೆ ನಿಸರ್ಗವು ಜೀವಂತ ಪ್ರಾಣಿಯಂತೆ, ರಹಸ್ಯ ಶಕ್ತಿಗಳ ತವನಿಧಿ, ಚೈತನ್ಯದ ಅವಿರ್ಭಾವ, ಕವಿ ಪ್ರಕೃತಿಯನ್ನು ಪ್ರೀತಿಸಬೇಕು, ಆರಾಧಿಸಬೇಕು; ಇದನ್ನು ಒಂದು ಸೌಂದರ್ಯ ಧರ್ಮವನ್ನಾಗಿ ಮಾಡಿಕೊಂಡರು. ದೇವರು, ಪೂಜೆ ಮುಂತಾದ ಧಾರ್ಮಿಕ ಭಾವನೆಗಳನ್ನು ನಿಸರ್ಗದ ಕಡೆ ಹೊರಳಿಸಿದ್ದಾರೆ.

ರೋಮ್ಯಾಂಟಿಕ್ ಸಾಹಿತಿಗೆ ಮನುಷ್ಯನ ಶೈಶವ-ಬಾಲ್ಯಗಳಲ್ಲಿ ವಿಶೇಷ ಆಸಕ್ತಿ. ಇದು ಒಂದು ವಿಶಿಷ್ಟ ಘಟ್ಟ, ಮುಗ್ಧತೆಯ ತವರು. ನಿಯೋಕ್ಲಾಸಿಕ್ ಸಾಹಿತಿಗೆ ಇದರಲ್ಲಿ ವಿಶೇಷ ಆಸಕ್ತಿ ಇದ್ದಿರಲಿಲ್ಲ. ಅದು ಮನುಷ್ಯನ ಬದುಕಿನ ಪ್ರಾರಂಭದ ಘಟ್ಟ ಅಷ್ಟೇ.

ರೋಮ್ಯಾಂಟಿಕ್ ಎಂದರೆ, 'ಕನಸುಗಾರಿಕೆ, ಭಾವಾತೀರೇಕ, ಸ್ಫೂರ್ತಿಯನ್ನು ನೆಚ್ಚಿದ ಕಾವ್ಯವೆಂದೂ ಈ ಕಾವ್ಯದಲ್ಲಿ ಅಂತರ್ಮುಖತೆ, ಅನುಭಾವಿಕತೆಯ ಮನೋಧರ್ಮವು ವಾಸ್ತವಿಕತೆಯಿಂದ ದೂರಸರಿಯುವ ಪ್ರವೃತ್ತಿಯಾಗಿರುವದರಿಂದ ಇದು 'ಪಲಾಯನವಾದ' ಎಂದೂ ಖಂಡನೆಗೆ ಗುರಿಯಾಗಿದೆ. ರೋಮ್ಯಾಂಟಿಸಿಸಂ ಎಂದರೆ ಸುತ್ತಣ ಸಮಾಜದ ಹಾಗೂ ವಾಸ್ತವತೆಯ ಕ್ರೌರ್ಯದಿಂದ ನುಗ್ಗುನುರಿಯಾದ ಭಾವನೆಗಳಿಗೆ ಆಶ್ರಯ ಮತ್ತು ಪೋಷಣೆ ನೀಡುವ ಒಂದು ಸ್ವಪ್ನ ಪ್ರವೃತ್ತಿ"(ಶಿವರುದ್ರಪ್ಪ ಜಿ.ಎಸ್, ೧೯೭೬, ಪುಟ-೯)-ಎಂದು ವ್ಯಾಖ್ಯಾನಿಸಿದ್ದುಂಟು. ಅಲ್ಲದೇ ಪ್ರಸಿದ್ಧ ಕಾದಂಬರಿಕಾರ ಬಾಲ್‌ಜಾಕ್‌ನು-"ಈ ರೋಮ್ಯಾಂಟಿಕ್ ಸಾಹಿತಿಗಳು ಸಮ್ಮೋಹಕತೆಯ ಸಿಗರೇಟು ಸೇದುವ ಜನ"(ಶಿವರುದ್ರಪ್ಪ ಜಿ.ಎಸ್, ೧೯೭೬, ಪುಟ-೯) ಎಂದು ಟೀಕಿಸಿದ್ದಾನೆ.

ಏಕಾಂತತೆ, ನಿಸರ್ಗಪ್ರಿಯತೆ, ಅನುಭಾವಿಕತೆ, ಅಹಂನಿಷ್ಠತೆ, ಆದರ್ಶಪರತೆ-ಇವುಗಳೆಲ್ಲಾ ಕಾವ್ಯದ ದೋಷಗಳಾದರೆ ಬದುಕಿನ ದೋಷಗಳೂ ಆಗುವ ಸಾಧ್ಯತೆ ಇದೆ. ನಿಯೋಕ್ಲಾಸಿಕ್ ಕವಿಗೂ ರೋಮ್ಯಾಂಟಿಕ್ ಕವಿಗೂ ಇರುವ ವ್ಯತ್ಯಾಸವೆಂದರೆ, ನಿಯೋಕ್ಲಾಸಿಕ್ ಕವಿ 'ರಿಜನ್'-ಗೆ ಪ್ರಧಾನ ಸ್ಥಾನ ನಿಡಿದವನು. (Reason=ವಿವೇಚನಾ ಶಕ್ತಿ/ಬುದ್ಧಿ ತರ್ಕ/ವಿವೇಕ) ರೋಮ್ಯಾಂಟಿಕ್ ಕವಿ ಚಿಂತನೆಯನ್ನು ಬೌದ್ಧಿಕ ಅಂಶವನ್ನು ದೂರವಿಡದೇ, ಭಾವ-ಬುದ್ಧಿಗಳನ್ನು ಸಮ್ಮಿಲನಗೊಳಿಸಿದವನು. ಇನ್ನು ಈ ಯುಗದ ಭಾಷೆ, ಶೈಲಿ, ಛಂದಸ್ಸಿನ ಬಗ್ಗೆ ಹೇಳಬೇಕೆಂದರೆ, ಇದು ಭಾಷೆ, ಛಂದಸ್ಸಿನ ವಿಶಿಷ್ಟ ಪ್ರಯೋಗಶೀಲ ಯುಗ. ಈ ಯುಗದಲ್ಲಿ ಕಾವ್ಯವೇ ಪ್ರಮುಖವಾಗಿದೆ. ಕಾವ್ಯದಲ್ಲಿಯೇ ಭಾವಗೀತೆ ಪ್ರಧಾನ ಪ್ರಕಾರವಾಗಿ ಬಳಕೆಯಾಗಿದೆ. ಭಾವಗೀತೆಯ ಉಪಪ್ರಕಾರಗಳಾದ ಸುನೀತ, ಪ್ರಗಾಥ, ಶೋಕಗೀತೆ-ಮುಂತಾದವು ಬಳಕೆಯಾದವು. ಈ ಯುಗದ ಹೊಸರೂಪಗಳೊಂದಿಗೆ ಹಿಂದಿನ ಯುಗದ -ಸುನೀತ ಸ್ಪೇನ್ಸಿರಿಯನ್ ಸ್ಟಾಂಜ್, ಟರ್ಜರೀಮ, ಬ್ಯಾಲಡ್ ಮೀಟರ್- ಇವುಗಳೆಲ್ಲ ಪುನಃ ಬಳಕೆಯಾದವು. ಬ್ಲ್ಯಾಂಕವರ್ಸನ ವಿಸ್ತಾರವಾದ ಬಳಕೆಯಾಯಿತು. ಇದರ ಅಭಿವ್ಯಕ್ತಿ ರೀತಿ ವಿಶಿಷ್ಟವಾದುದು. ಪ್ರತಿಮೆ ಮತ್ತು ಸಂಕೇತಗಳ ಸಮೃದ್ಧತೆಯಿದೆ.

ತಮ್ಮ ಹಿಂದಿನ ಕವಿಗಳಿಗಿಂತ ಇವರು ಆಡು ಭಾಷೆಯ ಲಯಗಳನ್ನು ಹೆಚ್ಚಾಗಿ ಬಳಸುತ್ತಾರೆ. ಭಾಷೆಯ ಬಳಕೆಯಲ್ಲಿ ಇವರು ಶೇಕ್ಸಪೀಯರ್‌ನಿಗೆ ಹತ್ತಿರವಾಗುತ್ತಾರೆ. ನಿಯೋಕ್ಲಾಸಿಕ್ ಕಾವ್ಯದ ಶಿಸ್ತು; ಹೊರಗಿನಿಂದ ಬಂದ ಶಿಸ್ತಾದರೆ-ರೋಮ್ಯಾಂಟಿಕ್ ಕಾವ್ಯದ ಶಿಸ್ತು ಒಳಗಿನಿಂದ, ಅನುಭವದ ಸ್ವರೂಪದಿಂದ ರೂಪಿಸಿಕೊಂಡ ಶಿಸ್ತಾಗಿದೆ.

ಈ ಯುಗದ ಪ್ರಮುಖ ಸಾಧನೆಗಳೆಂದರೆ-ಪ್ರಯೋಗಶೀಲತೆ. ಸಾಹಿತ್ಯವು ತೆಗೆದುಕೊಂಡ ಅನುಭಾವದ ವಿಸ್ತಾರ, ಮನುಷ್ಯನನ್ನು-ಮನುಷ್ಯನನ್ನಾಗಿ ಕಾಣುವ ಪ್ರವೃತ್ತಿ, ವೈಯಕ್ತಿಕ ದರ್ಶನಕ್ಕೆ ಪ್ರಾಧ್ಯಾನ್ಯತೆ ಸಾಹಿತ್ಯದ ಭಾಷೆಯ ಸ್ವರೂಪದ ಮಾರ್ಪಾಡು-ಮುಂತಾದವುಗಳು ಪ್ರಮುಖವಾಗಿವೆ.

ಇದುವರೆಗೆ ಹೇಳಿದ ಇಂಗ್ಲೀಷ್ ರೋಮ್ಯಾಂಟಿಕ್ ಸಾಹಿತ್ಯದ ಸ್ವರೂಪ, ಲಕ್ಷಣಗಳು, ಮನೋಧರ್ಮ, ಈ ಕಾಲದ ಅಥವಾ ಈ ಪಂಥದ ಎಲ್ಲ ಲೇಖಕರ ಎಲ್ಲಾ ಕೃತಿಗಳಲ್ಲಿ ಕಡ್ಡಾಯವಾಗಿ ವ್ಯಕ್ತವಾಗಿದೆಯೆಂದು ಅರ್ಥವಲ್ಲ ಅಥವಾ ಇವರೆಲ್ಲಾ ಈ ಲಕ್ಷಣ ನಿಯಮಗಳನ್ನು ಮುಂದಿಟ್ಟುಕೊಂಡೇ ಅದಕ್ಕೆ ಹೊಂದುವಂತೆ ಸಾಹಿತ್ಯ ನಿರ್ಮಿಸಿದರೆಂದು ಅರ್ಥವಲ್ಲ, ಒಟ್ಟು ಸಾಹಿತ್ಯದ ಮೊತ್ತವನ್ನು ಅನುಸರಿಸಿ ಈ ಯುಗಧರ್ಮದ ಸ್ವರೂಪ ಲಕ್ಷಣಗಳನ್ನು ಹೇಳಲಾಗಿರುತ್ತದೆ. 'ರೋಮ್ಯಾಂಟಿಕ್'-ಎಂಬ ಮನೋಧರ್ಮವು ಕೇವಲ ೧೮-೧೯ನೇ ಶತಮಾನದ ಇಂಗ್ಲೀಷ್ ಸಾಹಿತ್ಯದಲ್ಲಿ ಮಾತ್ರ ಇತ್ತೆಂದೂ ಅದಕ್ಕಿಂತ ಪೂರ್ವದಲ್ಲಾಗಲೀ ಮತ್ತು ನಂತರದ ಕಾಲದಲ್ಲಾಗಲಿ ಜಗತ್ತಿನ ಯಾವುದೇ ಭಾಷೆಯ ಸಾಹಿತ್ಯದಲ್ಲಾಗಲಿ ಇದ್ದಿರಲಿಲ್ಲ. ಇರಬಾರದೆಂದಲ್ಲ. 'ರೋಮ್ಯಾಂಟಿಸಿಜಂ'-ಎಂಬ ಮನೋಧರ್ಮ ಎಲ್ಲ ಕಾಲದ, ಎಲ್ಲ ಭಾಷಾ ಸಾಹಿತ್ಯದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಪ್ರಕಟವಾಗಿರುವಂತದು ಮತ್ತು ಪ್ರಕಟವಾಗುವಂತಹದು, ಆದರೆ ಈಗ ನಾವು ಯಾವುದನ್ನು 'ರೋಮ್ಯಾಂಟಿಕ್ ಕಾವ್ಯ' ಎಂದು ಕರೆಯುತ್ತೇವೆಯೋ, ಆ ಕಾವ್ಯಗಳಲ್ಲಿ ಈ ಮನೋಧರ್ಮ ವಿಶೇಷವಾಗಿ, ಹೆಚ್ಚಿನ ಪ್ರಮಾಣದಲ್ಲಿ ಪ್ರದರ್ಶವಾಗಿದೆ ಎಂಬುದೇ ಇದರ ಅರ್ಥ.

ಕನ್ನಡ ನವೋದಯ ಕಾವ್ಯದಲ್ಲಿ ಇಂಗ್ಲೀಷ್ ರೋಮ್ಯಾಂಟಿಕ್ ಕಾವ್ಯದ ಲಕ್ಷಣ-ಮನೋಧರ್ಮಗಳನ್ನು ನೋಡಬಹುದಾಗಿದೆ. ಆದರೆ ಇದು ಕೇವಲ ಇಂಗ್ಲೀಷ್ ರೋಮ್ಯಾಂಟಿಕ್ ಕಾವ್ಯದ ಅನುಕರಣೆ ಅಲ್ಲ. ಇದಕ್ಕೆ ಸಾವಿರಾರು ವರ್ಷಗಳ ದೀರ್ಘ ಪರಂಪರೆ ಇಲ್ಲಿಯೇ ಇದೆ. ಪ್ರಕೃತಿಪ್ರಿಯತೆ, ಉಪಾಸಕ-ಸಾಧಕ ಮನೋಧರ್ಮ, ಏಕಾಂತತೆ, ಆದರ್ಶಪರತೆ-ಮುಂತಾದವುಗಳೆಲ್ಲವನ್ನು ಇಂಗ್ಲೀಷಿನ ರೋಮ್ಯಾಂಟಿಕ್ ಕಾವ್ಯದಿಂದಲೇ ಪಡೆಯಬೇಕಾಗಿದ್ದಿರಲಿಲ್ಲ. ಈ ಮೂಲ ದ್ರವ್ಯ ಭಾರತೀಯ ಸಾಹಿತ್ಯದಲ್ಲಿ ಅನುಭವರೂಪದಲ್ಲಿ ಇದೆ. ಆದರೆ ಇದನ್ನು ಅಭಿವ್ಯಕ್ತ ಪಡಿಸಲು ಪ್ರೇರಣೆ ನೀಡಿತು. ಅಷ್ಟೇ ಸೂಕ್ಷ್ಮವಾಗಿ ತುಲನಾತ್ಮಕವಾಗಿ ಅವಲೋಕಿಸಿದರೆ, "ಪಾಶ್ಚಾತ್ಯ ರೋಮ್ಯಾಂಟಿಕ್ ಕವಿಗಳಿಗೆ ಭಾರತೀಯ ಕವಿಗಳಿಗೆ ಇರುವಂತಹ ಸಹಸ್ರಾರು ವರ್ಷಗಳ ಅನುಭಾವಿಕ ಹಿನ್ನೆಲೆ ಇಲ್ಲದ, ಮಾರ್ಗದರ್ಶನಕ್ಕೆ ವಿಶೇಷವಾದ 'ವಿಭೂತಿ'ಗಳು ಇಲ್ಲದ ಪಾಶ್ಚಾತ್ಯ ವಿಮರ್ಶಕರಿಗೆ ಆ ಕವಿಗಳ ಕಾವ್ಯಾಭಿವ್ಯಕ್ತಿಗಳು ಅರ್ಥವಾಗದೇ ಹೋದ ಸಂದರ್ಭಗಳುಂಟು."(ಶಿವರುದ್ರಪ್ಪ ಜಿ.ಎಸ್, ೧೯೭೬, ಪುಟ-೮)

ಇಂಗ್ಲೀಷ್ ರೋಮ್ಯಾಂಟಿಕ್ ಕಾವ್ಯದಿಂದ ಅಭಿವ್ಯಕ್ತಿಯ ತಂತ್ರ-ಶೈಲಿ-ಪ್ರೇರಣೆ ಪಡೆದ ಕನ್ನಡ ಕವಿಗಳು ತಮ್ಮಲ್ಲಿಯ ಪರಂಪರಾಗತವಾದ ಅನುಭವವನ್ನು ಅಭಿವ್ಯಕ್ತ ಪಡಿಸುವಲ್ಲಿ ಇಂಗ್ಲೀಷ್ ರೋಮ್ಯಾಂಟಿಕ್ ಕವಿಗಳನ್ನು ಮೀರಿಸಿದರು. ಇಂಗ್ಲೀಷ್ ರೋಮ್ಯಾಂಟಿಕ್ ಕವಿಗಳು ಮುಟ್ಟದ ಎಷ್ಟೋ ಅನುಭವಸ್ತರಗಳನ್ನು ಇವರು ಮುಟ್ಟಿದರು. ಹೀಗೆ ಇಂಗ್ಲೀಷ್ ರೋಮ್ಯಾಂಟಿಕ್ ಕಾವ್ಯದಿಂದ ಹೊಸಗನ್ನಡ ಸಾಹಿತ್ಯ ಪಡೆದ ಪ್ರೇರಣೆ ಕೇವಲ ರೂಪಾಂತರಕ್ಕೆ ಸಂಬಂಧಿಸಿದ್ದಾಗಿದೆ. ತನ್ನ ಪರಿಸರ,

ಸಂಸ್ಕೃತಿಯ ಪರಂಪರೆಯ ಅನುಭವಗಳನ್ನು ಸ್ವತಂತ್ರವಾದ ರೀತಿ-ಮಾರ್ಗಗಳಲ್ಲಿ ಅಭಿವ್ಯಕ್ತಪಡಿಸಿರುವದರಿಂದ ಇದನ್ನು 'ರೋಮ್ಯಾಂಟಿಕ್ ಕಾವ್ಯ' ಎಂದು ಕರೆಯದೆ 'ನವೋದಯ ಕಾವ್ಯ' ಎಂದು ಕುವೆಂಪುರವರು ಕರೆದಿರುವುದು ಮತ್ತು ಈ ಹೆಸರೇ ಹೆಚ್ಚು ಬಳಕೆಯಲ್ಲಿ ಬಂದಿರುವದು ಔಚಿತ್ಯಪೂರ್ಣವಾಗಿದೆ.

**೩.೨. ನವೋದಯ ಸಾಹಿತ್ಯದ ಸ್ವರೂಪ-ಲಕ್ಷಣ-ಆಶಯಗಳು:**

ನವೋದಯದ ಪ್ರಮುಖ ಸಾಹಿತ್ಯ ಪ್ರಕಾರ ಕಾವ್ಯವಾದರೂ ಇದು ಕೇವಲ ಕಾವ್ಯಕ್ಕೆ ಮಾತ್ರ ಅನ್ವಯಿಸುವಂತಹದಲ್ಲ. ಕಥೆ, ಕಾದಂಬರಿ, ಮತ್ತು ನಾಟಕಗಳಿಗೂ ಅನ್ವಯಿಸುತ್ತದೆ.

ಈ ಕಾಲದ (ಈ ಚಳುವಳಿಯ) ಬೇರೆ ಬೇರೆ ಸಾಹಿತ್ಯ ಪ್ರಕಾರಗಳು ನವೋದಯದ ಪ್ರಧಾನ ಲಕ್ಷಣಗಳನ್ನು ಹೊಂದಿಯೂ ತಮ ತಮಗೆ ಪ್ರತ್ಯೇಕ ವೈಶಿಷ್ಟ್ಯಗಳನ್ನೂ ಹೊಂದಿರುವದರಿಂದ ಒಂದು ಸಾಹಿತ್ಯ ಪ್ರಕಾರದ ವಿಮರ್ಶೆ, ವಿಶ್ಲೇಷಣೆ ಮಾನದಂಡಗಳು ಇನ್ನೊಂದಕ್ಕೆ ಹೊಂದಲಾರವು; ಅದೇ ರೀತಿ ಈ ಕಾಲದ ಪ್ರಮುಖ ಸಾಹಿತಿಗಳು ನವೋದಯದ ಪ್ರಧಾನ ಲಕ್ಷಣಗಳನ್ನು ಹೊಂದಿರುವುದರ ಜೊತೆಗೆ ತಮ ತಮಗೆ ವಿಶಿಷ್ಟ ಲಕ್ಷಣಗಳನ್ನೂ ಹೊಂದಿದ್ದಾರೆ. ಹಾಗೆ ನೋಡಿದರೆ ಆಯಾ ಕಾಲದ ಪ್ರಮುಖ ಸಾಹಿತಿಗಳಲ್ಲಿಯ ಸಮಾನ ಲಕ್ಷಣಗಳನ್ನೇ ಆ ಕಾಲದ ಆ ಯುಗದ ಸಾಹಿತ್ಯದ ಪ್ರಧಾನ ಲಕ್ಷಣಗಳನ್ನಾಗಿ ಹೇಳಲಾಗಿದೆ. ಕನ್ನಡದ ನವೋದಯವು ಪ್ರತಿಭಟನೆಯಿಂದ ಹುಟ್ಟಲಿಲ್ಲ. ಈ ಸಾಹಿತ್ಯ ಚಳುವಳಿಯೊಂದನ್ನು ಹೊರತುಪಡಿಸಿ ಇತರ ಸಾಹಿತ್ಯಿಕ ಚಳುವಳಿಗಳು ತಮ್ಮ ಹಿಂದಿನ ಸಾಹಿತ್ಯ ಚಳುವಳಿಗಳಿಗೆ ಪ್ರತಿಭಟನೆ ವ್ಯಕ್ತಪಡಿಸಿ ಅನಾದರ, ಅನಾಸಕ್ತಿ ತೋರಿರುವದರಿಂದಲೇ ಹಲವಾರು ಕೊರತೆಗಳನ್ನು ಹೊಂದಿವೆ. ಆದರೆ ನವೋದಯ ಚಳುವಳಿಯೊಂದೇ ತನ್ನ ಹಿಂದಿನ ಸಾಹಿತ್ಯದ ಬಗ್ಗೆ ಪ್ರತಿಭಟನೆ ಅಥವಾ ವಿರೋಧವನ್ನು ಹೊಂದದೆ ಅದರಿಂದಲೂ ಉತ್ತಮಾಂಶಗಳನ್ನು ಸ್ವೀಕರಿಸಿದೆ. ನವೋದಯವು ಸಂಪ್ರದಾಯ ಮತ್ತು ಪರಂಪರೆಗಳ ನಡುವೆ ಸಮತೋಲನವನ್ನು ಹೊಂದಿದೆ.

ನವೋದಯ ಪರಂಪರೆಯ ಲೇಖಕರು ಸಾಹಿತ್ಯಿಕ ಸಂವಹನಕ್ಕೆ ಹೆಚ್ಚಿನ ಮಹತ್ವ ಕೊಟ್ಟರೂ, ಅಂತರಾಳದಲ್ಲಿ ಜೀವನಾನುಭವ ಮತ್ತು ಉದಾರವಾದಿ ಧೋರಣೆಗಳನ್ನು ಹೊಂದಿದ್ದರು. ಇವರು ಅನುಭವವನ್ನು ಅರ್ಥೈಸುವ ರೀತಿ ವೈಚಾರಿಕವಾದದ್ದಲ್ಲ ಭಾವನಾಮಯವಾದ, ಮಾನವತಾವಾದ ಮತ್ತು ಉದಾರವಾದಗಳಿಂದ ಕೂಡಿದ್ದಾಗಿದೆ. ಈ ಸಾಹಿತ್ಯ ಇಂದ್ರಿಯದ ಅನುಭವಗಳಿಗೆ, ಮಾನವ ಅಂತಃಕರಣಕ್ಕೆ ಸ್ವಪ್ನದರ್ಶನಗಳಿಗೆ ಬೆಲೆ ಕೊಡುತ್ತದೆ. ಇದನ್ನು ಮಾಸ್ತಿ, ಪುತಿನ, ಕುವೆಂಪು, ಬೇಂದ್ರೆ- ಮುಂತಾದ ಪ್ರಮುಖರಲ್ಲಿ ಕಾಣಬಹುದು.

ನವೋದಯ ಸಾಹಿತ್ಯದಲ್ಲಿ ನಮಗೆ ಕಂಡು ಬರುವ ಎರಡು ಪ್ರಮುಖ ಅಂಶಗಳೆಂದರೆ-ಒಂದು ಬಾಳು ಸ್ವೀಕಾರಾರ್ಹ, ಮತ್ತೊಂದು ಆಧ್ಯಾತ್ಮಿಕತೆ. ಈ ಸಾಹಿತ್ಯವು ಮನುಷ್ಯನು ತನ್ನ ಜೀವನವನ್ನು ಸಾರ್ಥಕಮಾಡಿಕೊಳ್ಳಬಹುದಾದ ಮಾರ್ಗವನ್ನು ಕಂಡುಕೊಳ್ಳಲು ಯತ್ನಿಸಿತು. ದೇವರ ಮೌಲ್ಯಗಳ, ಶಕ್ತಿಗಳ ಬಗೆಗೂ ವಿಶಿಷ್ಟವಾಗಿ ಅರ್ಥೈಸಿದ್ದಾರೆ. ಇವರಿಗೆ ತಾಯ್ನಾಡು ಮತ್ತು ತಾಯಿ ದೇವರಿಗಿಂತಲೂ ಮಿಗಿಲಾಗಿವೆ. ಪ್ರೇಮ-ಸ್ನೇಹಗಳು ಶ್ರೇಷ್ಠ ಮೌಲ್ಯಗಳಾದವು. ಅನುಕಂಪ, ತ್ಯಾಗ, ಮಾನವಸೇವೆ ಇವು ಮನುಷ್ಯನನ್ನು ಉದ್ಧರಿಸುವ ಶಕ್ತಿಗಳಾದವು.

ಇದರಲ್ಲಿ 'ಸಿನಿಸಿಜಂ' ಎಂಬುದು ಇಲ್ಲವೇ ಇಲ್ಲ. ಒಟ್ಟಿನಲ್ಲಿ ಆಶಾವಾದ ಮತ್ತು ಆದರ್ಶಪರತೆ ಇರುವದು. ಅಂದರೆ ನವೋದಯ ಸಾಹಿತಿಗಳು ಸಮಾಜದ, ಬದುಕಿನ ದೇಶದ ವ್ಯವಸ್ಥೆಯ ಲೋಪದೋಷ-ನ್ಯಾಯಗಳನ್ನು ಗಮನಿಸಲಿಲ್ಲವೆಂದರ್ಥವಲ್ಲ. ಅವುಗಳಿಗೆ ಕಟುಟೀಕೆ, ವಿಡಂಬನೆ, ಪ್ರತಿಭಟನೆಗಳನ್ನು ವ್ಯಕ್ತಪಡಿಸಿದ್ದಾರೆ. ಆದರೂ ಇಡಿಯಾಗಿ ಈ ಸಾಹಿತ್ಯ ಗಮನಿಸಿದಾಗ "ಬಾಳು ಅರ್ಥಪೂರ್ಣ ಎಂಬ ಆಸ್ತಿ ಭಾರದ ಮೇಲೆ ಈ ಸಾಹಿತ್ಯ ನಿಂತಿದೆ." (ಶೇಷಗಿರಿರಾವ್: ಎಲ್.ಎಸ್. ೧೯೮೮, ಪುಟ-೫೮)

ನವೋದಯದ ಬಹಳಷ್ಟು ಸಾಹಿತಿಗಳು ದೇವರಲ್ಲಿ ನಂಬಿಕೆ ಇಟ್ಟವರಾಗಿದ್ದಾರೆ. ಆಧ್ಯಾತ್ಮಿಕತೆಯ ಮನೋಭಾವನೆಯನ್ನು ಹೊಂದಿದ್ದಾರೆ. ಇದನ್ನು ಮಾಸ್ತಿ, ಡಿವಿಜಿ, ಬಿಎಂಶ್ರೀ, ಕುವೆಂಪು, ಗೋವಿಂದಪೈ-ಮುಂತಾದ ಪ್ರಮುಖ ಸಾಹಿತಿಗಳ ಕೃತಿಗಳಲ್ಲಿ ಕಾಣಬಹುದು. ಆದರೆ ಇದಕ್ಕೆ ವ್ಯತಿರಿಕ್ತವಾಗಿ ನವೋದಯದ ಕೆಲವೇ ಕೆಲವು ಸಾಹಿತಿಗಳಲ್ಲಿ ಆಧ್ಯಾತ್ಮಿಕತೆ ಇಲ್ಲ. ಅಂಥವರಲ್ಲಿ ಪ್ರಮುಖರಾದವರೆಂದರೆ-ಶಿವರಾಮ ಕಾರಂತ, ಕೈಲಾಸಂ, ಶ್ರೀರಂಗರು- ಇಂಥಹ ಕೆಲವರನ್ನು ಹೊರತು ಪಡಿಸಿದರೂ "ಒಟ್ಟಿನಲ್ಲಿ ಇದು ಆಧ್ಯಾತ್ಮಿಕತೆಯ ಪರಿಸರದಲ್ಲಿ ಉಸಿರಾಡುವ ಸಾಹಿತ್ಯ"(ಶೇಷಗಿರಿರಾವ್: ಎಲ್.ಎಸ್. ೧೯೮೮, ಪುಟ-೬೫)-ಎಂದೂ ಅಭಿಪ್ರಾಯ ಪಡಲಾಗಿದೆ.

ನವೋದಯ ಸಾಹಿತ್ಯದ ಪ್ರಧಾನ ಲಕ್ಷಣಗಳಲ್ಲಿ ಇನ್ನೊಂದು ಪ್ರಮುಖವಾದುದೆಂದರೆ, ಪರಕೀಯರ ಆಡಳಿತದಿಂದ ಅಭಿಮಾನ ಶೂನ್ಯರಾದ ಜನರಲ್ಲಿ ನಮ್ಮ ನಾಡು-ನುಡಿ, ಸಂಸ್ಕೃತಿ, ಚರಿತ್ರೆಗಳನ್ನು ವೈಭವೀಕರಿಸಿ ಜನರಲ್ಲಿ ನಮ್ಮದೆನ್ನುವದರ ಬಗ್ಗೆ, ಅಭಿಮಾನ ಮೂಡಿಸುವದರೊಂದಿಗೆ ಸ್ವಾತಂತ್ರ್ಯ ಚಳುವಳಿಯನ್ನು ಕುರಿತು ಬರೆದಿದ್ದಾರೆ. ಸ್ವಾತಂತ್ರ್ಯ ಚಳುವಳಿಯೊಂದಿಗೆ ಕನ್ನಡಾಭಿಮಾನವನ್ನು ವ್ಯಕ್ತಪಡಿಸಿದ್ದು ರಾಷ್ಟ್ರೀಯತೆಯ ಅಂಶವಾಗಿಯೇ ಹೊರತು ಪ್ರತ್ಯೇಕತೆಗಾಗಿ ಅಲ್ಲ.

ನವೋದಯದವರ ಆದರ್ಶ, ಟೊಳ್ಳು ಆದರ್ಶವಲ್ಲ; ರಾಮಕೃಷ್ಣ ಪರಮಹಂಸ, ವಿವೇಕಾನಂದ, ರವೀಂದ್ರನಾಥ ಟ್ಯಾಗೋರ್, ಅರವಿಂದ, ಮಹಾತ್ಮಾಗಾಂಧಿ-ಮುಂತಾದವರು ಇವರಿಗೆ ಆದರ್ಶ ಪ್ರಾಯರಾಗಿದ್ದರು. ಈ ಕಾಲದ ಸಾಹಿತಿಗಳು ಇವರನ್ನು ಕುರಿತು ಬರೆದಿದ್ದಾರೆ.

ಇದರ ನಂತರ ಬಂದ ನವ್ಯ ಸಾಹಿತ್ಯ ನಗರದ 'ಸೋಫಿಸ್ಟಿಕೇಟೆಡ್' ವರ್ಗದ ಸಾಹಿತ್ಯವಾದರೆ, ನವೋದಯ ಸಾಹಿತ್ಯ ಮಧ್ಯಮ ವರ್ಗದ ಸಾಹಿತ್ಯವಾಯಿತು. ಇದರ ವ್ಯಾಖ್ಯಾನವನ್ನು ಎಲ್.ಎಸ್. ಶೇಷಗಿರಿರಾವರು ಹೀಗೆ ಮಾಡುತ್ತಾರೆ.

"ನವೋದಯ ಸಾಹಿತ್ಯ ಗೌಡರ ಮಲ್ಲಿಯಲ್ಲಿ ಘನತೆಯನ್ನು ಗುರುತಿಸಬಲ್ಲದು, ಕರಿಸಿದ್ದನ ಮರಣಕ್ಕೆ ಅವನ ಹೆಂಡತಿಯ ಸಂಕಟಕ್ಕೆ ದುಃಖಿಸಬಲ್ಲುದು......ಹೊಲೆಯ ಚೋಮನ ನೋವು ಈ ಕಾಲದ ಕಾದಂಬರಿಗೆ ವಸ್ತುವಾಗಬಲ್ಲದು......ಪರಕ್ಕೆ ಇಹ ಒಂದು ದಾರಿ ಎಂದು ಕಾಣದೆ, ಇದಕ್ಕೆ ಪರ......ಕಮಾನನ್ನು ಕಟ್ಟಿಸಿದ್ದರೂ ಇದರಲ್ಲಿ ಗಾಢವಾದ ಆಸಕ್ತಿ ಇರುವ ಜೀವನದ ಶ್ರದ್ಧೆ ಇರುವ ಸಾಹಿತ್ಯ ಇದು."(ಶೇಷಗಿರಿರಾವ್: ಎಲ್.ಎಸ್. ೧೯೮೮, ಪುಟ-೫೪)

ಇಡಿಯಾಗಿ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯನ್ನು ಗಮನಿಸಿದಾಗ ಈ ಯುಗದ ವಿಶಿಷ್ಟ ಸಾಧನೆಗಳನ್ನು ಗುರುತಿಸಬಹುದಾಗಿದೆ. ನವೋದಯ ಸಾಹಿತಿಗಳು ಕಥೆ, ಕಾದಂಬರಿ, ಕವಿತೆ, ನಾಟಕ, ಮಹಾಕಾವ್ಯ, ಭಾವ ಪ್ರಬಂಧ, ವಿಚಾರ ಪ್ರಬಂಧ, ಜೀವನಚರಿತ್ರೆ, ಪ್ರವಾಸ ಕಥನ-ಮುಂತಾದ ಸಾಹಿತ್ಯ ಪ್ರಕಾರಗಳನ್ನು ರೂಪಿಸಿಕೊಂಡರೂ, ಹಳೆ ಬೇರು-ಹೊಸ ಚಿಗುರುಗಳಂತೆ ಸಮನ್ವಯಸಿಕೊಂಡು ಛಂದಸ್ಸಿನಲ್ಲಿಯೂ ಸರಳ ರಗಳೆ, ಮಹಾಛಂದಸ್ಸು, ಮುಡಿ, ಪದ್ಮಗಣ- ಪ್ರಾಚೀನ ರೂಪಗಳ ಅಳವಡಿಕೆ-ಮುಂತಾದ ಹೊಸ ಹೊಸ ಲಯಗಳನ್ನು ಸೃಷ್ಟಿಸಿಕೊಂಡರು. ಇದು ಪ್ರಯೋಗಗಳ ಯುಗ, ಅಂತೆಯೇ ಎಚ್.ಎಸ್. ರಾಘವೇಂದ್ರರಾವ್ ಅವರು 'ನವೋದಯ ಸಾಹಿತ್ಯ ಚಳುವಳಿ'-ಎಂಬ ಲೇಖನದಲ್ಲಿ "ವರ್ತಮಾನದ ಸಸಿಗಳನ್ನು ಮಾತ್ರವಲ್ಲ, ಭವಿಷ್ಯದ ಬೀಜಗಳನ್ನು ನೆಡುವುದರಲ್ಲಿಯೂ ಯಶಸ್ವಿಯಾದರು. ತಮ್ಮ ಕಾಲಕ್ಕಿಂತ ಮೊದಲೇ ಬಂದ ಪ್ರಯೋಗಗಳು ಸೂಕ್ತ ಸನ್ನಿವೇಶಕ್ಕಾಗಿ ಕಾದವು, ಉಳಿದವು ಆ ಕ್ಷಣದಲ್ಲೇ ಫಲಿಸಿದವು." (ಶಿವರುದ್ರಪ್ಪ ಜಿ.ಎಸ್, (ಸಂ): ಕನ್ನಡ ಸಾಹಿತ್ಯ ಸಂದರ್ಭ, ಪುಟ-೩೮) ಎಂದು ಹೇಳುತ್ತಾರೆ. ಬಿ.ಎಂ. ಶ್ರೀಯವರ 'ಇಂಗ್ಲೀಷ್ ಗೀತೆ'ಗಳಲ್ಲಿ ಪ್ರಯೋಗಗಳ ಗಣಿಯೇ ಇದೆ. ಇದನ್ನು ಆಧುನಿಕ ಕನ್ನಡದ 'ಕವಿರಾಜಮಾರ್ಗ'-ವೆಂದು ಕರೆಯುತ್ತಾರೆ.

ಅದುವರೆಗಿನ ಸಾಹಿತ್ಯ ರಾಜ-ಮಹಾರಾಜರ, ಐತಿಹಾಸಿಕ ಧಾರ್ಮಿಕ, ಪೌರಾಣಿಕ ವಸ್ತುಗಳನ್ನೊಳಗೊಂಡಿತ್ತು. ಆದರೆ ಈ ಯುಗದ ಸಾಹಿತಿಗಳು, ವಾಸ್ತವಿಕತೆಯನ್ನು, ಸಮಕಾಲೀನ ಬದುಕಿನ ಸಾಮಾನ್ಯ ವ್ಯಕ್ತಿಯ ಬದುಕನ್ನೂ ಸಾಹಿತ್ಯದ ವಸ್ತುವಾಗಿ ಸ್ವೀಕರಿಸಿದ್ದು ಮುಂದಿನ ಸಾಹಿತ್ಯ ಚಳುವಳಿಗೆ ಒಂದು ಪರಂಪರೆಯನ್ನು ಹಾಕಿಕೊಟ್ಟಿದ್ದು ಈ ಯುಗದ ದೊಡ್ಡ ಸಾಧನೆ.

ಒಟ್ಟಿನಲ್ಲಿ ನವೋದಯ ಸಾಹಿತ್ಯದ ಲಕ್ಷಣಗಳನ್ನು ಈ ರೀತಿ ಸಂಗ್ರಹಿಸಿ ಗುರುತಿಸಬಹುದಾಗಿದೆ:

೧. ಕಾವ್ಯವನ್ನೇ ಕುರಿತು ಹೇಳುವದಾದರೆ ಇದು ಭಾವ ಪ್ರಧಾನವಾದುದು.

೨. ಕಾವ್ಯವನ್ನೇ ಅನುಲಕ್ಷಿಸಿ ಹೇಳಬೇಕಾದ ಇನ್ನೊಂದು ಲಕ್ಷಣ ಮಾಧುರ್ಯತೆ ಮತ್ತು ಪ್ರಾಸಪ್ರಿಯತೆ.

೩. ನವೋದಯ ಈ ಸಾಹಿತ್ಯ ದೇಶಪ್ರೇಮ, ನಾಡು-ನುಡಿ-ಸ್ವಾತಂತ್ರ್ಯ ಚಳುವಳಿಯ ಬಗೆಗೆ ಭಕ್ತಿ ಶ್ರದ್ಧೆಯನ್ನಿಟ್ಟುಕೊಂಡ ಉಜ್ವಲ ರಾಷ್ಟ್ರೀಯತೆಯ ಮನೋಭಾವವುಳ್ಳದ್ದು.

೪. ಬಾಳು ಸ್ವೀಕಾರಾರ್ಹವಾದುದು, ಬದುಕಿನ ಶ್ರೇಯಸ್ಸಿನ ಬಗೆಗೆ ನಂಬಿಕೆಯುಳದ್ದು.

೫. ಆದರ್ಶ ಬೋಧನೆಯು ಇವರ ಜೀವಾಳವಾಯಿತು. ಆದ್ದರಿಂದ ನವೋದಯ ಸಾಹಿತಿಗಳನ್ನು ಆದರ್ಶ ಪ್ರಿಯರೆಂದು ಕರೆಯಲಾಯಿತು.

೬. ಆಧ್ಯಾತ್ಮಿಕತೆಯು ನವೋದಯ ಸಾಹಿತ್ಯದ ಪ್ರಮುಖ ಲಕ್ಷಣವೆನಿಸಿತು. ಋಷಿ ಹೃದಯವುಳ್ಳವನೇ ಸಾಹಿತ್ಯ ನಿರ್ಮಿಸಬಲ್ಲನೆಂಬ ಧ್ಯೇಯವನ್ನು ಹೊಂದಿದೆ.

೭. ನವೋದಯ ಸಾಹಿತಿಗಳು ನಿಸರ್ಗಪ್ರಯರು, ನಿಸರ್ಗದ ಆರಾಧಕರು. ನಿಸರ್ಗಕ್ಕೂ-ಮಾನವನಿಗೂ ಸಂಬಂಧವನ್ನು ಕಲ್ಪಿಸಿದರು.

೮. ಭಾರತೀಯ ಮೌಲ್ಯ ಪ್ರಜ್ಞೆಯುಳ್ಳದ್ದು.

೧೦. ಜೀವನ ಪ್ರೀತಿ ಮನೋಧರ್ಮವುಳ್ಳದ್ದು.

೧೧. ಆಶಾವಾದ ಧೋರಣೆಯುಳ್ಳದ್ದು.

ನವೋದಯ ಸಾಹಿತ್ಯದ ಕಾವ್ಯ ಪ್ರಕಾರದಲ್ಲಿ ಪಂಜೆ ಮಂಗೇಶರಾಯ, ಗೋವಿಂದ ಪೈ, ಬಿ.ಎಂ.ಶ್ರೀ... ಕಡೆಂಗೋಡ್ಲು ಶಂಕರಭಟ್ಟ, ಮಾಸ್ತಿ, ಡಿ.ವಿ.ಜಿ. ಆನಂದಕಂದ, ಕುವೆಂಪು, ಬೇಂದ್ರೆ ಪು.ತಿ.ನ. ಜಿ.ಪಿ. ರಾಜರತ್ನಂ, ಸಿದ್ಧಯ್ಯ ಪುರಾಣಿಕ, ಎಂ.ವಿ. ಸೀತಾರಾಮಯ್ಯ, ಚನ್ನವೀರಕಣವಿ-ಮುಂತಾದ ಕವಿಗಳು ಸಮೃದ್ಧವಾಗಿ ಕಾವ್ಯವನ್ನು ಕೃಷಿಗೈದಿದ್ದಾರೆ.

**ನವೋದಯ ಸಾಹಿತ್ಯದ ಆಶಯಗಳು:**

ನವೋದಯ ಪರಂಪರೆಯಲ್ಲಿ ಬರೆದ ಕವಿಗಳ ಕಾವ್ಯ ಪರಂಪರೆಯಲ್ಲಿ ದೇಶಭಕ್ತಿಯು ಒಂದು ಪ್ರಮುಖ ಧಾರೆಯಾಗಿ ಪ್ರವಹಿಸಿರುವುದು ಕಂಡುಬರುತ್ತದೆ. ನವೋದಯ ಸಾಹಿತ್ಯ ಪ್ರಕಾರಗಳಲ್ಲಿ ಕಾವ್ಯವೇ ಹುಲುಸಾಗಿ ಬೆಳವಣಿಗೆಯಾಯಿತು. ರಾಷ್ಟ್ರೀಯತೆಯ ಅಂಶಗನ್ನೊಳಗೊಂಡ ಕಾವ್ಯಗಳು ವಿಫುಲವು ವೈವಿದ್ಯಮಯವು ಆಗಿವೆ. ಕವಿಗಳು ತಮ್ಮ ಕಾವ್ಯಗಳಲ್ಲಿ ದೇಶದಲ್ಲಿ ನಡೆಯುವ ಅನೇಕ ಘಟನೆಗಳ ಮೂಲಕ ತಮ್ಮ ಭಾವನೆಗಳನ್ನು ಸೂಸಿದ್ದಾರೆ. ಪ್ರತಿಯೊಬ್ಬ ಪ್ರಜೆಗೆ ದೇಶಭಕ್ತಿ ಮೂಲವಾದ ಗುಣ ಇರಲೇಬೇಕು ಅನ್ನವುದು ಇವರ ಕಾವ್ಯಗಳಲ್ಲಿ ಕಂಡುಬರುವುದು. ನಾನು ನಮ್ಮ ದೇಶ ಇದರ

ಬಗ್ಗೆ ಅಭಿಮಾನವಿರಬೇಕು. ಮನುಕುಲ ಒಂದೆಂಬ ಮತ್ತು ದೇಶಕ್ಕೆ ಗೌರವದ ಭಾವನೆಗಳು ಇಂಥ ಪ್ರೇರಕ ಶಕ್ತಿಯನ್ನು ಮೂಡಿಸಲು ಅನೇಕ ಕವಿಗಳು ತಮ್ಮ ಕವನಗಳಲ್ಲಿ ಅಭಿವ್ಯಕ್ತಿಸಿದ್ದುಂಟು.

ನವೋದಯ ಕವಿಗಳು ದೇಶದ ಸಿರಿ-ಸಂಪತ್ತು ದೇಶದ ಪರಂಪರೆ, ಇತಿಹಾಸ ಚರಿತ್ರೆಗಳ ಮೂಲಕ ತಮ್ಮ ಕಾವ್ಯಗಳಲ್ಲಿ ದೇಶಪ್ರೇಮವನ್ನು ವ್ಯಕ್ತಪಡಿಸಿರುವರು. ಕವಿಗಳ ತಮ್ಮ ಆಸೆ, ಆಕಾಂಕ್ಷೆಗಳು ಸರ್ವಸ್ವವೂ ಭಾರತವೇ ಆಗಿದೆ. ತನು ಮನ-ಹೃದಯಗಳಲ್ಲಿ ಸದಾಶ್ರದ್ಧೆ, ಭಕ್ತಿಯಿಂದ ಆರಾಧಿಸುವ ದೈವವೂ ಆಗಿರುವುದನ್ನು ತಮ್ಮ ಕಾವ್ಯಗಳಲ್ಲಿ ವ್ಯಕ್ತಪಡಿಸಿರುವರು. ಗಿರಿ-ವನ-ಕಾನನ, ಕಡಲ ತಡಿ-ನದಿ-ಸರೋವರ, ಸಿರಿ ಸಮೃದ್ಧಿಯಿಂದ ಕೂಡಿದ ಈ ನಮ್ಮ ದೇಶದ ಭೂಮಿ ಸ್ವರ್ಗಕ್ಕೂ ಮಿಗಿಲಾಗಿದೆ. ಕವಿಗಳ ಮನೋಭಾವನೆ ಹೇಗೆಂದರೆ ತಾವು ಪುನಃ ಹುಟ್ಟುವುದಾದರೆ, ಏನೇ ಆಗಿ ಹುಟ್ಟಲಿ ಈ ದೇಶದ ಭವ್ಯ ಸಂಸ್ಕೃತಿಯ ಮಡಿಲಲ್ಲಿ ಹುಟ್ಟಬೇಕೆನ್ನುವ ಆಕಾಂಕ್ಷೆಯನ್ನು ಹೊಂದಿದವರಾಗಿದ್ದಾರೆ.

**೩.೩. ದೇಶಭಕ್ತಿ ಪರಿಕಲ್ಪನೆ :**

**ದೇಶಭಕ್ತಿ ಪದದ ಅರ್ಥ:**

'ದೇಶ' ಎಂಬ ಶಬ್ದ ಸಂಸ್ಕೃತ ಪದವಾಗಿದ್ದು, ನಾಡು, ಸ್ಥಳ, ಕ್ಷೇತ್ರ, ವಿಭಾಗ, ಎಂಬ ಅರ್ಥಗಳಿವೆ. (ಸಂಕೇಶ್ವರ.ಬಿ.ಜಿ. ಕೋಶದಲ್ಲಿ ಪುಟ ೪೨ ರಲ್ಲಿ) ಎಲ್.ಎಸ್. ಶೇಷಗಿರಿರಾವ್ ಅವರ (ಸುಭಾಸ ನಿಘಂಟುವಿನಲ್ಲಿ ಪುಟ ೩೪೪ ರಲ್ಲಿ) ನಾಮಪದವೆಂದು ಸೂಚಿಸಿ ಸ್ಥಳ, ಜಾಗ, ಪ್ರದೇಶ Region, Place, ನಾಡು ಸೀಮೆ, Country, ಮೊದಲಾದ ಅರ್ಥಗಳನ್ನು ಕೊಟ್ಟಿದ್ದಾರೆ

ಈ ಪದಗಳಿಗೆ ಮುಂದುವರೆದು ದೇಶ ದೇಶಭಾಷೆ ದೇಶಾಭಿಮಾನ, ದೇಶತ್ಯಾಗ, ದೇಶದ್ರೋಹಿ, ದೇಶಪದ್ಧತಿ, ದೇಶ ಪರ್ಯಟನ, ದೇಶಭಕ್ತ, ದೇಶಭಕ್ತಿ, ಮುಂತಾದ ಅರ್ಥಗಳು ಲಭ್ಯವಾಗುತ್ತವೆ.

ಈ ಎಲ್ಲ ಅರ್ಥವಿವರಣೆಯ ಆಧಾರ ಮೇಲಿಂದ ಪ್ರಸ್ತುತವಾಗಿನಾವು ಗ್ರಹಿಸಬೇಕಾದುದೆಂದರೆ 'ಒಂದು ಪ್ರದೇಶ' ಎಂಬುದನ್ನು ಮಾತ್ರ, ಇನ್ನು ಭಕ್ತಿ ಎಂದರೆ ಸಾಮಾನ್ಯ ಅರ್ಥದಲ್ಲಿ ನಿಷ್ಠೆ ಎಂದು ಹೇಳಬಹುದು. ಇಲ್ಲಿ ದೇಶಭಕ್ತಿ ಎಂದರೆ ಒಂದು ಪ್ರದೇಶಕ್ಕೆ ನಿಷ್ಠೆಯಾಗಿರುವುದು ಎಂದಾಗುತ್ತದೆ. ದೇಶಪ್ರೇಮ, ರಾಷ್ಟ್ರೀಯತೆ, ರಾಷ್ಟ್ರಪ್ರಜ್ಞೆ ಎಂಬಿತ್ಯಾದಿ ಪದಗಳೂ ಸಹ ದೇಶಭಕ್ತಿ ಎಂಬುದರಲ್ಲಿಯೆ ಲೀನವಾಗಬಹುದಾದ ಪರ್ಯಾಯ ಪದಗಳೆಂದು ಇಲ್ಲಿ ಗ್ರಹಿಸಿದರೆ ಹೆಚ್ಚು ಸೂಕ್ತ. ಭಾವೈಕ್ಯತೆ ಎಂಬುದು ಇವುಗಳ ಒಟ್ಟು ಫಲಿತಾಂಶವಾಗಿದೆ.

ದೇಶದ ಸ್ವಾತಂತ್ರ್ಯ ಮತ್ತು ನವೋದಯ ಕಾಲ ಎಂಬ ಪರಿಕಲ್ಪನೆಯು ಭಾರತಾಂತರ್ಗತ ಕರ್ನಾಟಕವನ್ನು ಪ್ರತಿನಿಧಿಸುವಂತಹದ್ದು ಅದು ಆಧುನಿಕ ಭಾರತದ ಸವಿಸ್ತಾರವಾದ ಚರಿತ್ರೆ ಮತ್ತು ಸಾಂಸ್ಕೃತಿಕ ಹಿನ್ನಲೆಯಲ್ಲಿ ಸಾಹಿತ್ಯ ಭೂಮಿಕೆಯನ್ನು ಸಮನ್ವಯ ನೆಲೆಯಲ್ಲಿ ಪರಿಭಾವಿಸುವ ಅನಿವಾರ್ಯತೆ ನವೋದಯ ಕಾಲಕ್ಕಿದೆ. ಪಾಶ್ಚಾತ್ಯ ಸಾಹಿತ್ಯ ಬಿಂಬಿಸಿದ ಹೊಸತನ ಮತ್ತು ಭಾರತೀಯ ಪರಂಪರೆ ಮುಖಾಮುಖಿಯಾಗುವ ಒಂದು ಐತಿಹಾಸಿಕ ಸಂಗತಿಯಾಗಿದೆ. ಇದರಿಂದಲೇ ಹಿಂದೆಂದೂ ಪಡೆಯದಂಥ ವೈವಿಧ್ಯತೆ ನವೋದಯ ಸಾಹಿತ್ಯ ಪ್ರಕಾರದಲ್ಲಿ ಸೃಷ್ಟಿಗೊಂಡಿವೆ.

ಬ್ರಿಟೀಷರ ಆಕ್ರಮಣ ಪ್ರಾದೇಶಿಕವಾಗಿ ದೇಶೀಯ ರಾಜರ ಪ್ರತಿರೋಧ, ದೇಶದ ಸ್ವಾತಂತ್ರ್ಯಹರಣ, ಐಕ್ಯಮತದಿಂದ ಸಶಸ್ತ್ರ ಹೋರಾಟ ಮತ್ತು ಅಹಿಂಸಾತ್ಮಕ ಹೋರಾಟದ ವಿವಿಧ ಸ್ತರಗಳನ್ನು ನವೋದಯ ಸಾಹಿತ್ಯದಲ್ಲಿ ಕಾಣುತ್ತೇವೆ. ನವೋದಯ ಕವಿಗಳ ಕಾವ್ಯಗಳಲ್ಲಿ ದೇಶಭಕ್ತಿ ಮೂಲವಾದ ವಸ್ತು ವಿಶ್ಲೇಷಣೆಗಳು ಮೈರೋಮಾಂಚನಗೊಳಿಸುತ್ತವೆ. ಒಂದೊಂದು ದೇಶದ ಒಂದೊಂದು ಜನವಿಭಾಗವೂ ಸಮಸ್ತ ಮಾನವಲೋಕದ ಭಾಗವೆಂದೇ ಭಾವಿಸಿದಾಗ, ಯಾವುದರ ಪುರೋಭಿವೃದ್ಧಿಗೆ ಯಾವುದು ಪೂರಕ, ಯಾವುದು ತಾರಕ–ಎಂಬ ಕಲ್ಪನೆ ಸ್ಪಷ್ಟವಾಗುತ್ತದೆ. ಮಾನವ ಜನಾಂಗದ ಒಂದು ಭಾಗವೇ ಆದ ತಮ್ಮ ದೇಶಬಾಂಧವರ ಸಾಮಾಜಿಕ ಮತ್ತು ಸಾಂಸ್ಕೃತಿಕ ಚಿಂತನಗಳನ್ನು ಕಾವ್ಯಗಳಲ್ಲಿ ಕಾಣಬಹುದು.

ದೇಶದ ಸಮಸ್ತ ಸಮಾಜದ ಇಕ್ಕಟ್ಟು ಬಿಕ್ಕಟ್ಟುಗಳಲ್ಲಿ ಸಿಲುಕಿದ ಶ್ರೀ ಸಾಮಾನ್ಯರ ಬಳಲಿಕೆ–ತೊಳಲಿಕೆಗಳನ್ನು ಕಾವ್ಯಗಳಲ್ಲಿ ಅಭಿವ್ಯಕ್ತಪಡಿಸಿರುವರು.

**೩.೪.ದೇಶಪ್ರೇಮ ಮತ್ತು ಭಾವೈಕ್ಯತೆ :**

ದೇಶಭಕ್ತಿ–ದೇಶಪ್ರೇಮ ಎರಡು ಪದಗಳು ದೇಶಕ್ಕೆ ಬದ್ಧವಾಗಿರುವುದನ್ನು ಪ್ರತಿಬಿಂಬಿಸುತ್ತವೆ. ದೇಶದ ಯಾವುದೇ ಪ್ರಜೆಗೆ ಇವು ಇರಲೇಬೇಕಾದ ಗುಣಗಳು. ಇಂಥ ಗುಣಗಳ ಶಕ್ತಿಯಿಂದ ದೇಶದ (Intigrity)–ಭಾವೈಕ್ಯತೆ ಸಾಧ್ಯ. ಇದರಿಂದ ಮನುಕುಲ ಒಂದೆಂಬ ಭಾವ ಮೂಡಿಸಲು ಸಾಧ್ಯ. ಇಂಥ ಪ್ರೇರಕ ಶಕ್ತಿಯನ್ನು ಜನರಲ್ಲಿ ಮೂಡಿಸಲು ಅನೇಕ ಕವಿಗಳು ಕವನಗಳಲ್ಲಿ ಅಭಿವ್ಯಕ್ತಿಸಿದ್ದುಂಟು.

"ಹಾಡದ ಕೋಗಿಲೆ ಇಲ್ಲ, ದೇಶವನ್ನು ಕುರಿತು ಹಾಡದ ಕವಿಯಿಲ್ಲ" ಎಂಬ ಮಾತಿನಂತೆ, ಕನ್ನಡ ನವೋದಯ ಕವಿಗಳು ತಾವು ಈ ದೇಶಕ್ಕೆ ಸಂಬಂಧಿಸಿದವರು. ಈ ದೇಶದ ಸಿರಿ–ಸಂಪತ್ತು, ಹಿರಿದಾದ ಸಂಸ್ಕೃತಿ, ಇತಿಹಾಸ, ಚರಿತ್ರೆ, ಪರಂಪರೆಗೆ ಸೇರಿದವರು. ಇದು ನನ್ನದು–ತನ್ನದು; ನಮ್ಮದು–ತಮ್ಮದು–ಎಂಬ ಅಚಲ ನಿಷ್ಠೆಯನ್ನು, ಪ್ರೇಮವನ್ನು ಕಾವ್ಯಗಳಲ್ಲಿ ವ್ಯಕ್ತಪಡಿಸಿರುವರು. ತಮ್ಮ ಆಸೆ–ಆಕಾಂಕ್ಷೆ–ಅಭೀಪ್ಸೆಗಳ ಸರ್ವಸ್ವವೂ ಭಾರತವೇ ಆಗಿದೆ. ತನು–ಮನ–ಹೃದಯಗಳಲ್ಲಿ ಸದಾ ಶ್ರದ್ಧೆ,

ಭಕ್ತಿಯಿಂದ ಆರಾಧಿಸುವ ದೈವವೂ ಆಗಿರುವುದನ್ನು ತಮ್ಮ ಕಾವ್ಯಗಳಲ್ಲಿ ವ್ಯಕ್ತಪಡಿಸಿರುವರು. ಗಿರಿ–ವನ–ಕಾನನ; ಕಡಲ ತಡಿ–ನದಿ–ಸರೋವರ, ಸಿರಿ–ಸಮೃದ್ಧಿಯಿಂದ ಕೂಡಿದ ಈ ಭೂಮಿ ಸ್ವರ್ಗಕ್ಕೂ ಮಿಗಿಲಾಗಿದೆ. ಅಂತೆಯೇ ತಾವು ಪುನಃ ಹುಟ್ಟುವದಾದರೆ, ಏನೇ ಆಗಿ ಹುಟ್ಟಲಿ ಇಲ್ಲಿಯೇ ಹುಟ್ಟಬೇಕೆನ್ನುವ ಆಕಾಂಕ್ಷೆಯನ್ನು ವ್ಯಕ್ತಪಡಿಸಿರುವರು.

ಈ ದೇಶ ವಿಭಿನ್ನ ಸಂಸ್ಕೃತಿ, ಭಾಷೆ, ಜನಾಂಗ, ಧರ್ಮ–ಹೊಂದಿದ್ದರೂ ನಾವೆಲ್ಲರೂ ಒಂದೇ ದೇಶದವರು; ಗತಕಾಲದ ಭವ್ಯ ಪರಂಪರೆಗೆ ಸೇರಿದವರು. ಒಂದೇ ತಾಯಿಯ ಮಕ್ಕಳು, ಸಹೋದರರೆಂದು–ಮುಂತಾಗಿ ಭಾವೈಕ್ಯತೆಯನ್ನು ತಮ್ಮ ಕಾವ್ಯಗಳಲ್ಲಿ ಬೆಸೆದಿರುವರು. ಜನತೆಯ ನರನಾಡಿಗಳಲ್ಲಿ ದೇಶದ ಬಗೆಗೆ ಅಭಿಮಾನ ಹೆಮ್ಮೆಮೂಡಿಸಿ, ರಾಷ್ಟ್ರೀಯತೆ ಪ್ರಜ್ಞೆ ಸದಾ ಜಾಗೃತವಾಗಿರುವಂತೆ, ದೇಶದ ಗತಕಾಲದ ವೈಭವ, ಪರಂಪರೆ, ಸಾಧನೆ, ಸಿದ್ಧಿ, ಇತಿಹಾಸ, ಚರಿತ್ರೆ, ಧರ್ಮ–ಕುರಿತು ಹಾಡಿಹರಿಸಿರುವರು. ಇತಿಹಾಸ, ಚರಿತ್ರೆಯಲ್ಲಿಯ ಅಭಿಮಾನದ ಘಟನೆಗಳ ನೆನಪು ಸ್ವಾಭಿಮಾನವನ್ನು ಪೋಷಿಸಿದರೆ, ಅವಮಾನದ ಘಟನೆಗಳ ನೆನಪು ಸ್ವಾಭಿಮಾನ ಶೂನ್ಯರಾದವರಲ್ಲಿ, ಅವರ ಸ್ವಾಭಿಮಾನ ಕೆಣಕಿ ಅವರಲ್ಲಿ ಸ್ವಾಭಿಮಾನವನ್ನು ಸೃಷ್ಟಿಸುತ್ತದೆ.

ದೇಶಭಕ್ತಿ–ದೇಶಪ್ರೇಮವು ಕನ್ನಡ ನವೋದಯ ಕಾವ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದಾಗಿರುವದನ್ನು ಈ ಹಿಂದೆ ನೋಡಿದ್ದೇವೆ. ದೇಶಭಕ್ತಿ, ಭಾವೈಕ್ಯತೆಯನ್ನು ನವೋದಯದ ಕವಿಗಳ ಕಾವ್ಯಗಳಲ್ಲಿ ಮುಂದೆ ಹೇಗಿದೆ ಎಂಬುದನ್ನು ನೋಡಲಾಗುವುದು.

ಗೋವಿಂದ ಪೈಯವರ 'ಶ್ರೀ ಮಾತೃಭೂಮಿಶ್ವರಾಷ್ಟಕ'ಪದ್ಯವು ಅವರ ಉಜ್ವಲ ದೇಶಪ್ರೇಮ, ದೇಶಭಕ್ತಿಗೆ ನಿದರ್ಶನವಾಗಿದೆ. ಅವರು–"ಜನ್ಮ ಜನ್ಮಂಗಳೊಳ್ ಹಿಂದೂ ಧರ್ಮದೊಳೆನ್ನಂ ಭಾರತದೊಳೆನ್ನಂ ಪುಟ್ಟಿಸೈ"–ಎಂದು ಬೇಡಿಕೊಂಡಿರುವರು. ಇದು ಪಂಪನು 'ಮರಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಬನವಾಸಿ ದೇಶದೊಳ್" ಹುಟ್ಟಲು, ಅಪೇಕ್ಷಿಸಿದ್ದನ್ನು ನೆನಪಿಸುತ್ತದೆ. "ಭಾರತಾಂಬೆಯ ಮಹಿಮೆ"–ಕವನದಲ್ಲಿಯೂ ತಮ್ಮ ಜೀವನದ ಉಸಿರು–ಬಸಿರು–ಎಲ್ಲವೂ ಭಾರತವೆಂದಿರುವರು.

"ಭಾರತವನ್ನುಳಿಯುತ್ತ ನನಗೆ ಜೀವನವೆತ್ತ?
ಭಾರತವೆ ನನ್ನುಸಿರು, ನನ್ನೊಗೆದ ಬಸಿರು;
ಭಾರತವೇ ಧನ ಧಾನ್ಯ, ಭಾರತವೆ ಮನೆ ಮಾನ್ಯ
ಭಾರತವೆ ದೇವಾರವೆನ್ನ ಸಂಸಾರ"
(ನಾಯಕ ಹಾ.ಮಾ.(ಸಂ): ೧೯೮೩, ಪುಟ–೧೭)

ಗೋವಿಂದ ಪೈಯವರು ತಮಗೆ ಸರ್ವಸ್ವವೂ ಭಾರತವೇ ಆಗಿದೆ ಎಂದು ಸಮರ್ಪಣಾ ಭಾವದಿಂದ ಹೇಳಿರುವರು. 'ಹೊಲೆಯನು ಯಾರು' ಕವನದಲ್ಲಿ ಹೊಲೆತನದ ಅವಗುಣಗಳನ್ನು

ಪಟ್ಟಿಮಾಡುತ್ತಾ–'ರಾಷ್ಟ್ರದ ಉನ್ನತಿಗೆ ಸಾಧಿಸದವ, ಶ್ರಮಿಸದವ, ರಾಷ್ಟ್ರಕ್ಕೆ ದ್ರೋಹ ಬಗೆಯುವವ, ತನ್ನ ಸ್ವಾರ್ಥಕ್ಕಾಗಿ ರಾಷ್ಟ್ರದ ಹಿತ ಮರೆಯುವವ, ರಾಷ್ಟ್ರ ಭಕ್ತಿಯ ಲವ–ಲೇಶವಿಲ್ಲದವನು ಹೊಲೆಯ' ನೆಂದು ಹೇಳಿರುವರು.

ಆನಂದಕಂದರು 'ಜಯಭಾರತ' ಕವನದಲ್ಲಿ, ದೇಶವನ್ನು ಸುತ್ತುವರಿದ ಮೂರು ಸಮುದ್ರಗಳು, ನದಿ ಪರ್ವತಗಳನ್ನು, ಇದರ ಸಿರಿಸಂಪತನ್ನು, ಜಗತ್ತು ಇನ್ನೂ ಜಡತೆಯಲ್ಲಿರುವಾಗ ನೀನು ಜಗದ ಬೆಳಕಾದೆ–ಎಂದು ದೇಶದ ಗುಣಗಾನಮಾಡಿ 'ಜಯಕಾರ' ಹಾಕಿರುವರು. ರಂ. ಶ್ರೀ. ಮುಗುಳಿಯವರು (ಅಪಾರ ಕರುಣೆ ಸಂಕಲನದ) 'ನಾವೆಲ್ಲಾ ಒಂದೇ'–ಕವನದಲ್ಲಿ ಭಾವೈಕ್ಯತೆಯನ್ನು ಸಾರಿರುವರು. ನಮ್ಮಲ್ಲಿರುವ ಹಲವಾರು ಭೇದಗಳನ್ನು ಗಾಳಿಗೆತೂರಿ ನಾವೆಲ್ಲಾ ಒಂದೇ– ಎಂದು ತಿಳಿಯಬೇಕು. ಪ್ರಕೃತಿಯೇ ನಮ್ಮನ್ನು ಒಂದಾಗಿ ಮಾಡಿರುವದನ್ನು–ಹೀಗೆ ಬಣ್ಣಿಸಿರುವರು:

"ಮೂರೆಡೆ ನೀರಿನ ಕಂದಕವಿರಿಸಿ
ಮೇಗಡೆ ಮಲೆಗಳ ಕೊತ್ತಳ ನಿಲಿಸಿ
ಪ್ರಕೃತಿಯು ನೀಡಿದೆ ನದಿಗಳು ಹರಿಯುವ ನೆಲದಗಲವ ನಮಗೆಂದೇ
ನಾವೆಲ್ಲಾ ಒಂದೇ"

(ಮುಗಳಿ: ರಂ.ಶ್ರೀ. ೧೯೫೧, ಪುಟ–೬೩)

ಬಿಡುಗಡೆಗಾಗಿ ಹೋರಾಡಿ ತ್ಯಾಗ ಮಾಡಿದ ಮಹಾಪುರುಷರನ್ನು ಪಡೆದ, ಮತಪಂಥಗಳ ಮೇಲಾಟ ನಡೆಸಿಯೂ ಎಲ್ಲ ಮತದವರು ಸೌಹಾರ್ದದಿಂದ ನೆಲೆಸಿದ, ಬದುಕನ್ನು ನರಕವನ್ನಾಗಿ ಮಾಡಿಕೊಂಡರೂ 'ಎಲ್ಲರ ಸಂತೋಷವೇ ನಮ್ಮ ಸಂತೋಷ'ವೆಂದು ಬಗೆದ–'ನಾವೆಲ್ಲಾ ಒಂದೇ'. ಅಂತೆಯೇ ಇಲ್ಲಿ–"ಮಾನವ್ಯದ ಮಾಹಾಸಾಧನೆ ನಡೆದಿದೆ ಸಂಮೇಳನದ ಗೀತವು ಸವಿಪಡೆದಿದೆ"(ಮುಗಳಿ: ರಂ.ಶ್ರೀ ೧೯೫೧, ಪುಟ೬೨)–ಎಂದು ಸಾರಿರುವರು.

ಬೇಂದ್ರೆಯವರು–'ನಾನು'–ಕವನದಲ್ಲಿರಾಜ್ಯ–ರಾಷ್ಟ್ರ–ವಿಶ್ವದ-–ಪ್ರೇಮ–ಭಕ್ತಿಯನ್ನು ಮುಪ್ಪುರಿಗೊಳಿಸಿರುವರು. ಕವಿ ತಾನು ವಿಶ್ವದ ಪರಮಾಣುವಾದರೆ–

"ಭೂಮಿ ತಾಯಿಯ ಮೈಯ ಹಿಡಿಮಣ್ಣು ಗುಡಿಗಟ್ಟಿ ನಿಂತಂಥ ಮೂರ್ತಿ ನಾನು!
ಭರತ ಮಾತೆಯ ಕೋಟಿ ಕಾರ್ತಿಕೋತ್ಸವದಲ್ಲಿ ಮಿನುಗುತಿಹ ಜ್ಯೋತಿ ನಾನು"!

(ಬೇಂದ್ರೆ ದ.ರಾ.೧೯೬೮, ಪುಟ–೧೪)

–ಎಂದು ರಾಷ್ಟ್ರದ ಬಗೆಗಿದ್ದ ತಮ್ಮ ಅಚಲ–ಶ್ರದ್ಧೆ–ನಿಷ್ಠೆಯನ್ನು ವ್ಯಕ್ತಿಪಡಿಸಿರುವರು. 'ಚೇತನ' (ಅರಳು–ಮರಳು ಸಂಕಲನ) ಕವನದಲ್ಲಿ ಭಾರತದಲ್ಲಿ ಕಾಲಕಾಲಕ್ಕೆ ಅವತರಿಸಿದ ರಾಮ, ಕೃಷ್ಣ, ಮಹಾವೀರ, ಬುದ್ಧ, ಬಸವ, ಗಾಂಧೀ–ಇವರು ಮಾಡಿದ ಮಹಾತ್ಕಾರ್ಯಗಳನ್ನು ಬಣ್ಣಿಸಿರುವರು. ಈ

ಅವತಾರ ಪುರುಷರ ಚೇತನವು ಒಬ್ಬರಂತೆ ಒಬ್ಬರದಿಲ್ಲ. ಭಾರತ ಮಾತೆಯ ದಿವ್ಯ ಚೇತನವು ಅದನ್ನು ಸಮಗೊಳಿಸುತ್ತದೆ–ಎಂದಿರುವರು.

ಕುವೆಂಪುರವರ ಪ್ರಸಿದ್ಧ ನಾಡಗೀತೆಯಾದ 'ಜಯ ಹೇ ಕರ್ನಾಟಕ ಮಾತೆ'–ಯಲ್ಲಿ ಕರ್ನಾಟಕ ತನುಜೆಯ ಜನನಿಯಾದ ಭಾರತದ ಹಿರಿಮೆ–ವೈಭವಗಳನ್ನು ವರ್ಣಿಸಿರುವರು. ಭಾರತವು ರಸ–ಋಷಿಗಳ ನಾಡು; ಶ್ರೀರಾಮ. ಶ್ರೀಕೃಷ್ಣ, ದೇವತಾ ಪುರುಷರು. ಜನಿಸಿದ ನಾಡು; ಜನಕನಂಥ ರಾಜರು ಆಳಿದ ನಾಡು; ಹಿಂದೂ ಕ್ರೈಸ್ತ, ಮುಸಲ್ಮಾನ, ಪಾರಸಿ, ಜೈನ–ಮುಂತಾದ ಸರ್ವಧರ್ಮದವರು ಶಾಂತಿಯಿಂದ ನೆಲೆಸಿ ನಂದನವನದಂತೆ ಶೋಭಿಸುತ್ತಿದೆ. ಹೀಗೆ ಈ ಪದ್ಯದಲ್ಲಿ ಪುರಾಣ ಇತಿಹಾಸ–ಚರಿತ್ರೆ–ಸಂಸ್ಕೃತಿ–ಧರ್ಮ–ಜನಾಂಗ, ಗಿರಿ–ವನ ನಿಸರ್ಗಸಂಪತ್ತು– ಮುಂತಾದವುಗಳನ್ನು ಮನೋಜ್ಞವಾಗಿ ವರ್ಣಿಸಿರುವರು. ಮಂತ್ರಾಕ್ಷತೆ ಸಂಕಲನದ 'ಕಾಲ ಮತ್ತು ದೇಶ'–ಕವನದಲ್ಲಿಯೂ ತಾವು ದೇಶದ ಬಗೆಗಿಟ್ಟುಕೊಂಡ ಒಲವು–ಭಕ್ತಿ–ಶ್ರದ್ಧೆಯನ್ನು ಆತ್ಮಾರ್ಪಿತಮಾಡಿಕೊಂಡಿರುವದು ಹೀಗೆ: "ದೇಶವೆಂದರೆ ಏನು? ಒಲಿದು ಭೂಮಿಯ ನಾನು ತಬ್ಬಿದೆನು ಆ ಆತ್ಮದೊಲವೆ ದೇಶ,"(ಕುವೆಂಪು.೧೯೮೨, ಪುಟ–೧೧)ಎಂದು ದೇಶದ ವ್ಯಾಖ್ಯಾನವನ್ನು ಕಾವ್ಯಾತ್ಮಕಗೊಳಿಸಿರುವರು.

ವಿ.ಸೀತಾರಾಮಯ್ಯನವರು 'ನನ್ನ ನಾಡು ನನಗೆ'–ಕವನದಲ್ಲಿ ಅಪ್ಪಟ ದೇಶಾಭಿಮಾನ ಮೆರೆದಿರುವರು. "ನೀವೇನೆ ಹೇಳಿ, ಬಿಡಿ, ನನ್ನೆಣಿಕೆ ಇದು; ನನ್ನ ನಾಡಲ್ಲಿಯೇ ನನಗೆ ಬೆಲೆ–ನಿಲುವು–ಒಲವು–ಸಾವು"(ಸೀತಾರಾಮಯ್ಯ ವಿ. ೧೯೯೦, ಪುಟ–೪೩೧)–ಎಂದಿರುವರು. ಉಳಿದವರ ಅಭಿಪ್ರಾಯ ಕವಿಗೆ ಬೇಕಾಗಿಲ್ಲ. ತನಗೆ ಮಾತ್ರ ಬೆಲೆ–ನಿಲುವು–ಸಾವು ಇವೆಲ್ಲವೂ ಈ ದೇಶದಲ್ಲಿಯೇ ಆಗಬೇಕೆಂದು ಕವಿಯ ಆಸೆ. ತಾನು ಆಳವಾಗಿ ಬೇರು ಬಿಟ್ಟು ಇಲ್ಲಿಯ ಸತ್ವವನ್ನು ಹೀರಿ ಹೆಮ್ಮರವಾಗಿ ಬೆಳೆಯಬೇಕು. ನನ್ನ ಬದುಕಿಗೂ ಸಾವಿಗೂ ನೀನೇ ಕಾರಣವೆಂದು–'ಓ ಭಾರತಿ, ಕಂದ ನಿನ್ನವನು ನೀನೆ ಗತಿ, ಮಣ್ಣು ಬೂದಿ'–ಎಂದು ಪ್ರಾರ್ಥಿಸಿಕೊಂಡಿರುವರು.

ಸಿದ್ದಯ್ಯ ಪುರಾಣಿಕರು 'ಭರತ ಭೂಮಿ ಕರುನಾಡು' ಕವನದಲ್ಲಿ, 'ನಮ್ಮ ತಾಯಿಯ ತಾಯಿ ಭಾರತಾಂಬೆ'–ಎಂದು ಭಾವನಾತ್ಮಕ ಸಂಬಂಧವನ್ನು ವ್ಯಕ್ತಪಡಿಸಿದ್ದಾರೆ. 'ವಚನೋದ್ಯಾನ'ದ ವಚನಗಳಲ್ಲಿ–

'ಭಾರತವು ಸಂಕ್ಷಿಪ್ತ ಬ್ರಹ್ಮಾಂಡವಾದರೆ,
ಕರ್ನಾಟಕವು ಸಂಕ್ಷಿಪ್ತ ಭಾರತನೋಡಾ
ಇಲ್ಲಿ ಇಲ್ಲದುದು ಇನ್ನೆಲ್ಲಿದೆ ತೋರಾ"

(ಬುಳ್ಳಾ ಎನ್.ಬಿ, ೧೯೯೯ ಪುಟ–೧೨೧)

ಎಂದು ಹೇಳುವಲ್ಲಿ, ಪುರಾಣಿಕರು ಭಾರತವನ್ನು ವಿಶ್ವಕ್ಕೂ ಮಿಗಿಲಾದ ಬ್ರಹ್ಮಾಂಡದ ಪ್ರತಿರೂಪವಾಗಿ, ಕರ್ನಾಟಕವನ್ನು ಭಾರತದ ಪ್ರತಿರೂಪವಾಗಿ ಕಂಡಿರುವರು. ಇವರ ಏಕಾಕ್ಷರದಿಂದ ಸಪ್ತಾಕ್ಷರದವರೆಗಿನ ಮಂತ್ರಗಳಲ್ಲಿ "ಭಾರತ ಕರ್ನಾಟಕ"-ಎನ್ನುವುದೇ ಇವರಿಗೆ ಸಪ್ತಾಕ್ಷರಿ ಮಂತ್ರ. ಹೀಗೆ ವೀರಶೈವ ಧರ್ಮದ ಪರಿಭಾಷೆಯಲ್ಲಿ ದೇಶದ ಬಗೆಗಿನ ಶ್ರದ್ಧೆ-ಭಕ್ತಿ-ಪ್ರೇಮವನ್ನು ವ್ಯಕ್ತಪಡಿಸಿರುವರು.

ಜಿ.ಎಸ್. ಶಿವರುದ್ರಪ್ಪನವರ 'ಐಕ್ಯಗಾನ'-ವು ಭಾವೈಕ್ಯತೆಯನ್ನು ಕುರಿತಿದೆ. ಪೂಜಿಸುವ ವಿಧಾನಗಳು ಬೇರೆ ಬೇರೆಯಾದರೂ ದೇವರು ಒಂದೇ, ಹಸುಗಳ ಬಣ್ಣ ಬೇರೆ ಬೇರೆಯಾದರೂ ಅವುಗಳ ಹಾಲಿನ ಬಣ್ಣ ಒಂದೇ, ಹಾಗೆಯೇ-

"ನಡೆ-ನುಡಿ-ಭೇದಗಳೆಷ್ಟೇ ಇದ್ದರು
ಬದುಕುವ ಜನ ಒಂದೇ
ನೆಳಲು-ಬೆಳಕುಗಳ ರೆಕ್ಕೆಯ ಬಿಚ್ಚುತ
ಹಾರಾಡುವ ಧ್ವಜ ಒಂದೇ"
(ಶಿವರುದ್ರಪ್ಪ. ಜಿ.ಎಸ್.,೧೯೯೧, ಪುಟ-೪೭೭, )

-ಎಂದು ದೇಶದ ಏಕತೆ, ಅಖಂಡತೆ, ಒಕ್ಕಟ್ಟನ್ನು ಹೇಳಿರುವರು. ಅದೇ ರೀತಿ (ಚಕ್ರಗತಿ ಸಂಕಲನದ) 'ಒಂದು ಹಾಡು'- ಭಾವೈಕ್ಯತೆಯನ್ನು ಇಂತು ಬಿತ್ತರಿಸಿದೆ:

"ಒಂದೇ ವೃಕ್ಷದ ಕೊಂಬೆಗಳು
ನಾವೊಂದೇ ಬಳ್ಳಿಯ ಹೂವುಗಳು
ಒಂದೇ ನೆಲದೊಳು ಬೇರೂರುತ ನಾ
ವೊಂದೇ ಮುಗಿಲಿಗೆ ನೆಗೆವರು"
(ಸುಭಾಸ ಸಂ. ಪೊರೆ, ೧೯೯೯, ಪುಟ-೩೧೬)

ಭಾರತೀಯರಾದ ನಾವೆಲ್ಲರೂ ಒಂದೇ, ನಾವೆಲ್ಲರೂ ಕೂಡಿ ಬಾಳೋಣ, ಕೂಡಿಯೇ ಏಳ್ಗೆಯ ಸಾಧಿಸೋಣವೆಂದು ಹೇಳಿರುವರು. ಬಳ್ಳಿ, ಕಾಯಿ, ಹೂವಿನಂತೆ ಒಂದು ಎನ್ನುವ ಮನೋಭಾವವನ್ನು ಸಾರೋಣ ಎಂದಿದ್ದಾರೆ.

ಕೆ.ಎಸ್. ನಿಸಾರ ಅಹಮದ್‌ರು 'ಮಹಿಮೆವಂತೆ ಭಾರತಿ'-ಕವನದಲ್ಲಿ ಭಾರತ ಮಾತೆಯ ಹಿರಿಮೆ- ಗರಿಮೆಗಳನ್ನು ಹಾಡಿ-ಹೊಗಳಿರುವರು. ಅನಂತೆಯಾದ ಭಾರತ ಮಾತೆ, ಕಾಲ ಕಾಲಕ್ಕೆ ಪರಕೀಯರು ದುರಾಕ್ರಮಣ ಮಾಡಿದ್ದು ಮತ್ತು ಅವರನ್ನು ದಾಳದಂತೆ ಕದಲಿಸಿದ್ದು ರಾಜ್ಯ-ಸಾಮ್ರಾಜ್ಯಗಳನ್ನು ತನ್ನ ಮಗ್ಗುಲಂತೆ ಬದಲಾಯಿಸಿದ್ದನ್ನು ನೆನಪಿಸಿರುವರು. ಭಾರತ ಮಾತೆಯ ಸಾಲಂಕೃತ ರೂಪವನ್ನು ಈ ರೀತಿ ವರ್ಣಿಸಿರುವರು:

ಗಂಗೆ-ಯಮುನೆ ಕಿವಿಯ ಓಲೆ ಗೋದಾವರಿ ಮೇಖಲೆ
ಸಹ್ಯವನದ ಹರಿದ್ವರ್ಣ ಸುವಾಸನಾ ದುಕೂಲೆ

ವಿಯದ್ರಂಗ ಚರವಿಹಂಗ ಮೇಳಸಾನುಕೂಲೆ
ಕಡಲ ತಡಿಯ ಜಲದ್ಘೋಷ ನಿತ್ಯ ನಾಟ್ಯ ಶೀಲೆ"
(ನಿಸಾರ್ ಅಹಮದ್ ಕೆ.ಎಸ್, ೧೯೯೫, ಪುಟ-೬೯)

ಭಾರತ ಮಾತೆಗೆ ಹಿಮಾಲವು ಶಿರವಿದ್ದ ಹಾಗೆ; ಅಲ್ಲಿ ಹರಿಯುವ ಗಂಗೆ-ಯಮುನೆ ನದಿಗಳೇ ಅವಳಿಗೆ ಕಿವಿಯ ಆಭರಣಗಳು, ಮಧ್ಯದಲ್ಲಿ ಹರಿಯುವ ಗೋದಾವರಿ ನದಿ ನಡಪಟ್ಟಿಯಿದ್ದ ಹಾಗೆ. ಸಹ್ಯಾದ್ರಿಯ ನಿತ್ಯ ಹರಿದ್ವರ್ಣವೇ ಅವಳು ತೊಟ್ಟ ಬಟ್ಟೆ, ಮುಡಿದ ಸುವಾಸನೆ ಭರಿತ ಹೂ ಆಗಿದೆ. ಬೆಟ್ಟ-ಗುಡ್ಡಗಳು ನಿನ್ನ ವಿಹಂಗಮ ನೋಟವಾಗಿದೆ. ಕಡಲ ದಂಡೆಗೆ ಬಂದು ಅಪ್ಪಳಿಸುವ ಸಮುದ್ರ ತೆರೆಗಳೇ ಜಲದ್ಘೋಷವಾಗಿವೆ.-ಹೀಗೆ ಭಾರತ ಮಾತೆ ನಿತ್ಯ ನಾಟ್ಯ ನಿರತಳಾಗಿದ್ದಾಳೆಂದು ವರ್ಣಿಸಿರುವರು.

ಇದೇ ರೀತಿ "ಮಾತೃ ವಂದನೆ"-ಕವನದಲ್ಲಿ ಭಾರತಮಾತೆ ಕುರಿತು ಹೀಗೆ ವರ್ಣಿಸಿರುವರು.

"ಸಹ್ಯ, ಹಿಮಾಚಲ, ವಿಂಧ್ಯ ಅರಾವಳಿ
ಪಾಳೆಯ ರಚಿಸಿವೆ ಸುತ್ತ ಕರಾವಳಿ
ನದಿ ನದ ಸರಸ್ಸು ಸಿರಿ ಬಿರುದಾವಳಿ"
(ನಿಸಾರ್ ಅಹಮದ್, ಕೆ.ಎಸ್.೧೯೯೫, ಪುಟ-೩೮೨)

-ಹಿಮಾಲಯ, ವಿಂಧ್ಯ, ಅರಾವಳಿ, ಸಹ್ಯಾದ್ರಿ ಬೆಟ್ಟಗಳು ಹಾಗೂ ಮೂರು ಕಡೆ ಸುತ್ತುವರಿದ ಸಮುದ್ರಗಳು ನಿನಗೆ ರಕ್ಷಣೆ ನೀಡುತ್ತಿವೆ. ನದಿ, ಸರೋವರಗಳು ನಿಸರ್ಗದ ಸಿರಿ ಸಂಪತ್ತು ನಿನ್ನ ಬಿರುದಾವಳಿಗಳೆಂದು ಬಣ್ಣಿಸಿರುವರು.

ಬಿ.ಎ. ಸನದಿಯವರು (ಸೀಮಾಂತರ ಸಂಕಲನದ) 'ಆದೇಶ' ಕವನದಲ್ಲಿ ನಮ್ಮ ದೇಶದಲ್ಲಿ ಹಲವಾರು ಭಾಷೆ-ಧರ್ಮ-ಮತಗಳಿದ್ದರೂ ಭಾವೈಕ್ಯತೆಯಿಂದ ಇದ್ದೇವೆ. ಇನ್ನು ಮುಂದೆಯೂ ಒಕ್ಕಟ್ಟಿನಿಂದಿರಲು-"ಏಕತೆಗೆ ಕನವರಿಸಿ ಮೈಮನಗಳೆರಡನೂ ದುಡಿಸಿ ನಮ್ಮ ಬಾಳಂಗಳದ ಕಸಕರಿಕಿ ಕಸರುಗಳ ತೊಳೆ (ಯೆ)"(ವಸಂತಕುಮಾರ ತಾಳ್ತಜೆ ಮತ್ತು ಚಂದ್ರಮೌಳಿ ಕೆ. (ಸಂ), ೧೯೯೬, ಪುಟ-೫೦) ದರೆ, ನಮ್ಮಲ್ಲಿಯ ಒಡಕು-ಭೇಧ-ಭಾವನೆಗಳು ತಾನೆ ಅಳಿಯುತ್ತವೆ. ಈ ದೇಶ ನಮ್ಮದೆನ್ನುವ ಅರಿವೂ ಮೂಡುತ್ತದೆ. ಆಗ ಇದನ್ನು ನೆನಪಿಸಲಿಕ್ಕೆ ಯಾರ ಆದೇಶದ (ತನ್ನ ಕವನದ) ಅಗತ್ಯವೂ ಇರುವದಿಲ್ಲ-ಎಂದು ತಿಳಿಸಿರುವರು. ಇದು, ಇಂದು ರಾಷ್ಟ್ರ, ರಾಷ್ಟ್ರಭಕ್ತಿ, ರಾಷ್ಟ್ರೀಯತೆ ಎನ್ನುವದು. ದೇಶದಲ್ಲಿರುವ ಯಾವುದೇ ಒಂದು ಧರ್ಮದವರ ಸ್ವತ್ತು ಎಂದೂ, ಇತರರು ತಮಗೆ ಸಂಬಂಧವಿಲ್ಲವೆಂದು ತಿಳಿದಿರುವವರಿಗೆ ಈ ಕವನ ಬಹಳ ಅರ್ಥಪೂರ್ಣವಾಗಿ ಅನ್ವಯಿಸುತ್ತದೆ. ಕವಿಯು ಅಂಥವರಿಗೆ ಈ ಕವನದ ಮೂಲಕ ರಾಷ್ಟ್ರೀಯತೆ, ದೇಶಭಕ್ತಿ, ಭಾವೈಕ್ಯತೆಯನ್ನು

ಮೈಗೂಡಿಸಿಕೊಳ್ಳಲು ಆದೇಶಿಸಿದ್ದಾರೆ.-ಹೀಗೆ ನವೋದಯ ಕವಿಗಳ ಕಾವ್ಯಗಳಲ್ಲಿ ದೇಶಭಕ್ತಿ ದೇಶಪ್ರೇಮ-ಭಾವೈಕ್ಯತೆಗಳನ್ನು, ಶ್ರದ್ಧೆ, ನಿಷ್ಠೆಯನ್ನು, ದೇಶಾಭಿಮಾನವನ್ನು ಕಾಣುತ್ತೇವೆ.

**೩.೫. ವಿದೇಶಿ ಆಕ್ರಮಣದ ಪ್ರತಿಭಟನೆ :**

ಸ್ವಾತಂತ್ರ್ಯ ನಂತರ ನೆರೆರಾಷ್ಟ್ರಗಳಾದ ಪಾಕಿಸ್ತಾನ ಮತ್ತು ಚೀನಾ ದೇಶಗಳು ಭಾರತದ ಪ್ರದೇಶವನ್ನು ಆಗಾಗ ಕಬಳಿಸಲು ಪ್ರಯತ್ನಿಸಿವೆ. ಭಾರತವು ಅವುಗಳನ್ನು ದಿಟ್ಟತನದಿಂದ ಎದುರಿಸುತ್ತಾ ಬಂದಿದೆ. ಪಾಕಿಸ್ತಾನವಂತೂ ಕಳೆದ ಐವತ್ತು ವರ್ಷಗಳಲ್ಲಿ ಕಾಶ್ಮೀರವನ್ನು ಕಬಳಿಸಲು ಪ್ರಯತ್ನಿಸಿ ಸೋಲು ಕಂಡಿದೆ. ೧೯೪೭ ರಲ್ಲಿ ಆಪರೇಷನ್ ಗುಲಮರ್ಗ, ೧೯೬೫ ರಲ್ಲಿ ಆಪರೇಷನ್ ಗಿಬ್ರಾಲ್ಟರ್ ಮತ್ತು ಗ್ರ್ಯಾಂಡ್‌ಸ್ಲ್ಯಾಮ್, ೧೯೮೯ ರಲ್ಲಿ ಆಪರೇಷನ್ ಟೋಪಾಕ್, ೧೯೯೯ ರಲ್ಲಿ ಕಾರ್ಗಿಲ್ ಕದನ (ಆಪರೇಷನ್ ವಿಜಯ) ಇವುಗಳೆಲ್ಲವುಗಳಲ್ಲಿಯೂ ಸೋಲು ಅನುಭವಿಸಿದೆ.

ಜಾಗತಿಕ ದ್ವಿತೀಯ ಮಹಾಯುದ್ಧದಿಂದ ಜರ್ಝರಿತಗೊಂಡಿದ್ದ ಜಗತ್ತಿನ ಶಾಂತಿಪ್ರಿಯ ರಾಷ್ಟ್ರಗಳು ಚೀನಾ ಹಾಗೂ ಭಾರತದ ನೇತೃತ್ವದಲ್ಲಿ ಇಂಡೋನೇಷಿಯಾದ ಬಾಂಡುಂಗ್ ನಗರದಲ್ಲಿ ೧೯೫೫ ರಲ್ಲಿ ಸಭೆ ಸೇರಿ ಭಾರತವು ಪ್ರತಿಪಾದಿಸಿದ ಅಲಿಪ್ತ ನೀತಿಯನ್ನು ಅಂಗೀಕರಿಸಲಾಯಿತು. ಇದರಿಂದ ಭಾರತದ ಪ್ರಧಾನಿ ನೆಹರು ಹಾಗೂ ಚೀನಾದ ಚೌ.ಎನ್.ಲೈ ಅವರು ತೃತೀಯ ಜಗತ್ತಿನ ಹರಿಕಾರರಾಗಿ ಕಂಡರು.

ಆದರೆ ಟಿಬೇಟಿನ ಮೇಲೆ ಆಕ್ರಮಣ ಮಾಡಿ ಟಿಬೇಟಿಯನ್ನರ ಸ್ವಾತಂತ್ರ್ಯ ಅಪಹರಿಸಲು ಪ್ರಯತ್ನಿಸಿತು. ಚೀನಾದ ಶಾಂತಿಯ ಮಾತುಗಳನ್ನು ನಂಬಿದ ನೆಹರೂರವರು ಟಿಬೇಟಿಯನ್ನರಿಗೆ ಸಹಾಯ ಮಾಡುವ ಬದಲು ಅದನ್ನು ಚೀನಾದೇಶದ ಅಂಗ ರಾಜ್ಯವೆಂದು ಪರಿಗಣಿಸಲು ಸಮ್ಮತಿಸಿದರು.

೧೯೫೯ ರಲ್ಲಿ ಚೀನಾ ಸೈನಿಕರು ಟಿಬೇಟನ್ನು ವಶಪಡಿಸಿಕೊಂಡರು. ಅದರ ಧರ್ಮಗುರು 'ದಲಾಯಿ ಲಾಮಾ' ಭಾರತಕ್ಕೆ ಓಡಿ ಬಂದರು. ಚೀನಾದ ಇಷ್ಟದ ವಿರುದ್ಧವಾಗಿ ಭಾರತವು ದಲಾಯಿ ಲಾಮಾಗೆ ಆಶ್ರಯ ಕೊಟ್ಟಿತು. ಇದು ಮುಂದೆ ಚೀನಾವು ಭಾರತದ ಮೇಲೆ ಯುದ್ಧ ಮಾಡಲು ಕಾರಣವಾಯಿತು. ಭಾರತದೊಂದಿಗೆ ಮಾಡಿಕೊಂಡ ಪಂಚಶೀಲ ತತ್ತ್ವಗಳ ಒಪ್ಪಂದವನ್ನು ಮರೆತ ಚೀನಾ ದೇಶವು ೧೯೬೧ ರಲ್ಲಿ ಮೆಕ್ ಮೋಹನ ಗಡಿ ರೇಖೆಯನ್ನು ಮೀರಿ ಭಾರತದ ಲಡಕ್ ಮತ್ತು ನೀಫಾಗಳ ಸಾವಿರಾರು ಮೈಲಿ ಭೂಪ್ರದೇಶವನ್ನು ಆಕ್ರಮಿಸಿಕೊಂಡಿತು. ಆಗ ಪ್ರಧಾನಿ ನೆಹರೂರವರು ಚೀನಾದ ಕುಟಿಲ ನೀತಿಯನ್ನು ತಿಳಿದು ಅದು ಶತ್ರುವೆಂದು ಪರಿಗಣಿಸಿದರು. ಅದರ ವಿರುದ್ಧ ಯುದ್ಧ ಘೋಷಿಸಿದರು. ನಾಡಿನ ರಕ್ಷಣೆಗಾಗಿ ತುರ್ತು ಪರಿಸ್ಥಿತಿ ಸಾರಿ ಜನತೆಗೆ ಹೋರಾಡಲು ಕರೆಕೊಟ್ಟರು.

ನವೋದಯ ಕವಿಗಳು ಈ ವಿದೇಶಿ ಆಕ್ರಮಣಗಳನ್ನು ತಮ್ಮ ಕಾವ್ಯಗಳಲ್ಲಿ ಪ್ರತಿಭಟಿಸಿರುವರು. ಅವರ ವಿರುದ್ಧ ನಡೆದ ಯುದ್ಧಕ್ಕೆ ಹೋಗಲು, ವೀರಾವೇಶದಿಂದ ಹೋರಾಡಲು ಕರೆಕೊಟ್ಟಿರುವರು; ನೆರೆರಾಷ್ಟ್ರಗಳ ಕುಟಿಲ ನೀತಿಯನ್ನು ಮೋಸ, ಮಿತ್ರ ದ್ರೋಹವನ್ನು ಖಂಡಿಸಿರುವರು. ಭಾರತದ ವೀರ ಯೋಧರು ದಿಟ್ಟತನದಿಂದ ಎದುರಿಸಿದ, ಶೌರ್ಯ–ಸಾಹಸಗಳನ್ನು ಪ್ರಶಂಸಿಸಿರುವರು. ಈ ಹೋರಾಟದಲ್ಲಿ ವೀರಾವೇಶದಿಂದ ದೇಶಕ್ಕಾಗಿ ಹೋರಾಡಿ ಮಡಿದ ವೀರಯೋಧರಿಗೆ, ಕೃತಜ್ಞತೆ, ವಂದನೆಗಳನ್ನು ತಮ್ಮ ಕಾವ್ಯಗಳಲ್ಲಿ ಸಲ್ಲಿಸಿರುವರು. ಅವುಗಳನ್ನು ಈ ಮುಂದೆ ನೋಡಬಹುದಾಗಿದೆ.

ದಿನಕರ ದೇಸಾಯಿಯವರು ೧೯೬೨ ರಲ್ಲಿ ಚೀನಾ ಆಕ್ರಮಣ ಮಾಡಿರುವದನ್ನು ಕುರಿತು ಚೌಪದಿ ಪದ್ಯಗಳಲ್ಲಿ ಅದರ ಕುಟಿಲ ನೀತಿಯನ್ನು ಪ್ರತಿಭಟಿಸಿ ವಿಡಂಭಿಸಿರುವರು.

"ನಾವೆಲ್ಲರೂ ಪೂಜಿಸಿದ ಪಂಚಶೀಲ.
ಚೀನೀ ಭಟರಿಗಾಯ್ತು ಬಹಳ ಅನುಕೂಲ.
ಹರಿವಾಣದಲ್ಲಿ ಧೂಪ, ಹಣೆಗೆ ಶ್ರೀಗಂಧ
ಊದುಬತ್ತಿಯ ಒಳಗೆ ಸಿಡಿಮದ್ದು, ಕಂದ."

(ದಿನಕರ ದೇಸಾಯಿ, ೧೯೭೮, ಪುಟ–೨೬೩)

ಭಾರತ ಚೀನಾ ನಡುವೆ ಆದ ಪಂಚಶೀಲ ತತ್ವಗಳನ್ನು ಭಾರತವು ಗೌರವಿಸಿದರೆ, ಚೀನಾವು ಮೋಸದಿಂದ ಭಾರತದ ಭೂಪ್ರದೇಶವನ್ನು ಆಕ್ರಮಿಸಿತು. ಎಸ್.ವ್ಹಿ. ಪರಮೇಶ್ವರ ಭಟ್ಟರು. (ಕೃಷ್ಣಮೇಘ ಸಂಕಲನದ) ನಮ್ಮ ಯೋಧರು ಸಾಹಸಗಳನ್ನು ನೆನೆದು"–ಕವನದಲ್ಲಿ ವೈರಿ ರಾಷ್ಟ್ರದ ವಿರುದ್ಧ ಹೋರಾಡಿದ ನಮ್ಮ ಸೈನಿಕರ ಯಶೋಗಾಥೆ ಇದೆ. ಈ ಯೋಧರು ಮುಂದಿನ ತಲೆಮಾರಿನವರಿಗೆ ವೀರ ಪರಂಪರೆಯನ್ನು ಹಾಕಿಕೊಟ್ಟಿರುವರು. 'ಗೆಲ್ಲದೆ ನಮಗೆ ಉಳಿಗಾಲವಿಲ್ಲ, ಗೆದ್ದವರಿಗೆ ಮಾತ್ರ ಈ ಜಗತ್ತು, ಎಂದು ನಿಶ್ಚಯಿಸಿ ಹೋರಾಡಿದರು. ಹಿಮದೊಳಗೆ ನಿಂತರೂ ಸಹಿತ ಹಗೆಯ ಝಳಕೆ ಇವರ ಮೈ ಬೆವರಿತು. ತುಪಾಕಿಯಿಂದಲೇ ಹಗೆಗೆ ಉತ್ತರ ಕೊಟ್ಟಿದ್ದಾರೆ. 'ಹಗೆಗೆ–ಹಗೆ; ಸ್ನೇಹಕ್ಕೆ–ಸ್ನೇಹ'–ಎಂಬ ನಮ್ಮ ನೀತಿಯನ್ನು ಹೀಗೆ ವರ್ಣಿಸಿದ್ದಾರೆ.

"ಮುದ್ದಿಗೆ ಮುದ್ದುಂಟು; ಮದ್ದಿಗೆ ಮದ್ದುಂಟು
ಮುದ್ದು–ಮದ್ದಿಗೆ ಯಾವನಂಟು
ಮದ್ದನು ತೋರಿಸಿ ಮುದ್ದಿಸು ಎಂದರೆ
ಗುದ್ದಿಸಿಕೊಳುವಿರಿ ಸಖರೆ"

(ಪರಮೇಶ್ವರಭಟ್.ಎಸ್.ವ್ಹಿ. ೧೯೭೩, ಪುಟ–೧೨)

ನೆರೆ–ಹೊರೆ ರಾಷ್ಟ್ರಗಳು ಬರಿ–ಬಾಯಿಮಾತಿನಲ್ಲಿ ಭಾರತದೊಂದಿಗೆ ಸ್ನೇಹ–ಸೌಹಾರ್ದ ಬಯಸುತ್ತಿರುವುದುದಾಗಿ ಹೇಳುತ್ತವೆ. ಆದರೆ ನಮ್ಮ ಪ್ರದೇಶ ಆಕ್ರಮಿಸುವದು, ನಮ್ಮ ವಿರೋಧಕ್ಕಾಗಿಯೇ. ಮಾರಕಾಸ್ತ್ರ ಸಂಗ್ರಹಿಸುವದು, ಭಯೋತ್ಪಾದನೆಗೆ ಕುಮ್ಮಕ್ಕು ಕೊಡುವದು–

ಮುಂತಾದ ಕುಟಿಲ ನೀತಿಯನ್ನು ಅನುಸರಿಸುತ್ತವೆ. ಅವರಿಗೆ ತಕ್ಕ ಉತ್ತರ ಕೊಡುತ್ತೇವೆಂದು ಹೇಳಿದ್ದಾರೆ.

ಜಿ.ಪಿ, ರಾಜರತ್ನಂ ಅವರ (ಜಪಾನಿನ ಹಿಮಗಿರಿ ಮತ್ತು ಇತರ ಕವನಗಳು ಸಂಕಲನದ) 'ಇದು ಎಮರ್ಜೆನ್ಸಿ' ಕವನವು 'ಹಿಡಿಪಾಂಚ ಜನ್ಯ! ಶತ್ರು ಅವ ವನ್ಯ'-ಎಂದು ಹೋರಾಟಕ್ಕೆ ಪಾಂಚಜನ್ಯ ಮೊಳಗಿಸುತ್ತದೆ. 'ಚಮ್ಮಾರ ದೇವರಿಗೆ ಚಪ್ಪಲಿ ಪೂಜೆ'-ಎಂಬ ಗಾದೆಯಂತೆ ಈ ಮೃಗತ್ವದ ವೈರಿಗಳಿಗೆ ನಯ-ನಾಜೂಕಿನಿಂದ ಹೇಳಿದರೆ ಕೇಳಲಾರರು. ಗೋಣಿಚೀಲ ಹೊಲಿಯಲು ರೇಷ್ಮೆ ನೂಲು ಬಳಸುವದುಂಟೆ? ಶತ್ರುವಿಗೆ ಗುಡುಗು-ಸಿಡಿಲಾಗಿ ಹೋರಾಡಬೇಕು. ಅಡಿಯ ಮುಂದಿಡುವದೊಂದೇ ಮಾರ್ಗವಿದೆ; ಅದೇ ಸ್ವರ್ಗ, ಅದುವೇ-'ಬಲಮುಸಲಹಲ!' ಎಂದು ತಿಳಿದು- 'ಓ ಗಾಂಧೀಜಿಯ ನಾಡೆ! ಏಳು, ನಡೆ, ಹೋರಾಡು!'-ಎಂದು ಕರೆಕೊಟ್ಟಿರುವರು.

ಸಿದ್ಧಯ್ಯ ಪುರಾಣಿಕರು ಮಕ್ಕಳಿಗಾಗಿ ರಚಿಸಿದ ಕವನ 'ಕೊಡು ಖಡ್ಗವ ಕೈಗೆ' ಇದರಲ್ಲಿ, ವೀರಬಾಲಕನು ಭಾರತದ ನೆಲವನು ಕಬಳಿಸಿದ ಚೀನಾದ ವಿರುದ್ಧ ವೀರಾವೇಶದಿಂದ ಹೋರಾಡಲು ಯುದ್ಧಕ್ಕೆ ಹೋಗಲು ತಾಯಿಗೆ ಖಡ್ಗ ಕೊಡಲು ಕೇಳಿಕೊಂಡಿರುವನು.

"ತೋರಿಸುವೆನು ನನ್ನಯ ಕೈ
ಆ ಚೌ-ಎನ್-ಲೈಗೆ
ಕೊಡು ಖಡ್ಗವ ಕೈಗೆ"

(ಮರುಳಯ್ಯ ಸಾ.ಶಿ. (ಸಂ), ೧೯೮೧, ಪುಟ-೫೧೯)

-ಎಂದು ಚೀನಾ ರಾಷ್ಟ್ರದ ನಾಯಕನ ಮೇಲೆ ಕೋಪಿಸಿಕೊಂಡಿರುವನು. ಹಿಮಗಿರಿಯು ನಮ್ಮದು, ಇದನ್ನು ನರಿಬುದ್ದಿಯ ಚೀನಾ 'ಮ್ಯಾಕ್ ಮೋಹನ ಗಡಿ ದಾಟಿ ಆಕ್ರಮಿಸಿಕೊಂಡಿದೆ, ಅದನ್ನು ಹೊರದಬ್ಬಲು ಈಗಲೇ ಹೋರಾಡಲು ಅಣಿಯಾಗುತ್ತಾನೆ. ಹಿಂದೊಮ್ಮೆ ಜಪಾನ್ ದೇಶ ಚೀನಾದ ಮೇಲೆ ಯುದ್ಧ ಮಾಡಿದ ಸಂದರ್ಭದಲ್ಲಿ ಭಾರತವು ಚೀನಾಕ್ಕೆ ಧನ ಸಹಾಯ ಮತ್ತು ವೈದ್ಯಕೀಯ ನೆರವನ್ನು ನೀಡಿತ್ತು. ಇದನ್ನು ಮರೆತು ಭಾರತದ ಮೇಲೆ ಆಕ್ರಮಣ ಮಾಡಿ, 'ಉಪಕಾರಕ್ಕೆ ಪ್ರತಿಯಾಗಿ ಅಪಕಾರ' ಮಾಡಿದ್ದಕ್ಕೆ ಸಿಡಿಮಿಡಿಗೊಂಡ ಬಾಲಕ-

"ಹಾಲುಣಿಸಿದ ಕೈ ಕಚ್ಚಿದ
ಈ ಹಳದಿಯ ಹಾವ
ಸೀಳುವೆನು ಹೂಳುವೆನು
...............................
ಗರುಡನ ಮರಿ ಹೆದರುವದೆ
ಇಲಿ ತಿನ್ನುವ ಹಾವ್ಗೆ"

(ಮರುಳಯ್ಯ ಸಾ.ಶಿ. (ಸಂ), ೧೯೮೧, ಪುಟ-೫೧೯)

ಚೀನಾವು ಇಲಿ ತಿನ್ನುವ ಕ್ಷುಲ್ಲಕ ಹಾವಾದರೆ, ತಾನು ವಿಷ ಸರ್ಪವನ್ನೇ ತಿನ್ನುವ ಗರುಡನ ಮರಿ ಇದ್ದ ಹಾಗೆ. 'ತಾಯಿ' ಋಣ ತೀರಿಸಲು ಹಗೆಯನ್ನಳಿಯದೆ ತಾನು ಮರಳುವದಿಲ್ಲವೆಂದು ಪ್ರತಿಜ್ಞೆ ಮಾಡುತ್ತಾನೆ.

ಪುರಾಣಿಕರ (ಮೊದಲು ಮಾನವನಾಗು-ಸಂಕಲನದ) 'ಯುದ್ಧಸ್ವ' ಕವನವೂ ಕೂಡಾ ೧೯೬೨ ರ ಚೀನಾದಾಳಿಯನ್ನು ಕುರಿತು ರಚಿಸಿದ್ದಾಗಿದೆ. ಇದರಲ್ಲಿ ಸರ್ವವನ್ನು ಸಮರ್ಪಿಸಿ ಯುದ್ಧಕ್ಕೆ ಹೋರಾಡಲು ಕರೆಕೊಟ್ಟಿರುವರು. ಈ ಹಗೆಯ ಹಾವಿಗೆ ಇಲ್ಲಿಯವರಗೆ ಸ್ನೇಹದಿಂದ ಹಾಲೆರೆದುದು ಸಾಕಿನ್ನು. ಆ ಹೆಬ್ಬಾವಿನ ಹಲ್ಲನ್ನು ಮುರಿ, ಅದು ಹಾವಾದರೆ ನೀನು ಗರುಡನಾಗಿ ಅದರ ಹೆಡೆಯನ್ನು ಹರಿ, ಅಲ್ಲಿಯೇ ಹಿಮದಲ್ಲಿ ಹುಗಿ-ಎಂದು ಮುಂತಾಗಿ ಸಲಹೆ ಕೊಟ್ಟಿರುವರು. ಈ ಭಯಂಕರ ಯುದ್ಧದ-ದಾವಾಗ್ನಿಯಲ್ಲಿ ಹಗೆ ಸುಟ್ಟು ಹೋಗಲೆಂದು ಶಪಿಸಿರುವರು. ಕವಿಯ ಕರೆಗೆ ಓಗೊಟ್ಟು ವೀರರು ಗೆಲ್ಲುವೆವು, ಗೆದ್ದೇ ವಿಶ್ರಮಿಸುತ್ತೇವೆಂದು ಪಣ ತೊಡುತ್ತಾರೆ. ಇವರ-

"ಈ ಉಕ್ಕಿನ ನಿರ್ಧಾರವು
ಒಕ್ಕೊರಲಲಿ ಉಕ್ಕಿ
ಸೊಕ್ಕಡಗಲಿ ಚೀಣೀಯರ
ಹೋಗಲಿ ಹುಡಿಮುಕ್ಕಿ!"

(ಸಿದ್ದಯ್ಯ ಪುರಾಣಿಕ, ೧೯೬೯, ಪುಟ-೧೨)

-ಎಂದು ಶಪಿಸಿರುವರು. ಭರತ ಭೂಮಿ ಬಲಿಯನ್ನು ಬೇಡುತ್ತಿದೆ. ಇದಕ್ಕೆ ಶತ್ರುಗಳನ್ನೇ ಕೊಂದು ಬಲಿಕೊಡಬೇಕೆಂದಿರುವನು ಕವಿ. ವೀರ ಯೋಧರ ತಮ್ಮ ತನು-ಮನ-ಧನಗಳನ್ನು ಶಾಸ್ತ್ರಕ್ಕೆ ಸಲ್ಲಿಸಿ ತಮ್ಮ ರಕ್ತದ ಕಾಣಿಕೆಯನ್ನೇ ಶ್ರಮದ ಬೆವರಿನ ಕಾಣಿಕೆ ಎಂದು ತಿಳಿದು ಭಾರತವನ್ನು ಬಲಪಡಿಸಬೇಕು. "ಪ್ರತಿ ಊರು ಕಿತ್ತೂರಾಗಲಿ, ಪ್ರತಿಮನೆಯೂ ದುರ್ಗವಾಗಲಿ, ಕನ್ನಡಿಗರ ಕೆಚ್ಚು ಕಿಚ್ಚಾಗಲಿ, ಪ್ರತಿಯೊಬ್ಬ ಕನ್ನಡತಿಯರ ಎದೆಯಲ್ಲಿ ಓಬವ್ವನ ರೊಚ್ಚು ಮಿಡಿಯಲಿ"-ಎಂದು ಹಾರೈಸುವಲ್ಲಿ, ಕನ್ನಡಿಗರ ಶೌರ್ಯ ಸಾಹಸದ ಪ್ರತಿಮೆಗಳನ್ನು ಕೊಡಲು ಮರೆತಿಲ್ಲ. ಈ 'ಯುದ್ಧಸ್ವ'ಕ್ಕೆ ವಿಶ್ವವೇ ಬೆರಗಾಗಲಿ, ಇದೇ ನಮ್ಮ ಗರ್ಜನೆ, ಘೋಷಣೆ, ಸ್ವರ, ಧ್ಯೇಯ, ಧರ್ಮ ರಾಷ್ಟ್ರದ ಕರೆಯೂ ಆಗಿದೆ.

ಇವರ (ಇದೇ ಸಂಕಲನದ) ಇನ್ನೊಂದು ಕವನ-"ಕೈಗೆ ಬರಲಿ ಕೋವಿ!"ಯು ೧೯೬೫ ರಲ್ಲಿ ಪಾಕಿಸ್ತಾನದೊಂದಿಗೆ ನಡೆದ ಯುದ್ಧವನ್ನು ಕುರಿತಿದೆ. ನೆರೆ- ಹೊರೆ ರಾಷ್ಟ್ರಗಳು ಯಾವಾಗ ಶತ್ರುಗಳಾಗುತ್ತಾರೆ, ಯಾವಾಗ ಮಿತ್ರರಾಗುತ್ತಾರೆಂದು ತಿಳಿಯದಾಗಿದೆ. ಪಾಕಿಸ್ತಾನವು ನಮ್ಮ ನೆಲವನ್ನು ಆಕ್ರಮಿಸಿ ಮಿತ್ರದ್ರೋಹ 'ಕಾರ್ಯವೆಸಗಿದೆ. ಆದರೆ ಇದನ್ನು ವಿಶ್ವಸಂಸ್ಥೆಗೆ ದೂರಿ ಫಲವಿಲ್ಲ : ಯುದ್ಧವೇ ಅನಿವಾರ್ಯ. ರಣ ಭೈರವಿಯ ಕರೆಗೆ ಓಗೊಟ್ಟು ಯುದ್ಧದಲ್ಲಿ-

"ಪ್ರಳಯ ರುದ್ರನಾಗಿ ಸಾಗು
ಸಿಡಿಲ ಗಿಡಗವಾಗಿ ಎರಗು
ರಿಪು ಸೈನ್ಯವ ತಿಂದು ತೇಗು"
(ಸಿದ್ದಯ್ಯ ಪುರಾಣಿಕ, ೧೯೬೬, ಪುಟ-೧೫)

-ಎಂದು ವೀರಸಂದೇಶವನ್ನು ಸಾರಿರುವರು. ನಮ್ಮ ಕಣ್ಮುಂದೆ ಯುದ್ಧ ನಡೆದಂತೆಯೇ ಇರಿ, ಕೊಲ್ಲು, ಕೊಚ್ಚು, ತೂರು!-ಎಂದು ನಿರ್ದೇಶಿಸಿರುವರು. ನಮ್ಮ ಯೋಧರ ಸಾಹಸ-ಶೌರ್ಯಗಳ ಮುಂದೆ ಪಾಕಿಸ್ತಾನವು ಸೋಲೊಪ್ಪಿಕೊಂಡು ಸಂಧಾನ ಸ್ನೇಹ ಮಾಡಿಸಲು ರಷ್ಯಾಕ್ಕೆ ಮೊರೆಯಿಡುತ್ತದೆ. ಇದಕ್ಕಾಗಿ ರಷ್ಯಾದಿಂದ ಭಾರತಕ್ಕೆ ಕರೆಬಂದಿದ್ದನ್ನು ಕವಿ- 'ಕರೆಯುತಿಹಳು ಶಾಂತಿ ದೇವಿ ಆಗು ಸ್ನೇಹ ಜೀವಿ!"-ಎಂದು ಉಪದೇಶಿಸಿರುವರು. ಹಿಂದಿನ ಯುದ್ಧದ ಕಹಿಯನ್ನು ಮರೆತು ಇನ್ನು ಮೈತ್ರಿ ಬೆಳೆಯಲಿ, ಮೈತ್ರಿ ಮಾಡಿಕೊಂಡ ಅಂದಿನ ಪ್ರಧಾನಿ- ಲಾಲ್‌ಬಹದ್ದೂರ ಶಾಸ್ತ್ರಿಯವರಿಗೆ ಗೌರವ ಸಲ್ಲಿಸಿರುವರು.

ಜಿ.ಎಸ್. ಶಿವರುದ್ರಪ್ಪನವರ-"ಚಂದ್ರಮುಖಿಗೆ'-ಕವನವು ಚೀನಾ ದಾಳಿಯನ್ನು ಕುರಿತಿದೆ. ಚೀನಿಯರ ವಿಶ್ವಾಸ ದ್ರೋಹದ ಆಕ್ರಮಣದ ಪ್ರವೃತ್ತಿಯನ್ನು ಹೀಗೆ ಹೇಳಿದ್ದಾರೆ:

"ಕಾಮಾಲೆ ಕಾಲನು ತಿಂದು ನೆಟ್ಟಗೆ ನುಗ್ಗಿದವ ನೀನು
ಅಭ್ಯಾಸವಲ್ಲವಯ್ಯ ನಮಗೆ ನಿನ್ನ ಶೀತಲವಿದ್ಯೆ
ನಮಗೋ ಬೆಚ್ಚಗಿನ ಪ್ರೀತಿ ವಿಶ್ವಾಸದಲಿ ಬಹಳ ಶ್ರದ್ಧೆ"
(ಸುಭಾಸ ಸಂ. ಪೊರೆ, ೧೯೯೯, ಪುಟ-೩೧೪)

ನಾವು ಅಂಥಹ ವಿಶ್ವಾಸದ್ರೋಹ ಕಾರ್ಯವೆಸಗಲಾರೆವು, ನಮಗೇನಿದ್ದರೂ ಪ್ರೀತಿ ವಿಶ್ವಾಸದಿಂದ ಇರಲು ಬಯಸುತ್ತೇವೆ. ಇದನ್ನು ಅದು ದುರ್ಬಲತೆಯೆಂದು ತಿಳಿದುಕೊಂಡಿದೆ. ಅವರ ಆಕ್ರಮಣಕ್ಕೆ ಪ್ರತಿಯಾಗಿ ನಾವು ತಕ್ಕ ಉತ್ತರ ಕೊಡಲಬಲ್ಲೆವು. ಆಗಾಗ ಕೆಣಕಿದ ನೆರೆ ಹೊರೆಯ ರಾಷ್ಟ್ರಗಳಿಗೆ ನಮ್ಮ ಸಾಮರ್ಥ್ಯ ತೋರಿಸಲು ಹೊಸ ತಂತ್ರ-ಮಂತ್ರ ರೂಢಿಸಿಕೊಂಡಿರುವದನ್ನು ಹೀಗೆ ವರ್ಣಿಸಿರುವರು :

"ನೇಗಿಲ ಮೇಲೆ ಕೈ ಊರಿದ್ದರೂ ಬಗಲಲ್ಲಿ ತೂಗುಬಿಟ್ಟಿದ್ದೇವೆ
ಒಂದೊಂದು ಬಂದೂಕ, ನೀವಿದ್ದರೇನು ಎಲ್ಲೋ ಎತ್ತರ
ಕೊಡಬಲ್ಲೆವಯ್ಯಾ ನಾವು, ಕೆಣಕಿದ ಸಿಡಿಗುಂಡಿನ ಉತ್ತರ"
(ಸುಭಾಸ ಸಂ. ಪೊರೆ, ೧೯೯೯, ಪುಟ-೩೧೫)

ನಾವು ಕೃಷಿಗೆ ಆದ್ಯತೆ ಕೊಟ್ಟಿದ್ದರೂ, ಚೀನಾದಂತಹ ದೊಡ್ಡ ರಾಷ್ಟ್ರವನ್ನು ಎದುರಿಸಲು ಸಮರ್ಥವಾದ ಆಧುನಿಕ ಯುದ್ಧಾಸ್ತ್ರಗಳನ್ನೂ ಹೊಂದಿದ್ದೇವೆಂಬುದನ್ನು ಬಿಂಬಿಸಿದ್ದಾರೆ. ಚೀನಿ

ಆಕ್ರಮಣಕಾರರನ್ನು ಹಿಮ್ಮೆಟ್ಟಿಸಿ ಸಾಹಸ ಶೌರ್ಯದಿಂದ ಹೋರಾಡಿ ಹಿಮಾಲಯದಲ್ಲಿ ಗಡಿಕಾಯುತ್ತಿರುವ ಸೈನಿಕರಿಗೆ ಕವಿ,–

"ರಕ್ತ ಲಿಪಿಯನು ಬರೆದು ಗಡಿಕಾಯ್ವ ಸೋದರರೆ
ತುಡಿಯುತಿದೆ ಇದೋ ಈ ನನ್ನ ಸಿಡಿಗುಂಡಿನೆದೆ
ನಿಮಗಾಗಿ ನಿಮ್ಮ ಸಾಹಸಕ್ಕಾಗಿ ಕೃತಜ್ಞತೆಯ ವಂದನೆ"
(ಸುಭಾಸ ಸಂ. ಪೊರೆ, ೧೯೯೯, ಪುಟ–೧೧೫)

–ಎಂದು ಹೃತ್ಪೂರ್ವಕ ಅಭಿವಂದನೆ ಸಲ್ಲಿಸಿರುವರು.

ಕೆ.ಎಸ್. ನಿಸಾರ ಅಹಮದ್‌ರು 'ನೆಲನಮ್ಮದು ಜಲ ನಮ್ಮದು' ಕವನದಲ್ಲಿ ಚೀನಾವು ಭಾರತದ ಗಡಿಪ್ರದೇಶದ ಮೇಲೆ ಆಕ್ರಮಣ ಮಾಡಿರುವದನ್ನು–"ಮನೆ ಬಾಗಿಲು ಹೊಗಲು ಬಂದ ಪರದೇಶದ ಹುಲು ಮದಾಂಧ"–ನೆಂದು ಖಂಡಿಸಿರುವರು. ಭಾರತವು ಶತ್ರುವನ್ನು ದಮನಮಾಡಿ ದಿಟ್ಟತನದಿಂದ ಹಿಮ್ಮೆಟ್ಟಿಸಿ ಗಡಿಗಳನ್ನು ಭದ್ರಗೊಳಿಸಿರುವದನ್ನು ಹೇಳಿದ್ದಾರೆ. 'ಅಭಿವಂದನೆ ನಿಮಗೆ' ಕವನದಲ್ಲಿ ಚೀನಾದೊಡನೆ ನಡೆದ ಯುದ್ಧದಲ್ಲಿ–

"ಗಿರಿನೆತ್ತಿಯ ಎತ್ತರದಲ್ಲಿ । ಅಲ್ಲಿ ನಾಡಿನುತ್ತರದಲ್ಲಿ
ಆಪಘಾನದಲ್ಲಿ, ಲಡಾಖನಲ್ಲಿ । ಹಿಮದ ಚಿರವಿಲಾಸದಲ್ಲಿ
ತಾಯ ಮಾನ ಉಳಿಸಲೆಂದು ಕಳೆದ ನೆಲವಗಳಿಸಲೆಂದು"
(ಅಯ್ಯನಗೌಡರ. ಎಸ್.ವಿ. ೧೯೯೯, ಪುಟ–೭)

–ಹೋರಾಡಿದ ನಮ್ಮ ಯೋಧರ ಸಾಹಸ–ಶೌರ್ಯಗಳನ್ನು ಕೊಂಡಾಡಿ ಅವರಿಗೆ ವಂದನೆ ಸಲ್ಲಿಸಿರುವರು.

ಬಿ.ಎ. ಸನದಿಯವರು ಹಲವಾರು ಕವನಗಳಲ್ಲಿ ವಿದೇಶಿ ಆಕ್ರಮಣ ಪ್ರತಿಭಟಿಸಿ ಅವರ ವಿರುದ್ಧ ಹೋರಾಡಲು ಕರೆಕೊಟ್ಟಿರುವರು. 'ವೀರ ಕಂಕಣ' ಸಂಕಲನದ ಇದೇ ಹೆಸರಿನ ಕವನದಲ್ಲಿ ಚೀನಾದ ವಿರುದ್ಧ ಆಕ್ರೋಶ ವ್ಯಕ್ತಪಡಿಸಿ ಹೀಗೆ ಹೇಳಿದ್ದಾರೆ.

"ನಮ್ಮ ಸತ್ವವ ಕೆಣಕುವಾಟಕೆ
ಭೀತಿಯೇತಕೆ ಏಳಿರೋ
ತತ್ವಹೀನರ ಹೆಣಕೆ ಸತ್ಯದ ಹೂ ವನೇರಿಸಿ ಹೂಳಿರೊ!"
(ವಸಂತಕುಮಾರ ತಾಳ್ತಜೆ, ೧೯೯೬, ಪುಟ–೫೧)

ಅದೇ ರೀತಿ 'ಜಯದಾಣೆ'–ಕವನದಲ್ಲಿಯೂ ನಮ್ಮ ಮನೆಯ ಮುಂದೆ ಅಂಗಳದಲ್ಲಿ ಕಸಬಿದ್ದಿರುವದನ್ನು ಪ್ರತಿನಿತ್ಯ ಮುಂಜಾವಿನಲ್ಲಿ ಗೂಡಿಸಿ ಚೆಲ್ಲುತ್ತೇವೆ. ಹೀಗಿರುವಾಗ ಇನ್ನು ನಮ್ಮ ಮನೆಯನ್ನು ಯಾರೋ ಕಬಳಿಸಲು ಬಂದರೆ ನಾವು ಸುಮ್ಮನೆ ಮಲಗಿರುತ್ತೇವೆಯೇ? ಇಲ್ಲಿ ಹಾಗೆಯೇ

ಚೀನಾವು ನಮ್ಮ ದೇಶವನ್ನು ಕಬಳಿಸಿದೆ. ಇದರ ವಿರುದ್ಧ ಹೋರಾಟವೆಂಬ ರಥಕ್ಕೆ ಎಲ್ಲರೂ ಕೈ ಹಚ್ಚಬೇಕೆಂದು ಕವಿ ಕೇಳಿಕೊಂಡಿದ್ದಾರೆ. 'ಸಮರವಾಣಿ'-ಕವನದಲ್ಲಿ ರೋಮನಗರ-ಉರಿಯುತ್ತಿರುವಾಗ ಅದರ ಅರಸ 'ನಿರೋ' ಪಿಟೀಲು ನುಡಿಸುತ್ತಿದ್ದನಂತೆ. ಹಾಗೆ ದೇಶಕ್ಕೆ ಆಪತ್ತೊದಗಿದ ಸಂದರ್ಭದಲ್ಲಿ ಕವಿ ತಾನು ಆ 'ನಿರೋ' ನಂತೆ ಅಗಲಾರೆನೆಂದಿದ್ದಾನೆ. ಆ ಸಂದರ್ಭದಲ್ಲಿ-

"ಹಗೆಯ ಧಗೆಗೆ ದೇಶವೆಲ್ಲ ಕುದಿಯುತಿರುವುದು
ರೋಮ ರೋಮದಲ್ಲಿ ರಕ್ತ ತುಳುಕುತಿರುವುದು
ರಾಷ್ಟ್ರಮಾನ ವೆಮ್ಮಮಾನ ಅದುವೆ ಸಿರಿತನ
ಸುಮ್ಮನಿರದ ಕಾವು ಭರತ ಕುಲವ ತಟ್ಟಿದೆ!"

(ವಸಂತಕುಮಾರ ತಾಳ್ತಜೆ, ೧೯೯೬, ಪುಟ-೪೭)

-ಎಂದು ಚೀನಾದ ಬಗೆಗೆ ದ್ವೇಷ, ಅಕ್ರೋಶ, ಇಡೀ ದೇಶದ ಜನತೆಯ ನರ-ನಾಡಿಗಳಲ್ಲಿ ತುಂಬಿ ತುಳುಕುತ್ತಿದೆ-ಎಂದು ಹೇಳಿದ್ದಾರೆ. ಇವರ 'ಹಿಮಗಿರಿಯ ಮುಡಿಯಲ್ಲಿ'-ಕವನ ಸಂಕಲನ ಇವರ ಉಜ್ವಲ ರಾಷ್ಟ್ರೀಯತೆಗೆ ನಿದರ್ಶನವಾಗಿದೆ. ಇದರ ಶೀರ್ಷಿಕೆಯ ಹೆಸರಿನ ಕವನದಲ್ಲಿ ಆತ್ಮ ವಿಶ್ವಾಸದಿಂದ ಸಾವು-ಬದುಕು ಲೆಕ್ಕಿಸದೇ ಹೋರಾಡುವುದನ್ನು ಹೀಗೆ ಹೇಳಿದ್ದಾರೆ:

"ಆತ್ಮ ಬಲ ವಿಶ್ವಬಲ
ಹುರಿಗೊಳಿಸಿ ಹೋರುವೆವು
ಸತ್ತರೂ, ಬದುಕಿದರು, ರಣ ಪುಣ್ಯಕಾಶಿ!"

(ವಸಂತಕುಮಾರ ತಾಳ್ತಜೆ, ೧೯೯೬, ಪುಟ-೪೮)

-ಎಂಬ ದಿಟ್ಟ ನಿಲುಮೆಯನ್ನು ತಾಳಿರುವರು. ಹೋರಾಟದ ಕರೆಗೆ ಓಗೊಡದೆ ತಟಸ್ಥರಾಗಿರುವವರನ್ನು ಕುರಿತು 'ದೀಕ್ಷೆ ತೊಡು'-ಕವನದಲ್ಲಿ "ನಾಡ ಕರೆ ನಾಡಿಗರ ನಾಡಿಗಳ ಮಿಡಿಯುತಿರೆ ತಣ್ಣಗಿರುವೆಯಾ ಮಣ್ಣಿನಾರಾಧಕ?"-ಎಂದು ಪ್ರಶ್ನಿಸಿ, ಈ ನೆಲದ ಋಣ ತೀರಿಸಲು ರಾಷ್ಟ್ರಕ್ಕಾಗಿ ಹೋರಾಡುವ ದೀಕ್ಷೆ ತೊಡಲು ಹೇಳಿರುವರು. ದೇಶಕ್ಕೆ ಆಪತ್ತೋದಗಿದಾಗ ದುಡಿಯದೆ ಭೂಮಿಗೆ ಭಾರವಾಗಿ ಬೊಜ್ಜು ಬೆಳೆಸಿದರೆ ಏನು ಪ್ರಯೋಜನ!.

ನೆರೆ ಹೊರೆಯ ರಾಷ್ಟ್ರಗಳು ಮಿತ್ರರಾಗಿ ನಡೆದುಕೊಂಡರೆ ಮಿತ್ರರಾಗಿರುತ್ತೇವೆ. ಮಿತ್ರ ದ್ರೋಹಮಾಡಿದರೆ ಶತ್ರುಗಳಾಗಿ ಅವರಿಗೆ ತಕ್ಕ ಉತ್ತರ ಕೊಡುತ್ತೇವೆಂಬುದನ್ನು 'ಚಂದನ'- ಕವನದಲ್ಲಿ ಹೀಗೆ ತಿಳಿಸಿರುವರು:

"ಮಿತ್ರರಾಗಿ ಬರುವ ಜನಕೆ
ನಮ್ಮ ಪ್ರೀತಿ ಚಂದನ,
ಮಿತ್ರ ದ್ರೋಹಿ ಶತ್ರುಗಳಿಗೂ
ಅದುವೆ ರಕ್ತ ಲೇಪನ"

(ವಸಂತಕುಮಾರ ತಾಳ್ತಜೆ, ೧೯೯೬, ಪುಟ-೪೭)

–ಎಂದು ಕವಿ ಚೀನಾವನ್ನು ಕುರಿತು ಹೇಳಿದ್ದರೂ, ಇತ್ತೀಚೆಗೆ ೧೯೯೯ ರಲ್ಲಿ ಭಾರತವು ಪಾಕಿಸ್ತಾನಕ್ಕೆ ಲಾಹೋರಯಾತ್ರೆ ಮಾಡಿ ಸ್ನೇಹದ ಹಸ್ತ ಲಾಘವ ಮಾಡಿದರೆ; ಅದರ ಹಿಂದಯೇ ಪಾಕಿಸ್ತಾನವು ಕಾರ್ಗಿಲ್ ಪ್ರದೇಶ ಆಕ್ರಮಿಸಿ ಮಿತ್ರದ್ರೋಹ ಕಾರ್ಯವೆಸಗಿತು. ಭಾರತವು ದಿಟ್ಟತನದಿಂದ ಅದನ್ನು ಹಿಮ್ಮೆಟ್ಟಿಸಿತು. ಇದನ್ನು ಪ್ರತಿಬಿಂಬಿಸುವಂತಿದೆ–ಈ ಕವನ.

ಹೀಗೆ ಸ್ವಾತಂತ್ರ್ಯೋತ್ತರದ ಕಾಲದಲ್ಲಿ ಪಾಕಿಸ್ತಾನ ಮತ್ತು ಚೀನಾ ದೇಶಗಳು ಭಾರತದ ಪ್ರದೇಶವನ್ನು ಆಕ್ರಮಿಸಿಕೊಂಡಾಗ ಯುದ್ಧ ಸಂಭವಿಸಿದವು. ಆ ಸಂದರ್ಭದಲ್ಲಿ ನವೋದಯ ಕವಿಗಳು ವೈರಿ ರಾಷ್ಟ್ರಗಳ ವಿರುದ್ಧ ಆಕ್ರೋಶ ವ್ಯಕ್ತಪಡಿಸಿರುವರು. ಜನತೆಗೆ ವೀರಾವೇಶದಿಂದ ಹೋರಾಡಲು ಕರೆಯಿತ್ತಿರುವರು. ವೀರಾವೇಶದಿಂದ, ದಿಟ್ಟತನದಿಂದ ಹೋರಾಡಿದ ಆ ಹೋರಾಟವನ್ನು ಕುರಿತು ಮೆಚ್ಚುಗೆ, ಪ್ರಶಂಸೆ ವ್ಯಕ್ತಪಡಿಸಿರುವರು.

**೩.೬.ಗಾಂಧೀಜಿಯವರನ್ನು ಕುರಿತು:**

ಮಹಾತ್ಮಾ ಗಾಂಧೀಜಿಯವರು ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ನೇತೃತ್ವವಹಿಸಿಕೊಂಡು ಇದರ ಜೊತೆಗೆ ಅನೇಕ ಸಮಾಜೋದ್ಧಾರಕ ರಚನಾತ್ಮಕ ಕಾರ್ಯಗಳನ್ನು ಹಮ್ಮಿಕೊಂಡು ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟರು. ನಮ್ಮನ್ನು–ನವ–ಭಾರತದ ಹೆಬ್ಬಾಗಿಲಿಗೆ ತಂದು ನಿಲ್ಲಿಸಿ ಮುಂದೆ ಹೇಗೆ ಹೋಗಬೇಕೆಂದು ಮಾರ್ಗ ತೋರಿಸಿದರು. ಜಾಗತಿಕ ಮಟ್ಟದಲ್ಲಿ ದೇಶದಿಂದ ವ್ಯಕ್ತಿಯನ್ನು ಗುರುತಿಸಿದರೆ ಅದು ಆ ವ್ಯಕ್ತಿಯ ಶ್ರೇಷ್ಠತೆಯ ಮಾನದಂಡವಲ್ಲ, ಅದಕ್ಕೆ ಬದಲಾಗಿ ವ್ಯಕ್ತಿಯಿಂದ ದೇಶವನ್ನು ಗುರುತಿಸಿದರೆ, ಆ ವ್ಯಕ್ತಿಯ ವಿಶ್ವಮಾನ್ಯ ವ್ಯಕ್ತಿತ್ವಕ್ಕೆ ನಿದರ್ಶನವಾಗುತ್ತದೆ. ಗಾಂಧೀಜಿಯವರು ಇಂಥವರು. ಗಾಂಧಿಯೆಂದರೆ ಇಂಡಿಯಾ, ಇಂಡಿಯಾ ಎಂದರೆ ಗಾಂಧಿ ಎಂದು ಅಂದು ವಿದೇಶದವರು ತಿಳಿದಿದ್ದರು.

ಗಾಂಧೀಜಿಯವರ ಪ್ರಭಾವದಿಂದ ಹುಲ್ಲು ಕಡ್ಡಿಯೂ ಸಹಿತ ಬ್ರಹ್ಮಾಸ್ತ್ರವಾಗಿ ಮಾರ್ಪಡುತ್ತಿತ್ತು. ಯಾವ ಚೇತನವೂ ಇದರಿಂದ ತಪ್ಪಿಸಿಕೊಂಡು ಸುಪ್ತವಾಗಿರುವುದು ಸಾಧ್ಯವಿದ್ದಿರಲಿಲ್ಲ. ಇಡೀ ದೇಶಕ್ಕೆ ಸ್ಫೂರ್ತಿಯ ಸೆಲೆಯಾಗಿದ್ದರು. ಗಾಂಧೀಜಿಯವರ ಪ್ರಭಾವದಿಂದ ದೇಶದ ಜನತೆ ಸ್ವಾತಂತ್ರ್ಯ ಅಂದೋಲನಕ್ಕೆ ಸ್ಫೂರ್ತಿಗೊಂಡಂತೆ ಸಾಹಿತಿಗಳಿಗೂ ಸ್ಫೂರ್ತಿಯಾದರು. ಸಾಹಿತಿಗಳು ಗಾಂಧೀಜಿಯವರನ್ನು ಕುರಿತು ಬರೆಯುವದೆಂದರೆ, ದೇಶದ ಸ್ವಾತಂತ್ರ್ಯ ಚಳುವಳಿಯನ್ನೇ ಕುರಿತು ಬರೆದಂತೆಯೇ. ಆ ಸಾಹಿತ್ಯವೂ ಜನತೆಗೆ ಸ್ಫೂರ್ತಿಯಾಯಿತು. ಜನತೆಯ ಹೋರಾಟವೂ ಸಾಹಿತಿಗಳಿಗೆ ಸ್ಫೂರ್ತಿಯಾಯಿತು.

ಸ್ವಾತಂತ್ರ್ಯ ಆಂದೋಲನ ಮತ್ತು ಇದರ ನಾಯಕ ಗಾಂಧೀಜಿಯವರು, ಸಾಹಿತಿಗಳಿಗೆ ಪ್ರಭಾವ ಬೀರಿದರೆ ಜನತೆಗೂ ಈ ಸಾಹಿತ್ಯ ಪ್ರೇರಣೆ, ಸ್ಫೂರ್ತಿ ನೀಡಿತು. ಹೀಗೆ ಒಂದಕ್ಕೊಂದು ಪೂರಕ-ಪ್ರೇರಕಗಳಾದವು. ಭಾರತದಲ್ಲಿ ಅಷ್ಟೇ ಅಲ್ಲ, ವಿಶ್ವದ ಹಲವಾರು ಭಾಷೆಯ ಲೇಖಕರಿಗೆ ಗಾಂಧೀಜಿಯವರು ಪ್ರಭಾವ ಬೀರಿದ್ದಾರೆ. ಇವರ ನಿಡುಬಾಳನ್ನು ಕುರಿತು ಕೃತಿ ರಚಿಸಿರುವರು. ಹಾಗೆಯೇ ಕನ್ನಡ ಸಾಹಿತಿಗಳಿಗೂ ಗಾಂಧೀಜಿಯವರನ್ನು ಕುರಿತು ಕಾವ್ಯರಚಿಸಿರುವರು. ಅವುಗಳನ್ನೂ ನೋಡಲಾಗಿದೆ.

ಗಾಂಧೀಜಿಯವರನ್ನು ಕುರಿತು ಕನ್ನಡದ ನವೋದಯದ ಕವಿಗಳು ಕಾವ್ಯ ರಚಿಸಿರುವರು. ಇದೇ ಒಂದು ಸಂಶೋಧನಾ ಮಹಾಪ್ರಬಂಧದ ವಸ್ತು-ವಿಷಯವಾಗುವಷ್ಟು ವ್ಯಾಪ್ತಿಯನ್ನು ಹೊಂದಿದೆ. ಆದರೆ ನನ್ನ ಅಧ್ಯಯನಕ್ಕೆ ಪೂರಕವಾಗಿರಲೆಂದು ಮಿತಿಗೊಳಿಸಿ ಪ್ರಮುಖವಾದವುಗಳನ್ನು ಮಾತ್ರ ಅವಲೋಕಿಸಲಾಗಿದೆ. ಗೋವಿಂದ ಪೈಯವರು 'ಮಹಾತ್ಮರ ಉಪವಾಸ'-ಕವನದಲ್ಲಿ ಗಾಂಧೀಜಿಯವರ ವ್ಯಕ್ತಿತ್ವದ ಚಿತ್ರಣವನ್ನು ಕೊಟ್ಟಿರುವರು. ಇದು ಗಾಂಧೀಜಿಯವರು ೧೯೨೪ ರಲ್ಲಿ ೨೧ ದಿನ ಉಪವಾಸ ಕೈಗೊಂಡ ಬಗೆಯನ್ನು-

"ಮಂಜಿನೇಕಾಂತದಲಿ ಶ್ರೀ ಹರಿಯ ಹಂಬಲಿಸಿ,
ಹೃದಯ ಕ್ಷುಧೆಯನ್ನೂಡುತೊಡಲ ಹಸಿವಿಂದಂ,
ಮನದ ರಂಭೆಯ ಗೆದ್ದು ಶುಕನಾತನನ್ನೊಲಿಸಿ
ಭಕ್ತಿ ಗಂಗೆಯ ಭಾರತದ ತೃಷೆಗೆ ತಂದಂ"

(ಗೋವಿಂದ ಪೈ, ೧೯೬೨, ಪುಟ-೪೫)

ಶ್ರೀ ಹರಿಯನ್ನು ಏಕಾಂತದಲ್ಲಿ ಧ್ಯಾನಿಸಿ ಬರಿ ದೈಹಿಕವಾಗಿಯಲ್ಲ, ಹೃದಯದಲ್ಲಿ, ಅಂತಃಕರಣದ ಹಸಿವಿನಿಂದ ಹಂಬಲಿಸುತ್ತಿತ್ತು. ತನು-ಮನಗಳನ್ನು ಗೆದ್ದು ಭಗೀರಥನು ಗಂಗೆಯನ್ನು ಹರಿಸಿದಂತೆ ನೀನು ತನು-ಮನಗಳನ್ನು ಗೆದ್ದು ಭಾರತದ ಹಸಿವಿಗೆ ಭಕ್ತಿಗಂಗೆಯನ್ನು ಹರಿಸಿದೆ. ನೀನು ದಿಲ್ಲಿಯಲ್ಲಿ ಇಪ್ಪತ್ತೊಂದು ದಿನ ಉಪವಾಸ ಕೈಗೊಂಡು ಅದು ಹೇಗೆ ನೀನು ಇಡಿ ದೇಶಕ್ಕೆ ಪ್ರೇಮ ಬೀಜ ಬಿತ್ತಿದೆಯೋ ಆಶ್ಚರ್ಯವಾಗುತ್ತದೆ. ಗಾಂಧೀಜಿಯವರು ಮಡಿದ ಮೇಲೆ ಸ್ವಾತಂತ್ರ್ಯೋತ್ತರ ಭಾರತಕ್ಕೆ ಅವರ ಅವಶ್ಯಕತೆಯನ್ನು ಕುರಿತು. ಹೀಗೆ ಹೇಳಿರುವರು:

"ಇನ್ನಿನಿಸು ನೀ ಮಹಾತ್ಮ ಬದುಕಬೇಕಿತ್ತು!
ಈಗ ಭಾರತಕತ್ಯಗತ್ಯವಿದೆ ನಿನ್ನ;
ಬಿರುಗಾಳಿಗೊಲೆವ ಹಡಗಂತಿಹುವದದಾಸತ್ತು
ನಿನ್ನ ಹೊರತಾರೊಯ್ಯೆ ರೇವಿನೊಳದನ್ನ?"

(ನಾಯಕ,ಹಾ.ಮಾ.(ಸಂ), ೧೯೮೫, ಪುಟ-೧೬)

ಸ್ವಾತಂತ್ರ್ಯೋತ್ತರ ಭಾರತವು ಹಲವಾರು ಸಮಸ್ಯೆಗಳಿಗೆ ಸಿಕ್ಕು ಜರ್ಝರಿತವಾಗಿ ಬಿರುಗಾಳಿಗೆ ಸಿಕ್ಕ ಹಡಗಿನಂತಾಗಿದೆ. ಈ ಹಡಗನ್ನು ಗಾಂಧೀಜಿಯನ್ನು ಬಿಟ್ಟು ಬೇರೆ ಯಾರಿಗೆ ಬಂದರಿಗೆ ತಲುಪಿಸಲು ಸಾಧ್ಯ? ಅದಕ್ಕಾಗಿ ಸ್ವತಂತ್ರಗೊಂಡ ಭಾರತವನ್ನು ಮುನ್ನೆಡಿಸಿಕೊಂಡು ಹೋಗಲು ಗಾಂಧೀಜಿ ಇನ್ನಷ್ಟು ದಿನ ಬದುಕಬೇಕಾಗಿತ್ತೆಂದು ಅಪೇಕ್ಷಿಸಿರುವರು.

ದಿನಕರ ದೇಸಾಯಿಯವರು ಚೌಪದಿಗಳಲ್ಲಿ ಗಾಂಧೀಜಿಯವರ ವ್ಯಕ್ತಿತ್ವವನ್ನು ಬಣ್ಣಿಸಿರುವರು. ವಿಶ್ವಕ್ಕೆ ವಿಶ್ವವೇ ಅಂದು ಹೋರಾಟದಲ್ಲಿ ಮುಳುಗಿ ಸಂದಿಗ್ಧ ಸ್ಥಿತಿಯಲ್ಲಿತ್ತು. ಏಕತೆ ಎಂಬುದೇ ಇದ್ದಿರಲಿಲ್ಲ. ವಿಶ್ವವನ್ನೇ ಒಂದು ಮಾಡುವ ಶಕ್ತಿ, ವಿಶ್ವಕ್ಕೆ ದಾರಿ ತೋರಿಸುವ ಶಕ್ತಿ ಗಾಂಧೀಜಿಯವರಿಗೆ ಮಾತ್ರ ಇತ್ತು. ಈ ನಾಡು ಆಡಳಿತಾತ್ಮಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ, ಭಾಷಿಕವಾಗಿ ಹಲವಾರು ಭೇದಗಳ ವೈಪರೀತ್ಯದಿಂದಾಗಿ. ಏಕತೆ ಇದ್ದಿರಲಿಲ್ಲ. ಇದನ್ನು ಒಂದು ಮಾಡುವ ಶಕ್ತಿ ಗಾಂಧೀಜಿಯವರಿಗೆ ಮಾತ್ರ ಇತ್ತೆಂದು, ಇದರ ದಾರಿತೋರಿಸುವ ದಿಕ್ಸೂಚಿಯಾಗಿದ್ದರೆಂಬುದನ್ನು ಹೀಗೆ ವರ್ಣಿಸಿರುವರು:

"ತ್ರಿಭುವನಕೆ ದಾರಿ ತೋರಿಸಿದೆ, ಬಾಪೂಜಿ.
ನಿನ್ನ ಕೈಯೊಳಗಿತ್ತು ಕಾಂಚನದ ಸೂಜಿ.
ಚಿಂದಿಯಾದರೂ ಪೃಥ್ವಿ ಹೋರಾಟದಿಂದೆ.
ಅದನು ಹೊಲೆಯುವ ಶಕ್ತಿ ನಿನಗಿತ್ತು, ತಂದೆ"

(ದಿನಕರ ದೇಸಾಯಿ, ೧೯೭೮, ಪುಟ–೧೯೭)

ಗಾಂಧೀಜಿಯವರಿಗೆ, ಎಂಥವರನ್ನು ಮಂತ್ರ ಮುಗ್ಧರನ್ನಾಗಿಸುವ, ಸೋಲಿಸುವ ಆತ್ಮಶಕ್ತಿಯಿತ್ತೆಂಬುದನ್ನು ಹೀಗೆ ಬಿಂಬಿಸಿರುವರು:

ಬಾಪೂಜಿ ನಿನ್ನ ಕೈಯೊಳಗಿದ್ದ ಕೋಲು
ಕೋಲ್ಮಿಂಚಿಗೂ ತಪ್ಪಿಸಬಹುದಲ್ವೆ ಸೋಲು?
ಸಾಮ್ರಾಜ್ಯ ಶಾಹಿಗೂ ಕಲಿಸಿತ್ತು ಬುದ್ಧಿ.
ಇದಕೆ ಕಾರಣ ನಿನ್ನ ಆಂತರಿಕ ಶುದ್ಧಿ."

(ದಿನಕರ ದೇಸಾಯಿ, ೧೯೭೮, ಪುಟ–೩೧೮)

ಹೀಗೆ ಗಾಂಧೀಜಿಯವರ ಸಾಧನೆ ಸಿದ್ಧಿಗಳನ್ನು, ವ್ಯಕ್ತಿತ್ವವನ್ನು ಬಣ್ಣಿಸಿರುವರು. ಆನಂದಕಂದರು (ಕಾರಹುಣ್ಣಿವೆ ಸಂಕಲನದ) 'ಹಗೆಯ ಗೆಳೆಯ' ಕವನದಲ್ಲಿ ಗಾಂಧೀಜಿಯವರು ಹಗೆಗಳಾದ ಬ್ರಿಟೀಷರನ್ನು ಕೊನೆಗೆ ಗೆಳೆಯರನ್ನಾಗಿ ಪರಿವರ್ತನೆ ಮಾಡಿಕೊಂಡ ಅವರ ವ್ಯಕ್ತಿತ್ವವನ್ನು ಬಹಳ ಸೊಗಸಾಗಿ ಚಿತ್ರಿಸಿರುವರು.

ಗಾಂಧೀಜಿಯವರ ಜನನದಿಂದ ಕತ್ತಲೆ ತುಂಬಿದ ಈ ನಾಡಿನಲ್ಲಿ ಬೆಳಕು ಬಿದ್ದು ಶಾಂತಿ–ಸುಖಕ್ಕೆ ನಾಂದಿಯಾಯಿತು. ಭಾರತದ ಪೂರ್ವದ ಪುಣ್ಯವೇ ಪುರುಷ ರೂಪದಲ್ಲಿ (ಗಾಂಧೀ)

ಕರಮಚಂದರ ಮಗನಾಗಿ ಜನಿಸಿದರು. ಅರಿವನ್ನುಂಡು ಬೆಳೆದನು. ತನ್ನ ನಾಡಜನರು ಅನ್ಯರ ವಶವಾಗಿರುವ ದುಃಸ್ಥಿತಿಯನ್ನು ಕಾಣುತ್ತಾನೆ. ಭೂಮಿ ದುಡಿಮೆ ಇವರ ಸಂಪತ್ತು, ಎಲ್ಲವೂ ಇವರದೇ ಆದರೂ ಜನ ಪರದಾಸ್ಯದಿಂದಾಗಿ ಅಸನ- ವ್ಯಸನಕ್ಕಾಗಿ ಪರಿತಪಿಸುತ್ತಿದ್ದರು. ಇದನ್ನು ಕಂಡು ಗಾಂಧಿ 'ಪರದಾಸ್ಯ ಭೂತವ'-ನ್ನೋಡಿಸಲು ಕಂಡುಕೊಂಡ ನೀತಿ, ಕತ್ತಿ-ನೆತ್ತರಿಲ್ಲದ 'ಸತ್ಯಾಗ್ರಹ' ಅಸ್ತ್ರದಿಂದ ಹಗೆಯ ಹಿಂಸೆಯ ಭೀತಿಯನ್ನು ಕಳೆದನು.

"ಭರತ ಧರಣಿಯೊಳೆಲ್ಲ ತಿರುಗುತ
ಮುರಲಿಯೂದಿದ ಮೋಹನ;
ಕುರಿಜನರು ನರಹರಿಗಳಾದರು"

(ಬೆಟಗೇರಿ ಕೃಷ್ಣಶರ್ಮ, ೧೯೫೧, ಪುಟ-೭೯)

ಈತನ ಪ್ರಭಾವದಿಂದ ಇಡಿ ದೇಶದ ಜನತೆಯಲ್ಲಿ ರಾಷ್ಟ್ರೀಯತೆ ಪ್ರಜ್ಞೆ ಜಾಗೃತವಾಯಿತು. ಕುರಿಗಳಂತಿದ್ದವರು ನರಹರಿಗಳಾದರು, ಕೊನೆಗೆ ಗಾಂಧೀಜಿಯವರ ನೇತೃತ್ವದ ಈ ಹೋರಾಟಕ್ಕೆ ಬ್ರಿಟೀಷರು ಸೋತು-

"ಹಗೆಯ ಸೋತನು, ಶರಣು ಬಂದನು,
ಜಗದ ಗುರು ನೀನೆಂದನು;
ನಗುತ ಗಾಂಧಿಯ ಹಗೆಯನಪ್ಪುತ
ಗೆಳೆಯನಾಗಿಯೆ ನಿಂದನು."

(ಬೆಟಗೇರಿ ಕೃಷ್ಣಶರ್ಮ, ೧೯೫೧, ಪುಟ-೮೦)

ಬ್ರಿಟೀಷರು ಸೋತು ಭಾರತಕ್ಕೆ ಸ್ವತಂತ್ರಕೊಟ್ಟರು. ಕಾಮನ್‌ವೆಲ್ತ್ ಸ್ನೇಹಕೂಟ ಕಟ್ಟಿ ಭಾರತವನ್ನು ಅದರ ಸದಸ್ಯನನ್ನಾಗಿ ಮಾಡಿಕೊಂಡು ಗೆಳೆಯನನ್ನಾಗಿ ಮಾಡಿಕೊಂಡಿರುವದನ್ನು ಗಾಂಧೀಜಿಯವರ ಕುರಿತ ಈ ಚಿತ್ರಣದಲ್ಲಿ ಗಾಂಧೀಜಿ ಮತ್ತು ಬ್ರಿಟೀಷರ ಸ್ನೇಹವನ್ನಾಗಿ ಬಿಂಬಿಸಿರುವರು. ಇಂದು ನಾವೆಲ್ಲರೂ ಗಾಂಧೀಜಿಯವರ ಶ್ರಮದಿಂದಲೇ ಭಾರತ ಮುಕ್ತವಾಯಿತೆಂದು ಗಾಂಧೀಜಿಯವರನ್ನು ಅಬಾಲವೃದ್ಧಾದಿಯೆಲ್ಲರೂ ಪೂಜಿಸುತ್ತೇವೆ. (ಇದೇ ಸಂಕಲನದ)- 'ಮಹಾತ್ಮನಿಗೆ'-ಕವನದಲ್ಲಿಯೂ ಅವರ ವ್ಯಕ್ತಿತ್ವವನ್ನು ಬಣ್ಣಿಸಿ ನಮನ ಸಲ್ಲಿಸಿರುವರು. ಗಾಂಧೀಜಿಯವರ ಕಣ್ಣು-ಕಿವಿ-ಮನ-ಬುದ್ಧಿಗಳು ಅಸಾಧಾರಣವಾದವುಗಳು. ಅವರ ಕಣ್ಣು ಕತ್ತಲಲ್ಲೂ ಗುರಿಯ ದಾರಿಕಾಣುವಂತದ್ದು, ಕಿವಿಯು ಮಾತೆಯು ಕಣ್ಣೀರು ಸುರಿಸುವ ಧ್ವನಿ ಕೇಳುವಂತದ್ದು, ಮನಸ್ಸು ದುಷ್ಟ ಕಾರ್ಯದ ಧೂಳಿನಲ್ಲಿದ್ದರೂ ಅದು ತಗುಲದಂತಹದ್ದು, ಅವರ ಬುದ್ಧಿ ಜಗತ್ತಿನಲ್ಲಿಯೇ ಅಪರೂಪವಾದದ್ದು, ಬೆಳಕನ್ನು ನೀಡುವಂತಹದ್ದು, ಇವರ ಉಸಿರು-ಧಮನಿ-ವಾಣಿ-ಗೆಯ್ಮೆ-ಇವುಗಳು ಜಗತ್ತಿಗೆ ಜೀವ, ಚೈತನ್ಯ, ಪ್ರೇಮ,ಜೀವಗಳನ್ನೂ, ಇವರ ಉಸಿರು ಜಗದ ಜಡತ್ವಕ್ಕೆ ಜೀವವನ್ನು

ಕೊಟ್ಟಿತು. ಧಮನಿ (ನರನಾಡಿಗಳು) ಜನರಲ್ಲಿ ಚೈತನ್ಯ ಬಿತ್ತಿತು. ವಾಣಿ ದೇಶದ ದಿಕ್ಕು ದಿಕ್ಕಿಗೂ ಪ್ರೇಮದ ಸಂದೇಶ ತಿಳಿಸಿತು. ಇವರ ಶ್ರಮದ ಪುಣ್ಯ ಜೀವಜಂಗುಳಿಯನ್ನುಳಿಸಿತು.

"ಮೈತ್ರಿಯಿಂದೆ ಶತ್ರುಗಳನು ಸೋಲಿಸಿರುವ ವೀರ,
ಮೃತ್ಯುವನೂ ಮಿತ್ರನಂತೆ ಸ್ವಾಗತಿಸಿದ ಧೀರ,
ನಿನ್ನ ನೌಕೆ ನಂಬಿದರನು ತಲ್ಪಿಸಿತ್ಯೆ ತೀರ
ನೀನು ನಡೆದ ದಾರಿಯದೇ ಸತ್ಯಧರ್ಮಸಾರ"
(ಬೆಟಗೇರಿ ಕೃಷ್ಣಶರ್ಮ, ೧೯೫೧, ಪುಟ-೮೧)

-ಹೀಗೆ ಅವರ ವ್ಯಕ್ತಿತ್ವದ ಗುಣಗಾನ ಮಾಡಿರುವರು. ರಂ.ಶ್ರೀ. ಮುಗಳಿಯವರು (ಬಾಸಿಗ ಸಂಕಲನದ) 'ಮಹಾತ್ಮರನ್ನು ಕುರಿತು' ಕವನದಲ್ಲಿ 'ಬೇಡಿಯೆ ಬರಬೇಕು ನಾಡಿನ ಸೇವೆಯ ಮಾಡುವ ಭಾಗ್ಯಕೆ' ಎಂದು ಆರಂಭವಾಗುವ ಪಲ್ಲವಿಯೊಂದಿಗೆ, ಪದ್ಯದ ಮುಂದಿನ ಭಾಗದಲ್ಲಿ ಗಾಂಧೀಜಿಯವರ ಸೇವೆಯನ್ನು ಶ್ಲಾಘಿಸಿರುವರು. ಗಾಂಧೀಜಿಯವರು ದೇಶವನ್ನು ಬಂಧಮುಕ್ತ ಮಾಡಲು ಉಂಡ ಕಹಿಯನ್ನು "ಸಾಸಿರ ಚೇಳಿನ ಕಡಿತ"-ವೆಂಬ ರೂಪಕ ಕೊಟ್ಟಿರುವರು. ಬಡವ ಬಗ್ಗರ ಬಗೆಗೆ ಕಂಬನಿ ಗೆರೆದಿದ್ದಾರೆ. ತಾಯಿಯ ಬಂಧನ-ಬಿಡುಗಡೆಗಳೇ ತನ್ನ ಆತ್ಮದ ಬಂಧನ-ಬಿಡುಗಡೆಯಾಗಿತ್ತು. ತಾಯಿಯ ಬಿಡುಗಡೆ ಮಾಡಿಸದಿದ್ದರೆ ಸಾಯುವದೇ ನಿಜ. ಗಾಂಧೀಜಿಯವರ ದೈಹಿಕ ರೂಪವನ್ನು, ದೇಶದ ವಿಶ್ವದ, ಭವಿಷ್ಯದ ಅಶೋತ್ತರಗಳಿಗೆ ಮತ್ತು ಅವರ ಧ್ಯೇಯ ತತ್ತ್ವ, ಆದರ್ಶಗಳಿಗೆ, ಪ್ರತಿಮೆಗಳನ್ನಾಗಿ-ಈ ರೀತಿ ವರ್ಣಿಸಿರುವರು:

"ಮುನಿಸಿನ ತೋರಿಕೆ ಚಿಂತೆಯ ಮುದುಡಿಕೆ
ಕನಸಿನ ಕಾಣಿಕೆ ನಗೆ-ನೆರೆ ಬರುವಿಕೆ
ಮನಸಿನ ಭಾವಗಳೆಲ್ಲವು ರಾಷ್ಟ್ರದ
ತನುವಿನೊಳಿರುವೊಲು ಕಾಣುವ ಪುಣ್ಯಕೆ"
(ಮುಗಳಿ ರಂ. ಶ್ರೀ. ೧೯೪೦, ಪುಟ-೫೦)

ಅಲ್ಲದೇ ವಿಶ್ವವೇ ಅವರ ಆತ್ಮ, ವಿಶ್ವದ ಪ್ರಾಣಿಗಳೇ ಅವರ ದೇಹದ ಅವಯವಗಳು, ಸತ್ಯವೇ ಅವರ ಬಲ, ಪಂಡಿತ, ವಿದ್ವಾಂಸರನ್ನು ಮೆಚ್ಚುವ ಅವರ ಬುದ್ಧಿ, ನೀರಿನ ಪೋಷಣೆ ಇಲ್ಲದೆ ಅರಳಿದ ಮೊಗ್ಗಿನಂತಿದೆ. ಹೃದಯದಲ್ಲಿಯೇ ಯೋಗದ ಅಮೃತವನ್ನು ಸುರಿಸುತ್ತ ಸದಾ ಆನಂದದ ಕುರುಹು ಆಗಿದ್ದಾರೆ.

(ಅಪಾರ ಕರುಣೆ ಸಂಕಲನದ) 'ಮಾನವದೇವ' ಕವನದಲ್ಲಿ ಗಾಂಧೀಜಿಯು 'ಮೋಹನದೀಪ್ತಿಯಾಗಿ, ಬಾಳಿನ ಕೀರ್ತಿಯಾಗಿ, ದೇವಮಾನವನಾಗಿ-ಭೂಮಿಗಿಳಿದು ಬಂದು ಮಹತ್ಕಾರ್ಯಗಳನ್ನು ಗೈದ ಬಗೆಯನ್ನು ವರ್ಣಿಸಿರುವರು. ಕಲಿಯಾಗಿಯೂ, ಮುನಿಯಾಗಿಯೂ, ಬದುಕುವ ಬಗೆಯನ್ನು ಶತಶತಮಾನಗಳಿಂದ ಕಂಡುಕೊಳ್ಳುವದು ಸಾಧ್ಯವಾಗಿರಲಿಲ್ಲ'. ಅದನ್ನು

ಗಾಂಧೀಜಿ ಕಂಡುಕೊಂಡರು. ಕವಿಯು ಗಾಂಧೀಜಿಯವರ ಜನನವು-'ದ್ವಾರಕೆಯ ಬಳಿಯ ಮೂಡಣ ಮುನ್ನೀರ ತೀರ'ದಲ್ಲಾಯಿತು.ಮಹಾಪುರುಷರ ಜನನ-ಬಾಲ್ಯ ಹೆಚ್ಚಾಗಿ ಅಸಾಮಾನ್ಯವಾಗಿರುತ್ತದೆ. ಆದರೆ ಇವರು ಸಾಮಾನ್ಯರಲ್ಲಿಯೇ ಅತಿಸಾಮಾನ್ಯರಾಗಿ ಜನಿಸಿ, ಬೆಳೆದು, ಬಾಲ್ಯದಲ್ಲಿಯೇ ವಿವಾಹವಾಗಿ ವಿದ್ಯೆ ಕಲಿತು ಹೊಟ್ಟೆಪಾಡಿಗಾಗಿ ಆಫ್ರಿಕಾಕ್ಕೆ ಹೋಗುತ್ತಾರೆ. ಅಲ್ಲಿ ಬಿಳಿಜನರಿಂದ ಕರಿಜನರ ಶೋಷಣೆ ನಡೆಯುತ್ತಿರುವದನ್ನು ಕಂಡು, 'ಕಡಲಿನಾಳದಿಂದೆದ್ದ ವೇದಪುರುಷನ'ಂತೆ ಮೈದಳೆದು ಈ ನಾಡಿನಲ್ಲಿಯೂ ಆ ರೀತಿ ಶೋಷಣೆ ನಡೆಯುತ್ತಿರುವುದನ್ನು ಕಂಡು ಇಲ್ಲಿಗೆ ಮರಳಿ ಬಂದು ದೇಶದ ಸ್ವಾತಂತ್ರ್ಯ ಆಂದೋಲನದ ನೇತೃತ್ವವಹಿಸಿ ದೇಶವನ್ನು ಬ್ರಿಟೀಷರಿಂದ ಬಂಧ ಮುಕ್ತ ಮಾಡಿ ಕೊನೆಗೆ ಅನಂತತೆಯಲ್ಲಿ ಲೀನವಾದರು. ಗಾಂಧೀಜಿಯವರು ಮಡಿದಾಗ ಅವರಿಗೆ ಹೀಗೆ ಕೇಳಿಕೊಂಡಿರುವರು:

"ಸಾವಿಗೆ ಬೆದರಿ ಹೆಂಬೇಡಿಗಳಾದ ನಿನ್ನ ನಾಡಿಗರಿಗೆ
ನಿನ್ನಂಥ ಬಾಳನ್ನು ನಿನ್ನಂಥ ಸಾವನ್ನು ಕರುಣಿಸಯ್ಯ
ಮರ್ತ್ಯದಲಿ ಅಮೃತರಸ ಧಾರೆಯನು ಹರಿಯಿಸಯ್ಯ"
(ಮುಗಳಿ ರಂ. ಶ್ರೀ. ೧೯೫೦, ಪುಟ-೭೮)

-ಎಂದು ಪ್ರಾರ್ಥಿಸಿಕೊಂಡಿರುವರು. ಗಾಂಧೀಜಿಯವರು ಮಡಿದಾಗ ನಾಡಿಗೆನಾಡೇ ದುಃಖದಲ್ಲಿ ಮುಳುಗಿತು. ಅವರ ಮೃತ ದೇಹವನ್ನು 'ಚಂದನ'ದ ಚಿತೆಯಲ್ಲೂ ಅಗ್ನಿಗೆ ಅರ್ಪಿಸಿ ಚಿತಾಭಸ್ಮವನ್ನು ಪುಣ್ಯ ನದಿಗಳಲ್ಲಿ ಅರ್ಪಿಸಿದೆವು; ಏನೆಲ್ಲ ಮಾಡಿದೆವು. ಆದರೂ ಗಾಂಧೀಜಿಯವರು ಮಡಿದ ನಂತರ ದೇಶದಲ್ಲಿ ಅವರ ಹೆಸರಿನಲ್ಲಿ ಏನೆಲ್ಲಾ ನಡೆಯುತ್ತಿರುವುದನ್ನು-

"ನಿನ್ನ ದೇಹವನಗ್ನಿಗೆ ಕೊಟ್ಟ ಮರುಚರಣದಿಂದ
ನಿನ್ನ ತತ್ತ್ವವದು ಸುಡುವಂತೆ ಕೋಪತಾಪದಲಿ"
(ಮುಗಳಿ ರಂ. ಶ್ರೀ. ೧೯೫೦, ಪುಟ-೭೯)

-ಮೋಸ, ಸುಲಿಗೆ ಮೇಲು, ಕೀಳು, ಅಧಿಕಾರ, ಮದ,-ಹಿಂಸೆ-ಮುಂತಾದವುಗಳಿಂದ ಜನತೆಯ ಮೇಲೆ ಅಗ್ನಿ ಪ್ರಳಯವನು ನಡೆಸಿದವು. ಅಲ್ಲದೆ ಗಾಂಧೀಜಿಯವರ ಹೆಸರಿನಲ್ಲಿ-

"ಊರುಗಳ ಗುಡಿ- ಗುಂಡಾರಗಳ ಕಟ್ಟಿ
ಗಾಂಧೀದೇಶವಿದು ಎಂಬ ಆಭಾಸವನು ಹುಟ್ಟಿಸುವೆವು
ನಿನ್ನ ಸ್ಮಾರಕವು ನಿನ್ನ ಮಾರಕವಾಗುವಂತೆ"
(ಮುಗಳಿ ರಂ. ಶ್ರೀ. ೧೯೫೦, ಪುಟ-೭೯)

-ಮಾಡಿ ಈ ನಾಡನ್ನು ನರಕವನ್ನಾಗಿ ಮಾಡಿದ್ದೇವೆ. ಅದಕ್ಕಾಗಿ ನಾಡನ್ನು ಸ್ವರ್ಗವನ್ನಾಗಿ ಮಾಡಲು ಒಂದೆಂಬ ಭಾವನೆ ಬೆಸೆಯಲು ಸಧೃಡ ರಾಷ್ಟ್ರವನು ಕಟ್ಟಲು ಈ ಜನರಲ್ಲಿ ಸುಖ-ಶಾಂತಿ, ನಾಡಿನ ಒಲುಮೆ, ಜನದ ಒಲುಮೆ, ನೆಲೆಗೊಳ್ಳುವವರೆಗೂ "ನೀ ಕಣ್ಗೆ ಕಾಣದ ರೂಹಿನಲಿ ಬಂದು

ನಿಂದು ನಿನ್ನಮರ ಸಂದೇಶವನು ಬೀರು, ಸತ್ಪಥವ ತೋರು"(ಮುಗಳಿ ರಂ. ಶ್ರೀ. ೧೯೫೦, ಪುಟ-೮೦)-ಎಂದು ಪ್ರಾರ್ಥಿಸಿಕೊಂಡಿರುವರು.

'ಗಾಂಧಿಕಿರಣ'-ಕವನದಲ್ಲಿ ಈ "ಪ್ರೀತಿಯೊಂದೆ ಎಲ್ಲ ನೀತಿ ವಿಶ್ವವಾಳ್ವ ರಾಣಿಯು"-ಎಂಬ ಸಂದೇಶವನ್ನು ಗಾಂಧೀಜಿಯವರನ್ನೇ ಅದರ ಪ್ರತಿಮೆ-ಪ್ರತೀಕವನ್ನಾಗಿ ಚಿತ್ರಿಸಿರುವರು. ಅಂದು ಜನರು ಪ್ರೀತಿ, ಮೋಹ, ಸ್ನೇಹದ ಹೆಸರಿನಲ್ಲಿ ಮೋಸ-ಸುಳ್ಳು ಮಾರ್ಗದಲ್ಲಿ ನಡೆಯುತ್ತಿದ್ದರು; ದೇಶದಲ್ಲೆಲ್ಲ ಕತ್ತಲೆ ಆವರಿಸಿತ್ತು. ಈ ಸಮಯದಲ್ಲಿ ಪ್ರೀತಿ ಪಥವ ಬೆಳಗಲು 'ಗಾಂಧಿ ಕಿರಣ'-ವು ಭೂಮಿಗಿಳಿದು ಬಂದು "ಪ್ರೀತಿಯೊಂದೆ ಜಗದ ಸತ್ಯ, ಸತ್ಯವೆನ್ನ ಪ್ರೀತಿಯು"-ಎಂದು ಸಾರಿತು. ಪತಿತರ, ದಲಿತರ, ನೋವು ನಲಿವುಗಳೇ ತನ್ನ ನೋವು-ನಲಿವುಗಳೆಂದು ತಿಳಿದು ಅವರ ನೋವು ಅಳಿದು, ನಲಿವು ಬೆಳೆಸುವುದೇ ತನ್ನ ಬಾಳಿನ ಸಫಲತೆ-ಎಂದು ಬಗೆದರು. ಹೀಗೆ ಮಾಡಲು ಇವರಿಗೆ ಅಹಿಂಸೆ, ಪ್ರೀತಿಗಳೇ ಜಪ-ಮಂತ್ರ ತಂತ್ರಗಳಾದವು. ಹೀಗೆ ಗಾಂಧಿಕಿರಣವು ಜಗತ್ತಿನಲ್ಲಿ ಇವುಗಳನ್ನು ಸಾರಿ ಜಗತ್ತನ್ನು ಬೆಳಗಿಸಿತು. ಮುಗಳಿಯವರು (ಇದೇ ಸಂಕಲನದ) 'ನೆನಕೆ'-ಕವನದಲ್ಲಿಯೂ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವೀರರಾದ ತಿಲಕ, ಸುಭಾಸಚಂದ್ರ ಬೋಸ್ ಹಾಗೂ ಇವರ ಜೊತೆಗೆ ಗಾಂಧೀಜಿಯವರನ್ನೂ ನೆನೆಸಿ ಅವರಿಗೆ ನಮಸ್ಕರಿಸಿರುವರು.

ಬೇಂದ್ರೆಯವರ "ಜಯಾ ಜಯಾ ಗಾಂಧಿ ಮೋಹನಾ"-ಕವನವು ಗಾಂಧೀಜಿಯವರ ವ್ಯಕ್ತಿತ್ವವನ್ನು ಬಣ್ಣಿಸುತ್ತದೆ. ಗಾಂಧೀಜಿಯವರು ಶಾಂತಿಗಾಗಿ ಕಾದಿರುವರು. ಅಂತೆಯೇ ಅವರಿಗೆ 'ಭೀಷ್ಮ ಮರಣಾ' ಬಂತೆಂದು ಮಹಾಭಾರತದ ಭೀಷ್ಮನು ಶರಶಯ್ಯೆಯಲಿ ಮಲಗಿ ಮರಣಿಸಿದ ರೂಪಕೋಪಮೆಯನ್ನು ಕೊಟ್ಟಿರುವರು. ಅವರ ಸಾವಿನ ಸುದ್ದಿಯನ್ನು ಹೀಗೆ ತಿಳಿಸಿದ್ದಾರೆ.

"ಒಡದರ ನಿಮ್ಮ ಒಡಲೋ
ಬಂತು ಸಿಡಿಲು
ರಣಬೊಬ್ಬಿ ನಿಮ್ಮ ಹೆಸರೊ"
(ಬೇಂದ್ರೆ, ದ.ರಾ. ೧೯೬೮, ಪುಟ-೧೭)

ಮಾನವೋತ್ಕ್ರಾಂತಿಗೆ ಕಾರಣನಾದ, ಸ್ವಾತಂತ್ರ್ಯ ದೂತನಾದ, ಕವಿಗಳಿಗೆ ಪ್ರೇರಣೆಯಾದ ನಿನ್ನ ಮಹಾತ್ಮನನ್ನು ಕುರಿತು ಕರ್ನಾಟಕದ ಕವಿಗಳು ನಿನ್ನನ್ನು ಕನ್ನಡಿಸಿದರು ನಿನ್ನನ್ನು ಕುರಿತು ಹಾಡಿದ್ದಾರೆ. ಕವಿ ತನ್ನ ಈ ಕವನವನ್ನು 'ಇಗೋ ಕವನ'-ವೆಂದು ಅರ್ಪಿಸಿರುವರು. ಗಾಂಧೀಜಿಯವರ ನಿಷ್ಕಲ್ಮಶವಾದ ಹೃದಯ-ಮನಸ್ಸು-ಸಾಧನೆ ಸಿದ್ಧಿಗಳನ್ನು; ನಗಿ-ಬೆಳಕು, ಮಾತು ಮಿಂಚಿನ ಗೆರಿ ಕಾರ್ಯ ಕಿರಿ-ಬೆಳ್ಳಿನಾ ಸೆಲಿ,-ಎಂದು ಮುಂತಾದ ಪ್ರತಿಮೆ-ಸಂಕೇತಗಳ ಮೂಲಕ ವರ್ಗೀಕರಿಸಿರುವರು. ವೈರಿಯನ್ನು ಕೂಡ ಪ್ರೇಮದಿಂದ ಕಂಡರು. ಅಬಲೆಯರ, ಬಾಲಕರ ಶ್ರೇಯೋಭಿವೃದ್ಧಿಗಾಗಿ ಶ್ರಮಿಸಿದರು. ಭೇದವನ್ನು ಅಳಿದು ಭಾವೈಕ್ಯತೆ ಬೆಸೆದು ವಿಶ್ವ ಬಂಧುವಾದರು.

ಗಾಂಧೀಜಿ ಇಟ್ಟ ಒಂದೊಂದು ಅಡಿಯು ಮುಕ್ತಿಯ ಗಡಿಯಾಯಿತು. ರಾಮನಾಮದಲ್ಲಿಯೇ ಪ್ರೇಮವನ್ನು ಇಟ್ಟವರು. ಅವರ ಈ ತತ್ತ್ವ ಸಿದ್ಧಾಂತಗಳ ಬಟಾ-ಬಯಲಿನ ರಾಜ್ಯ ಮೋಸದ (ಬ್ರಿಟೀಷರ) ಕೂಡ ವ್ಯಾಜ್ಯ ಹೂಡಿತು. ಇಂದು ಗಾಂಧೀಜಿಯವರ ಸ್ಮರಣೆಯೆಂದರೆ ಏನೆಂಬುದನ್ನು ಹೀಗೆ ಹೇಳಿರುವರು:

"ನಿಂಸ್ಮರಣ ಸ್ವರಾಜ್ಯದ ಹರಣಾ
ದೀನ ಉದ್ಧರಣಾ
ನಿಂ ಚರಣ ದಾಸ್ಯ ಸಂತರಣಾ
ದೃಷ್ಟಿ ವಿಸ್ತರಣಾ"
(ಬೇಂದ್ರೆ, ದ.ರಾ, ೧೯೬೮, ಪುಟ-೨೦)

ವರ್ಷ-ವರ್ಷವೂ ನಾಮ ಆಚರಿಸುವ ಅವರ ಜಯಂತಿ (ಶ್ರಾದ್ಧದ ದಿನ) ಶ್ರದ್ಧೆಯ ಧನವಿದ್ದ ಹಾಗೆ, ಉಪ್ಪಿನ ಋಣ ತೀರಿಸಿದಂತೆ. ಅವರ ನೂಲಿನ ಚಕ್ರ ತಿರುಗಿದ ಹಾಗೆ ಕವಿಗಳು ಅವರನ್ನು ಕುರಿತ ಹಾಡಿಗೆ ಹೊಸ, ಹೊಸ ದಾಟಿ ಆವರಿಸುತ್ತದೆ. ಕವಿತೆಯಲ್ಲಿ ಅವರ ಗುಣ ಆಕಾರದ ಚುಕ್ಕಿಯ ಹಾಗೆ, ರೆಕ್ಕೆ ಪಡೆದ ಹಕ್ಕಿಯ ಹಾಗೆ ಕವಿಯ ಮುಂದೆ ಕುಣಿಯುತ್ತವೆ. ಹೀಗೆ ಬೇಂದ್ರೆಯವರು ಗಾಂಧೀಜಿಯವರಿಗೆ ಕವಿ ಹೃದಯದ ನಿರ್ಲಿಪ್ತ ಭಾವನೆಗಳನ್ನು ಈ ಕವನದಲ್ಲಿ ಅರ್ಪಿಸಿರುವರು.

ಕುವೆಂಪುರವರು (ಕೃತ್ತಿಕೆ ಸಂಕಲನ); 'ಮಹಾತ್ಮಾ ಗಾಂಧಿ' ಕವನದಲ್ಲಿ (೧೧-೩-೧೯೩೧ರಲ್ಲಿ ರಚಿಸಿದ್ದು) ಸ್ವಾತಂತ್ರ್ಯ ಚಳುವಳಿಯಲ್ಲಿಯ ಗಾಂಧೀಜಿಯವರ ಪಾತ್ರ ಪ್ರಭಾವವನ್ನು-"ಈ ಮಹಾ ಸ್ವಾತಂತ್ರ್ಯ ರಣಯಾಗ ಭೂಮಿಯಲಿ ಶ್ವೇತಾಗ್ನಿ ಜ್ವಾಲೆಯೊಂದುರಿಯುತಿದೆ"-ಎಂಬ ಭವ್ಯ ಕಲ್ಪನೆಯ ರೂಪಕವನ್ನೇ ಕೊಟ್ಟಿರುವರು. ಅವರು ಶಾಂತಿಯಲ್ಲಿ ಹಿಮಾಲಯದಂತೆ, ಆಕಾಶದಲ್ಲಿ ಹೊಳೆಯುವ ನಕ್ಷತ್ರದಂತೆ, ವಿಶ್ವವನ್ನೇ ಕಂಪನ ಮಾಡುವ ಧರ್ಮದ ಬಲವೇ ಮೂರ್ತಿವೆತ್ತಂತೆ ಜನಿಸಿ, ಭೂಮಿಯನ್ನು ಪಾವನಗೊಳಿಸಿದನೆಂದು ವರ್ಣಿಸಿರುವರು. ಗಾಂಧೀಜಿಗೆ-

"ಓ ಮಹಾತ್ಮನೆ, ನಿನ್ನ ಸಾನಿಧ್ಯ ತೀರ್ಥದಲಿ
ಮಾನವನ ಮೋಹ ಮದ ಮಾತ್ಸರ್ಯಗಳು ಮಿಂದು
ಪ್ರೇಮದಿ ಪುನೀತವಾಗಿಹವು ! ಸುಮೂಹೂರ್ತದಲಿ"
(ಕುವೆಂಪು,೧೯೬೩, ಪುಟ-೭೬)

ಅಂದು ಧರ್ಮದಲ್ಲಿ ವಿಶ್ವಾಸವನು ಕಳೆದುಕೊಂಡು ಮೋಹ, ಮದ ಮಾತ್ಸರ್ಯಗಳು ತುಂಬಿದ ನಮ್ಮನ್ನು ನೀವು ಪ್ರಚ್ಛನ್ನ ಕಲ್ಕಿಯಾಗಿ ದೃಢಭಕ್ತಿಯನ್ನು ನಮಗೆ ಕೊಟ್ಟು ಕಾಪಾಡಿದೆವೆಂದು ವರ್ಣಿಸಿರುವರು. ಇನ್ನೊಂದೆಡೆ ಸ್ವಾತಂತ್ರ್ಯೋತ್ಸವದ ಶುಭ ಸಂದರ್ಭದಲ್ಲಿ ಬಿಡುಗಡೆಗೆ ತಂದು ಕೊಟ್ಟ ಆ ತಂದೆಯನ್ನು ಹೀಗೆ ಸ್ಮರಿಸಿದ್ದಾರೆ.

"ಮರೆವುದೆಂತಾ ನಮ್ಮ ಸ್ವಾತಂತ್ರ್ಯ ಶಿಲ್ಪಿಯಂ
ದಿವ್ಯ ದಿನದೀ ಶುಭ ಮೂಹೂರ್ತದಲ್ಲಿ
ಮರೆಯುವದೆಂತಯ್ ಭುವನ ಗೌರವ ಮಹಾತ್ಮನಂ
ಸ್ವಾತಂತ್ರ್ಯದೀ ಸುಪ್ರಭಾತದಲ್ಲಿ?"

(ಶ್ರೀನಿವಾಸಯ್ಯ, ಹೊ, ೧೯೯೩, ಪುಟ-೫೫)

-ಎಂದು ಆ ದಿನವನ್ನು ನೆನೆಸಿರುವರು. ಸ್ವಾತಂತ್ರ್ಯೋದಯದ ಉತ್ಸವದ ಸಂದರ್ಭದಲ್ಲಿ ಗಾಂಧೀಜಿಯವರು ಅಲ್ಲಿ (ದಿಲ್ಲಿಯಲ್ಲಿ) ಪಾಲ್ಗೊಳ್ಳದೇ ಮತೀಯ ಗಲಭೆಗೆ ಪೀಡಿತರಾದವರನ್ನು ಸಾಂತ್ವನಗೊಳಿಸಲು ತೆರಳಿದ್ದನ್ನು ಈ ಕವನ ಸಂಕೇತಿಸಿರುವಂತಿದೆ.

ಡಿ.ಎಸ್. ಕರ್ಕಿಯವರು "ನಿಂತಿರುವರು ಗಾಂಧೀಜಿ"-ಕವನದಲ್ಲಿ ಇಂದು ನಮ್ಮ ಅಂತರಂಗದಲ್ಲಿ ಗಾಂಧೀಜಿ ಯಾವುದರ ಸಂಕೇತ, ರೂಪವಾಗಿ ನಿಂತಿರುವರೆಂದು ವರ್ಣಿಸಿರುವರು. ವಿಶ್ವದ ಅಂತರಂಗದಲ್ಲಿ ಸತ್ಯದ ದೀಪವಾಗಿ, ಕರುಣೆಯ ರೂಪವಾಗಿ, ಶ್ರದ್ಧೆಯ ಗೀತವಾಗಿ ನಿಂತಿರುವರು. ನಮ್ಮ ಅಂತರಂಗದಲ್ಲಿ ದಲಿತರ ಕಂಬನಿಯೊರೆಸಿ ಘನತೆಯಲಿ ಮನಸ್ಸನ್ನು ನಿಲ್ಲಿಸಿ ನಿಂತಿರುವಂತೆ ಕವಿಗಳ ಅಂತರಂಗದಲ್ಲಿ ನವರಾಷ್ಟ್ರದ ಮಾನವರಾಗಿ ಜಗದೈಕ್ಯದ ಗಾನವಾಗಿ ನಿಂತಿರುವರು. ಅಂತರಾತ್ಮದಲ್ಲಿ ಸದಾ ಕರ್ಮಯೋಗದಲ್ಲಿ ನಿರತರಾಗಿ ಸಮದೃಷ್ಟಿ ಹೊಂದಿದ, ಉದಾತ್ತ ಚರಿತೆಯ, ಸಮಚಿತ್ತದಲಿ ಆನಂದ ಭರಿತರಾಗಿ ನಿಂತಿರುವರು. ಚಿತ್ತ ಭೂಮಿ ಎಂಬ ಆಕಾಶದಲ್ಲಿ ಮಾನವತೆಯ ಮೇರುವಾಗಿ, ಸಜ್ಜನಿಕೆಯ ಸಾರವಾಗಿ, ಸದ್ಭಾವದ ತೀರವಾಗಿ ನಿಂತಿರುವರು. ಜಗದ ಪೀಠದಲ್ಲಿ ಧವಳ ಕೀರ್ತಿಯ ಮೂರ್ತಿಯಾಗಿ, ಆತ್ಮ ವಿಕಾಸದ ಸ್ಫೂರ್ತಿಯಾಗಿ, ನೀತಿ ಪಥದಲಿ ವಿಮಲ ಜ್ಯೋತಿಯಾಗಿ ನಿಂತಿರುವರು. ನಮ್ಮ ಅಂತರಂಗದಲ್ಲಿ ಸತ್ಯವನ್ನು ಎಂದೂ ಮರೆಯದಂತೆ, ದಯವನೆಂದು ತೊರೆಯದಂತೆ, ಶ್ರೇಷ್ಠತೆಗೆ ಮನಸ್ಸನ್ನು ತೆರೆಯುವಂತೆ ನಿಂತಿರುವರು.

-ಹೀಗೆ ಗಾಂಧೀಜಿ ಯಾವುದರಲ್ಲಿ ಯಾವುದರ-ಪ್ರತಿರೂಪವಾಗಿ ನಿಂತಿರುವರೆಂದು ವರ್ಣಿಸಿರುವರು. ಗಾಂಧೀಜಿಯವರನ್ನು ಹತ್ತಿರದಿಂದ ಕಂಡವರು, ಅವರ ಸಮಕಾಲೀನರೂ ಅವರ ಬಗ್ಗೆ ಅಪಾರ ಗೌರವನ್ನು ಹೊಂದಿದ್ದ ಟಿ.ಪಿ. ಕೈಲಾಸಂರವರು ಗಾಂಧೀಜಿ ಕುರಿತು ಇಂಗ್ಲಿಷ್‌ನಲ್ಲಿ ಕವನ ರಚಿಸಿದ್ದಾರೆ. ಇದನ್ನು-ಜಿ.ಪಿ. ರಾಜರತ್ನಂ ಅವರು-"ಬಾಪೂ ಕೈಲಾಸಂ ಕಂಡಂತೆ"-ಎಂದು ಕನ್ನಡಕ್ಕೆ ಅನುವಾದಿಸಿದ್ದಾರೆ. ಇದರಲ್ಲಿ ಅವರ ಕೃಶವಾದ ದೇಹ, ಹೃದಯ ವೈಶಾಲ್ಯ ನಿಷ್ಕಲ್ಮಷ ಮನಸ್ಸು, ಮುಗ್ಧನಗೆ, ಸರಳ ಜೀವನ-ಮುಂತಾದವುಗಳ ಅವರ ವ್ಯಕ್ತಿ ಚಿತ್ರಣಗಳನ್ನು ಹೀಗೆ ಕೊಟ್ಟಿರುವರು:

"ಬರೀ ಹಿಡಿಯಷ್ಟು ಮೂಳೆ ಚರ್ಮ
ಒಂದು ಔನ್ಸ ರಕ್ತ ಮಾಂಸ ತುಂಬಿ
ಸಮುದ್ರದ ಉಬ್ಬರದಂತೆ ಉಕ್ಕುವ ಹೃದಯ ಜೋಡಿಸಿ
ಪಾಪರಹಿತ ಮನಸ್ಸು ತುಂಬಿ

ಆನೆಯ ಕವಿ, ಹಸುಗೂಸಿನ ನಗೆ,
ಮೇರು ಗಿರಿಯ ಆತ್ಮ ಸೇರಿಸಿ,
ಮೇಕೆ ಹಾಲು, ಖರ್ಜೂರ, ಅವರೆಕಾಳುಗಳನ್ನು ಕೊಡಿ
ನೊಂದ ಜೀವಿಗಳ ಕಣ್ಣೀರಿನಿಂದ ಮುಚ್ಚಿರಿ
ದಲಿತ ಲೋಕೋದ್ಧಾರಕ ಬಾಪೂ ಮೂಡಿ ಬರುತ್ತಾನೆ"

(ವಿರೂಪಾಕ್ಷಪ್ಪ, ಕೆ.ಜಿ. ಬಾಪೂ ಕೈಲಾಸ ಕಂಡಂತೆ, ದಿ.೩೦-೦೯-೨೦೧೧. (ಲೇಖನ), ವಿಜಯಕರ್ನಾಟಕ ದಿನಪತ್ರಿಕೆಯ ಸಾಪ್ತಾಹಿಕ ವಿಜಯ ಭಾಗದ ಪುಟ-೧)

-ಎಂದು ಗಾಂಧೀಜಿಯವರ ವ್ಯಕ್ತಿತ್ವದ ರೂಪವನ್ನು ಕಲ್ಪಿಸಿಕೊಳ್ಳಲು ಹೇಳಿರುವರು.

ನವೋದಯ ಕಾಲದ ಮತ್ತೊಂದು ಸಂಗತಿ, ಆಂಗ್ಲರ ವಿರುದ್ಧ ಬಂಡೆದ್ದ ಮಹಾತ್ಮ ಗಾಂಧೀಜಿಯವರ ಸ್ವಭಾವ, ಅವರ ಜೀವನದಲ್ಲಿ ಅನುಸರಿಸಿದ ಶಾಂತಿ ಮಂತ್ರ, ಭಾರತೀಯ ಭಾಷೆಗಳಿಗೆಲ್ಲ ಅವರ ಗುಣಗಾನ ಕಾವ್ಯದಲ್ಲಿ ನಲಿದಾಡಿದೆ.



"ದಿಕ್ಕು ದಿಕ್ಕಿನಲ್ಲಿ ಹರಿವ ಭಕ್ತಿರಸದಲಿ
ತೇಲಿ ಬಹುವು ನಮ್ಮ ನಮಸ್ಕಾರ ನಿಮಗೆ ಗಾಂಧೀಜಿ
ನಮ್ಮೊಳಿರಲಿ ನಿಮ್ಮ ದಯವು ನಿಮ್ಮ ನೀತಿ ಗಾಂಧೀಜಿ
ನಮಗೆ ನಿಮ್ಮ ಪುಣ್ಯನಾಮ ರಾಮನಾಮವಾಗಲಿ
ನಮ್ಮ ನಾಡಿಗೊಲಿದು ನೀವು ಬಿಡುಗಡೆಯನು ತಂದಿರಿ
ನಾವು ಮರೆವುದೆಂತು ನಿಮ್ಮ ಪುಣ್ಯನಾಮ ಗಾಂಧೀಜಿ
ತಿಳಿ ನೀಲದಲ್ಲಿ ನೀಲವಾಗಿ ಅವ ಹೋದ ದೂರ ದೂರ
ಬೆಳಹುದು ಇಲ್ಲಿ ಅವ ಬಿಟ್ಟ ಬೆಳಕು ಇನ್ನೊಮ್ಮೆ ಏಕೆ ಬಾರ?
ಹೋದ ಹೋದನವ ತ್ಯಾಗ ಜೀವನದ ತುತ್ತು ತುದಿಯನೇರಿ
ಏರಿ ಏರಿದೊಲು ಅಂತರಂಗದ್ಶೆಸಿರಿಯ ಜಗಕೆ ತೂರಿ
ಬೇರೆ ಲೋಕದನುಭಾವ ಬೀರಿ ಅವ ಹೋದನಾವ ದಾರಿ"

(ಜಗದೀಶ ಮಂಗಳೂರಮಠ (ಸಂ); ೨೦೦೦, ಪುಟ-೪

ಗಾಂಧೀಜಿಯನ್ನು ಕುರಿತು ಬರೆಯದ ರಮ್ಯ ಕವಿಯೇ ಇಲ್ಲವೆನ್ನುವಷ್ಟರ ಮಟ್ಟಿಗೆ ಕನ್ನಡ ಸಾಹಿತ್ಯದಲ್ಲಿ ಅವರು ಶಾಶ್ವತವಾಗಿ ನೆಲೆನಿಂತಿದ್ದಾರೆ. ಸಾವಿರ ಸಾವಿರ ಸಾಮಾನ್ಯರ ನಡುವೆ ಅಸಮಾನ್ಯರಲ್ಲೊಬ್ಬರು ಆಗೊಮ್ಮೆ ಈಗೊಮ್ಮೆ ಬಂದು ಹೋಗುವರು. ಅಂಥವರಲ್ಲಿ ಗಾಂಧೀಜಿಯವರು ಒಬ್ಬರಾಗಿದ್ದಾರೆ. ಗಾಂಧೀಜಿಯವರು ಇಂದು ನಮ್ಮ ಅಂತರಂಗದಲ್ಲಿ ಶಾಶ್ವತವಾಗಿ ನೆಲೆಸಿರುವರು. ವಿಶ್ವದ ಅಂತರಂಗದಲ್ಲಿ ಸತ್ಯದ ದೀಪವಾಗಿ, ಕರುಣೆಯ ರೂಪವಾಗಿ, ಶ್ರದ್ಧೆಯ ಮೂರ್ತಿಯಾಗಿರುವರು. ನಮ್ಮ ಅಂತರಂಗದಲ್ಲಿ ನವರಾಷ್ಟ್ರದ ಮಾನವರಾಗಿ ಜಗದ್ಶೆಕ್ಯದ ಗಾನವಾಗಿ

ನಿಂತಿರುವರು. ಅಂತರಾತ್ಮದಲ್ಲಿ ಸದಾ ಕರ್ಮಯೋಗದಲ್ಲಿ ನಿರತರಾಗಿ ಸಮದೃಷ್ಟಿ ಹೊಂದಿದ ಉದಾತ್ತ ಚರಿತೆಯ ಸಮ ಚಿತ್ತದಲಿ ಆನಂದಭರಿತರಾಗಿರುವರು. ಮಾನವತೆಯ ಮೇರುವಾಗಿ, ಸಜ್ಜನಿಕೆಯ ಸಾರವಾಗಿ, ಸದ್ಭಾವದ ತೀರವಾಗಿರುವರು. ಇಂತಹ ವ್ಯಕ್ತಿತ್ವವು ಹೊಸಗನ್ನಡದ ಎಲ್ಲ ಕವಿಗಳಿಗೂ ಪ್ರೇರಣೆಯ ಕೇಂದ್ರವಾಗಿ ಸ್ವಜನಶೀಲತೆಗೆ ವಿಷಯವಾಗಿದ್ದಾರೆ. ಮುಂದಿನ ಜನಾಂಗದ ಮಾದರಿಯ ದಿಕ್ಸೂಚಿಗಳಾಗಿದ್ದಾರೆ. ಮನುಕುಲದ ಚರಿತ್ರೆಯಲ್ಲಿ ಎಲ್ಲರೂ ಬುದ್ಧನ ಹಾಗೆ ಶಾಶ್ವತ ಕೀರ್ತಿಗೆ ಪಾತ್ರರಾಗುವುದಿಲ್ಲ. ಬಸವಣ್ಣನಂತೆ ತನ್ನತನದ ಮುದ್ರೆ ಅಚ್ಚೊತ್ತಿ ಹೋಗುವುದಿಲ್ಲ. ಎಲ್ಲರೂ ಮಹಾತ್ಮ ಆಗುವದಿಲ್ಲ. ಇಡೀ ಜಗತ್ತಿನ ಜನರನ್ನು ತನ್ನ ವ್ಯಕ್ತಿತ್ವದಿಂದ ಮತ್ತು ವಿಚಾರ ಧಾರೆಯಿಂದ ಅಸೀಮ ಪ್ರಭಾವದ ಅನನ್ಯ ಇರುವಿಕೆಯ ಅಪರೂಪದ ವ್ಯಕ್ತಿಯಾಗಿ ಗಾಂಧೀಜಿ ಇರುವರು. ಗಾಂಧಿ ಅನೇಕ ವೈರುಧ್ಯಗಳ ನಡುವೆ ಗೆದ್ದ ಮಹಾಪುರುಷ. ಸಂಸಾರಿಯಾಗಿಯೂ ಬ್ರಹ್ಮಚರ್ಯವ ನಡೆಸಿದ. ಮೌನಾಗ್ನಿಯಿಂದಲೇ ಜನರನ್ನು ಮೌನಿಗಳನ್ನಾಗಿ ಮಾಡಿದ್ದರು. ಉಪವಾಸದಲ್ಲೂ ಭೀಮಶಕ್ತಿಯನ್ನು ಭೂಮಿವ್ಯಕ್ತಿತ್ವವನ್ನು ಜಗತ್ತಿಗೆ ತೋರಿದ ಅಪರೂಪದ ಪುರುಷೋತ್ತಮರಾಗಿದ್ದಾರೆ.

ಪು.ತಿ. ನರಸಿಂಹಾಚಾರ್ಯರು (ಗಣೇಶ ದರ್ಶನ ಸಂಕಲನದ) 'ನಾಡಿನಕ್ಕರೆ'-ಎಂಬ ದೀರ್ಘವಾದ ಕವನದ ಮುಂಜಾನೆಯ ಮುನ್ನೀರು ಭಾಗದ ಕೊನೆಯಲ್ಲಿ, ಗಾಂಧೀಜಿಯವರು ಜನಿಸಿದುದನ್ನು ಭಾರತವನ್ನು ಬಿಡುಗಡೆಗೊಳಿಸಲು ಬಂದ "ದೇವತಾ ಪುರುಷನ" ಅವತಾರವೆಂದು ಬಣ್ಣಿಸಿರುವರು. ಈ ದೇವತಾ ಪುರುಷನ ಆಗಮನಕ್ಕಿಂತ ಮುಂಚೆ ದೇವದೂತರು ಶುಚಿಗೊಳಿಸಲು ಬರುವಂತೆ, ರಾಜಾರಾಮ ಮೋಹನರಾಯ, ರಾಮಕೃಷ್ಣ ಪರಮಹಂಸ, ವಿವೇಕಾನಂದ, ಗೋಖಲೆ-ಮೊದಲಾದ ನಾಯಕರು ಜನಿಸಿದರು. ಕೊನೆಗೆ ದೇವತಾ ಪುರುಷನು 'ಕೃಷ್ಣ ನಿರ್ಯಾಣವನು ಕಂಡ ನಾಡು'ಸಾಗರ ತೀರದ ಪೋರಬಂದರಿನಲ್ಲಿ ಅವತರಿಸಿದನೆಂದು, ಗಾಂಧೀಜಿಯವರು ಶ್ರೀಕೃಷ್ಣನ ಅವತಾರವೆಂಬ ಕಲ್ಪನೆಕೊಟ್ಟಿರುವರು. ಹೀಗೆ ವೈಷ್ಣವ ದರ್ಶನವನ್ನು ಇವರ ವ್ಯಕ್ತಿತ್ವದ ಚಿತ್ರಣವನ್ನು ಕೊಟ್ಟಿರುವರು. (ಗಣೇಶ ದರ್ಶನ ಸಂಕಲನದ) 'ನೆರಳು'ಕವನದಲ್ಲಿ ಗಾಂಧೀಜಿಯವರ ಪ್ರಭಾವವನ್ನು ಹಾರುವ ಗರುಡನ ನೆರಳಿಗೆ ಹೋಲಿಸಿ ವರ್ಣಿಸಿರುವರು. ಮೇಲೊಂದು (ಆಕಾಶದಲ್ಲಿ) ಗರುಡ ಹಾರುತ್ತಿದೆ. ಅದರ ನೆರಳು ಕೆಳಗಡೆ ನೆಲದ ಮೇಲೆ ಮನೆ, ಕೊಳ, ಬಾವಿ, ಗಿಡ, ಬೆಟ್ಟ, ತಗ್ಗು, ದಿನ್ನೆ ಎನ್ನದೇ ಎಲ್ಲಾಕಡೆ ಓಡುತ್ತಿದೆ. ಗರುಡಕ್ಕೆ ಅದರಿಚ್ಛೆಯೇ ಹಾದಿ. ಆದರೆ ಅದರ ನೆರಳಿಗೆ ಅದು ಹರಿದತ್ತವೇ ಬೀದಿ. ಇದರ ವೇಗಕ್ಕೆ ಗಾಳಿಯೇ ಬೆರಗಾಗಿದೆ. ಇದಕ್ಕೆ ಅಡ್ಡಿಮಾಡುವದು ಸಾಧ್ಯವಿಲ್ಲಾ. ಕವಿ ಈ ನೆರಳನ್ನು ನೋಡಿ-

"ಇದನೋಡಿ ನಾನು ನೆನೆವೆನಿಂದು
ಇಂಥ ನೆಳಲೇನು ಗಾಂಧೀಯೆಂದು!
ಹರಿದತ್ತ ಹರಿಯ ಚಿತ್ತ
ಈ ಧೀರ ನಡೆವನತ್ತ"

(ನರಸಿಂಹಾಚಾರ್ಯ ಪು.ತಿ., ೧೯೯೮, ಪುಟ-೨೨೨)

ಈ ಕವನದಲ್ಲಿ ಗಾಂಧೀಜಿಯವರಿಗೆ ಸಂಬಂಧಿಸಿದ ಯಾವ ವಿಷಯವನ್ನು ಸ್ಪಷ್ಟವಾಗಿ ಹೆಸರಿಸದಿದ್ದರೂ ಕೊನೆಗೆ ನೆರಳೇ ಗಾಂಧೀಜಿಯೆಂದು ಸೂಚಿಸಿರುವರು. ಇದು ಅಂದು ಗಾಧೀಜಿಯವರ ಬದುಕೇ ಲೋಕ ವಿಲಕ್ಷಣವಾಗಿ ತೋರುತ್ತಿದ್ದನ್ನು ಸೂಚಿಸುತ್ತದೆ. ಚರಕದಿಂದಲೇ ಸ್ವರಾಜ್ಯ, ರಾಮನಾಮದಿಂದಲೇ ಸ್ವಾತಂತ್ರ್ಯ-ಇವರ ಸಾದಾ ಸರಳ ಬದುಕಿನ ಉಪದೇಶ-ತತ್ತ್ವಗಳು, ಒಂದು ಬಲಿಷ್ಠ ರಾಷ್ಟ್ರದ ವಿರುದ್ಧ ಹೋರಾಡಲು ಸಮರ್ಥವೇ-ಇವುಗಳನ್ನೆಲ್ಲಾ ಚಿಕ್ಕ ಕವನ ಕವಿಯ ವೈಷ್ಣವದರ್ಶನದ ಹಿನ್ನೆಲೆಯಲ್ಲಿ ಪ್ರತಿಮಿಸುತ್ತದೆ.

'ಭಾರತ ಭೂಮಿ' (ಗಾಂಧಿ ನೆನಪು) ಕವನದಲ್ಲಿ ಗಾಂಧೀಜಿಯನ್ನು ನೆನೆಸಿಕೊಂಡಿರುವರು. ಇಂದು ದೇಶದ ಜನತೆಯು ಅಂಧಕಾರ, ಅಹಂಕಾರ, ಸ್ವವೃತ್ತಿಯಲ್ಲಿ ತೊಡಗಿದ್ದಾರೆ. ನಾಡು ಮತ್ತೆ ಮೊದಲಿನಂತಾಗುತ್ತದೆ. ಅದಕ್ಕಾಗಿ ಕವಿ ಭಾರತ ಮಾತೆಗೆ ಗಾಧೀಜಿಯವರನ್ನು ನೆನೆಯಲು-

"ನೆನೆ ಇಂದೆಲೆ ತಾಯ್ನಾಡೇ
ಪುರುಷವರನ ಧೀರನ
ನಿನ್ನ ಋಷಿ ಪರಂಪರೆಯ
ಕಳೆಯ ಮೆರೆಸಿದಮರನ"

(ನರಸಿಂಹಾಚಾರ್ಯ ಪು.ತಿ., ೧೯೯೮, ಪುಟ-೪೬೮)

-ಹೀಗೆ ಹೇಳಿರುವರು. ಇಂದು ಗಾಂಧೀಜಿಯವರ ತಪ-ತ್ಯಾಗಗಳು ಹುಸಿಯಾಗುತ್ತಿವೆ. ನಾಡಿನ ಬಗೆಗೆ ಅಪಾರ ಕಾಳಜಿಯುಳ್ಳ ಕವಿ ಗಾಂಧೀಜಿಯವರಲ್ಲಿ-'ನೀನು ಹೊತ್ತಿಸಿರುವ ದೀಪ ಕರುಕಿಡದೊಲು ಹೊಮ್ಮಿಸು'-ಎಂದು ಪ್ರಾರ್ಥಿಸಿಕೊಂಡಿರುವರು. ಗಾಂಧೀಜಿಯವರ ಸ್ಮೃತಿಯೇ ಸಂಗತಿ, ಅವರ ವಿಸ್ಮೃತಿಯೇ ದುರ್ಗತಿಯೆಂದು ಬಿಂಬಿಸಿರುವರು.

'ಗಾಂಧೀಸ್ತವ'-ಕವನದಲ್ಲಿಯೂ ಗಾಂಧೀಜಿಯವರ ವ್ಯಕ್ತಿ ಚಿತ್ರಣವನ್ನು ಕೊಟ್ಟಿರುವರು. ಅವರು ನಾಡವಿಧಾತ, ಸ್ವಾತಂತ್ರ್ಯದಾತ ಸತ್ತಂತಿದ್ದ ಈ ನಾಡಿನ ಜನತೆಯನ್ನು ನೀವು ಕುರಿಗಳಲ್ಲ ಅಮೃತ ಪುತ್ರರು, ಕೀಳರಿಮೆಯನ್ನು ಬಿಟ್ಟು ನನ್ನನ್ನು ಹಿಂಬಾಲಿಸಿರೆಂದು ಎಚ್ಚರಿಸಿದ್ದಾರೆ. ಎನಿತು ತಾರೆಗಳಿರಲಿ ಇರುಳೀ ಚಂದ್ರನಿಂ ಜ್ಯೋತಿಷ್ಮತಿ"-ರಾತ್ರಿ ಎಷ್ಟೇ ತಾರೆಗಳಿದ್ದರೂ ಚಂದ್ರನ ಬೆಳಕೇ ಬೆಳಕು, ಎಂಬಂತೆ ದೇಶದಲ್ಲಿ ಎಷ್ಟೇ ಮಹಾವ್ಯಕ್ತಿಗಳಿದ್ದರೂ ಅವರು ಗಾಂಧೀಜಿಯವರಷ್ಟು ಆಗಲಾರರು. ಗಾಂಧೀಜಿ ತನ್ನ ತಂಬೆಳಕಿನಿಂದ ಈ ನೆಲವನ್ನು ಬೆಳಗಿದರು, ಕವಿಗೆ ಗಾಂಧೀಜಿ ಬರಿಕೇವಲ ರಾಜಕೀಯ

ವ್ಯಕ್ತಿಯಲ್ಲ,ಆಧ್ಯಾತ್ಮ ಯೋಗಿ, ಸಂತ ಶ್ರೇಷ್ಠನೂ, ಅವತಾರ ಪುರುಷರೂ ಆಗಿದ್ದಾರೆ. ಇಂತಹ ಉನ್ನತ ಮಹಾವ್ಯಕ್ತಿಗೆ ಕವಿಯ ಆ ಚಿತ್ತ ಬಾಗಿದೆ. ಇವರ- 'ಹೃದಯ ವಿಹಾರಿ ಸಂಕಲನ'ದಲ್ಲಿಯೂ ಇನ್ನೊಂದು 'ಗಾಂಧೀಸ್ತವ' ಎನ್ನುವ ಕವನವಿದೆ. ಇದರಲ್ಲಿಯೂ ಗಾಂಧೀಜಿಯವರ ವ್ಯಕ್ತಿತ್ವವನ್ನು ಬಣ್ಣಿಸಿರುವರು.

"ಲೋಭ ಮೋಹ ಭಯ ಭ್ರಾಂತ ಧೀನ ಸುಷ್ಕಾತ್ಮ ಭಾರತಂ
ಅಂತಸುಪ್ತಂ ಬಹಿಷ್ತಪ್ತಂ ಸರ್ವಲೋಕ ಬಹಿಷ್ಕೃತಂ
ಆದುಚಾರ್ಯನಿವನಿಂ ಪ್ರಾಣಿತಂ ಗೌರವಾನ್ವಿತಂ"
(ವೇಣುಗೋಪಾಲರಾವ್ ಎಸ್., ೧೯೯೧, ಪುಟ-೩೦೬)

-ಲೋಭ-ಮೋಹ, ಭಯ-ಭ್ರಾಂತಿ. ದೀನತೆಗಳಿಂದ ಭಾರತದ ಆತ್ಮ ಶುಷ್ಕವಾಗಿತ್ತು. ಆಗ ಈ ಮಹಾತ್ಮನು ಹುಟ್ಟಿ ಬಂದು ಭಾರತಕ್ಕೆ ಜೀವಕಳೆಯನ್ನು ಪ್ರಧಾನ ಮಾಡಿದನು. ಗಾಂಧೀಜಿಯವರದು ಬರಿ ರಾಜಕೀಯ ಹೋರಾಟವಲ್ಲ, ಬಾಹ್ಯ ಸ್ವಾತಂತ್ರ್ಯ ಹೋರಾಟವಲ್ಲ; ಆಂತರಿಕ ಆತ್ಮ ಶುದ್ಧಿಯ ಅಂತಸತ್ವವನ್ನು ಹೊಂದುವ ಹೋರಾಟವೂ ಆಗಿದೆ. ಅಂತೆಯೇ ಈ ಮಹಾತ್ಮನು'ಆತ್ಮೋದ್ಧರಣ ಮೌಲ್ಯಗಳು ದಕ್ಕಿವೆ ಮಿಶೋಧಿಸಲ್' ಎಂಬ ಎಚ್ಚರ ಕೊಟ್ಟಿರುವರು. ಕವಿ ಮರೆತ ಈತನನ್ನು ಹೀಗೆ ನೆನೆದಿರುವನು.

"ನೆನೆವೆ ದಾಂತನಂ ಪರಮ ಶಾಂತನು
ನನ್ನಿ ನೋಂತನಂ ಧೀರನಂ
ಸ್ಮಯಕೃತಾಂತನಂ ಕೃತಿಮಹಾಂತನಂ
ಸುಜನಕಾಂತ ನೇತಾರನಂ"
(ವೇಣುಗೋಪಾಲರಾವ್ ಎಸ್., ೧೯೯೧, ಪುಟ-೩೦೬)

ವಿ.ಸೀತಾರಾಮಯ್ಯನವರು ಗಾಂಧೀಜಿಯವರನ್ನು ಕುರಿತು ಹಲವಾರು ಕವನಗಳನ್ನು ರಚಿಸಿರುವರು. 'ಮಹಾತ್ಮ'-ಕವನದಲ್ಲಿ ಎಲ್ಲವನು ಬಲ್ಲವ, ಗೆಲುವವ, ಎಲ್ಲರಿಗೂ ಒಲಿದವನೆಂದೂ-ದಲಿತರನ್ನು ದೀನರನ್ನು-ದುರ್ಬಲರನ್ನು ಉದ್ಧರಿಸಿರುವದನ್ನು ಹೇಳಿರುವರು. 'ಗಾಂಧಿ'-ಕವನದಲ್ಲಿ ಇವರ ಸಾಧನೆ-ವ್ಯಕ್ತಿತ್ವವನ್ನು ಬಣ್ಣಿಸಿರುವರು. ಗಾಂಧೀಜಿ ಭಾರತದಲ್ಲಿ ಹುಟ್ಟಿ, ಆಫ್ರಿಕಾಕ್ಕೆ ಹೋಗಿ ಅಲ್ಲಿ ನರರು-ನರರಿಗೆ ಮಾಡುವ ಅನ್ಯಾಯಕ್ಕೆ ಹೇಸಿ ದುರ್ಬಲರನ್ನು ಉದ್ಧರಿಸುವ ಮಾರ್ಗವೊಂದನ್ನು ಕಂಡುಕೊಂಡು ಆ ಮಾರ್ಗವನ್ನು ನಮ್ಮಲ್ಲಿಗೆ ತಂದರು. ಈ ಮಾರ್ಗವನ್ನು ಗಾಂಧೀಜಿಗಿಂತ ಮೊದಲೇ ಯಾರಾದರೂ ಇಲ್ಲಿ ಬಳಸಿದ್ದರೆ ಅದು ಸಫಲವಾಗುತ್ತಿರಲಿಲ್ಲವೆಂಬ ಶಂಕೆಯನ್ನು ವ್ಯಕ್ತಪಡಿಸಿರುವರು. ಇವರು ಕಂಡುಕೊಂಡ ಮಾರ್ಗವು-

"ಇಲಿಯು ಹುಲಿಯಾಗುವಂತೆ
ಇದು ವ್ರತ ವ್ರತವತೊಟ್ಟು ಬಳಲಿದಿರಿ
ಆದವರ ಆಗದವರ ಜೊತೆಗೂಡಿ ದುಡಿಸಿ"
(ಸೀತಾರಾಮಯ್ಯವಿ., ೨೦೧೦, ಪುಟ-೩೩೪)

ಸತ್ಯ–ಶಾಂತಿ–ಅಹಿಂಸೆ, ಸತ್ಯಾಗ್ರಹ–ಮೊದಲಾದ ವ್ರತ, ಅಸ್ತ್ರಗಳಿಂದ ಇವುಗಳು ಆಗಿ ಬಾರದವರನ್ನು, ಆಗಿ ಬರುವರನ್ನೂ ಜೊತೆಗೂಡಿಸಿಕೊಂಡು ದುಡಿದು ಭಾರತಕ್ಕೆ ಸ್ವಾತಂತ್ರ್ಯ ತಂದು ಕೊಟ್ಟಿರುವಿರಿ. ಇದು ಈ ನಾಡಿಗೆ ನೀವು ಕೊಟ್ಟ ಬಹು ದೊಡ್ಡ ಕೊಡುಗೆ.

ಇವರ–'ಕೈಮುಗಿದ ಗಾಂಧಿ' ಕವನವು ಗಾಂಧೀಜಿಯವರು ಮಡಿದ ದುಃಖದ ಸಂದರ್ಭದಲ್ಲಿ ರಚಿಸಿದ ಶೋಕ ಕವನ. ಗೋಡ್ಸೆಯು ಗಾಂಧೀಜಿಯವರಿಗೆ ಒಂದರ ಮೇಲೆ ಒಂದರಂತೆ ಗುಂಡು ಹಾಕಿದಾಗ ಗಾಂಧೀಜಿಯವರು ಸಾಯುವ ಮುನ್ನ ತಮ್ಮ ಹಂತಕ ಗೋಡ್ಸೆಗೆ ಕೈಮುಗಿದರು. ಮುಗಿದ ಕೈಮುಗಿದಂತೆ ಇರುವಾಗಲೇ ಕೊನೆಯುಸಿರೆಳೆದರೆಂದು ಆರಂಭದಲ್ಲಿ ಹೇಳಿರುವರು. ಮುಂದೆ ಗಾಂಧೀಜಿಯವರ ಕಾರ್ಯ ಸಾಧನೆಯ ವ್ಯಕ್ತಿ ಚಿತ್ರಣವನ್ನೇ ಕೊಡುತ್ತಾರೆ. ಶಿವನು ವಿಷವನ್ನು ಕುಡಿದಂತೆ ದೇಶದ (ಸಮಸ್ಯೆಗಳ) ವಿಷವನ್ನು ಉಂಡು ಕೇಡನ್ನು ಹೀರಿಕೊಂಡವರು; ಇಂಥವರನ್ನು ಕೊಂದದ್ದನ್ನು ಕಂಡು ಜಗತ್ತು ಹಿಗ್ಗಿತೇ? ಕೊಲೆಗಾರನಿಗಾದರೂ ಋಣವು ತೀರಿತೆ? ಇಲ್ಲ. ಅವರ ಹಿರಿಮೆಯ ಸಾಧನೆಯನ್ನು ಹೀಗೆ ವರ್ಣಿಸಿರುವರು:

"ಕಳೆ ಬೆಸುಗೆಗಳ ಬೆಸೆದೆ ನಾಡ ಕಟ್ಟಿದಿರಿ
ಬಾನಿನೆತ್ತರಕದನು ನಿಲಿಸಿ
ಹೊಂಗಳಸ ಮುಡಿಸಿ"
(ಸೀತಾರಾಮಯ್ಯ. ವಿ., ೨೦೧೦, ಪುಟ–೨೨೨)

ಕೆಟ್ಟದು–ಎಂಬ ಕಳೆಯ, 'ಒಳ್ಳೆಯದು'–ಎಂಬ ಬೆಳೆಗಳ ನಡುವೆ ಭಾವೈಕ್ಯತೆಯನ್ನು ಬೆಸೆದು ದೇಶವನ್ನು ಕಟ್ಟಿದ್ದೀರೆಂದು ಬಿಂಬಿಸಿದ್ದಾರೆ. ಇವರ ಸ್ವಾತಂತ್ರ್ಯ ಚಳುವಳಿಯ ಕೆಲವು ಘಟನೆಗಳನ್ನು ಸಮಾಜೋದ್ಧಾರಕ ಕಾರ್ಯಗಳನ್ನು ನೆನೆಸಿಕೊಂಡ ಕವಿ ಅಂದು ಗಾಂಧೀಜಿಯವರಿಗೆ ಹೀಗೆ ಪ್ರಾರ್ಥಿಸಿಕೊಂಡಿದ್ದಾರೆ:

"ಇನ್ನೊಮ್ಮೆ ಭಾರತವು ಪರಿಶುದ್ಧವಪ್ಪಂತೆ
ಮುಗಿದ ಕೈ ತೆರೆದೆಮ್ಮ ಹರಸುತಿರಲಿ ಹರಿಸುತ್ತಿರಲಿ"
(ಸೀತಾರಾಮಯ್ಯ. ವಿ., ೨೦೧೦, ಪುಟ–೨೨೫)

ಕೊನೆಯುಸಿರೆಳೆಯುವಾಗ ಗೋಡೆಸೆಗೆ ಕೈಮುಗಿದ ಕೈಮುಗಿದಂತೆ ಇರುವಾಗಲೇ ಕೊನೆಸಿರೆಳೆದರು. ಈ ಮುಗಿದ ಕೈಗಳನ್ನು ತೆರೆದು ನಮ್ಮನ್ನು ಹರಿಸಿ ಆಶೀರ್ವದಿಸಲು ಕವಿ ಕೇಳಿಕೊಂಡಿರುವನು.

'ಗಾಂಧಿ ೧೦೦–ರ ಹಬ್ಬ'–ಕವನವು ಗಾಧೀಜಿಯವರ ೧೦೦ನೇ ಹುಟ್ಟು ಹಬ್ಬದ ಶುಭ ಸಂದರ್ಭದಲ್ಲಿ ರಚಿಸಲಾಗಿದೆ. ಇದರಲ್ಲಿ ಇವರ ವ್ಯಕ್ತಿತ್ವವನ್ನು 'ಬುದ್ಧ', ಯೇಸುಕ್ರಿಸ್ತನಿಗೆ

ಹೋಲಿಸಲಾಗಿದೆ. ಬ್ರಿಟೀಷರ ತಂತ್ರಕ್ಕೆ ಪ್ರತಿತಂತ್ರವಾಗಿ ಸತ್ಯಾಗ್ರಹ ಹೂಡಿದರು. ಇಂಥವರನ್ನು ಕೊಲ್ಲಲಿಕೆ ವೈರಿಗಳಿಗೆ ನಾಚಿಕೆಯಾಗಿ ನಮ್ಮ ದೇಶವನ್ನು ನಮಗೆ ಬಿಟ್ಟುಕೊಟ್ಟು ಬಂದ ದಾರಿ ಹಿಡಿದು ಮರಳಿ ಹೋದರು.

ಇದು ಗಾಂಧಿ ೧೦೦ರ ಹುಟ್ಟು ಹಬ್ಬದಲಿ ಅವರ ನೆನಪು ಮಾತ್ರ ಉಳಿದಿದೆ, ಅವರ ತತ್ತ್ವ ಆದರ್ಶಗಳಿಗೆ ತಿಲಾಂಜಲಿ ಇಡಲಾಗಿದೆ. ನಡೆಗೂ-ನುಡಿಗೂ ಅಂತರವಾಗಿದೆ. ಜಗತ್ತು ಇದನ್ನು ಕಂಡು ಅಪಹಾಸ್ಯ ಮಾಡಿ ನಗುವಂತಾಗಿದೆ. ನಮ್ಮ ದೇಶದ ಸ್ಥಿತಿ. ಈ ನಾಡಿನಲ್ಲಿ-

"ಓಗಾಂಧೀ, ಇಂದು
ನೀವು ಹುಟ್ಟಿದ್ದು ಬೆಳೆದದ್ದು ಬದುಕಿದ್ದು ಸತ್ತದ್ದು
ವ್ಯರ್ಥವಾಯ್ತೆನಿಸುತಿರುವಂದು"
(ಸೀತಾರಾಮಯ್ಯ. ವಿ., ೨೦೧೦, ಪುಟ-೩೫೪)

ಎಂದು ಕವಿ ವ್ಯಥೆಪಟ್ಟಿರುವರು.

ಎಸ್.ವಿ.ಪರಮೇಶ್ವರ ಭಟ್ಟರು (ಅಂಚೆಪೆಟ್ಟಿಗೆ ಸಂಕಲನದ) 'ಮಹಾತ್ಮ ಗಾಂಧಿಗೆ' ಕವನದಲ್ಲಿ ಗಾಂಧೀಜಿಯವರ ವ್ಯಕ್ತಿತ್ವವನ್ನು ಹಲವಾರು ರೂಪಕ-ಪ್ರತಿಮೆ-ಸಂಕೇತಗಳ ಮೂಲಕ ವರ್ಣಿಸಿರುವರು. ಗಾಂಧೀಜಿಯವರ ನಡೆ-ನುಡಿಗಳು ಸೂರ್ಯನಂತೆ, ಅಗ್ನಿಯಂತೆ, ವಿದ್ಯುತ್‌ನಂತೆ, ಪ್ರವಾಹದಂತೆ, ಹೂವಿನಂತೆ, ಗಾಳಿಯಂತೆ, ಜೇನಿನಂತೆ, ಹಾಲಂತೆ, ಅಮೃತದಂತೆ, ಮಂಗಳವೂ ಮನೋಹರವೂ ಆಗಿದೆ. ಅಂತೆಯೇ ಅವರನ್ನು ಮಹಾತ್ಮನೆಂದು ಬಗೆಯಲಾಗಿದೆ. ಕವಿ ಗಾಂಧೀಜಿಯವರ ಪಾದಕಮಲಗಳಿಗೆ ವಂದಿಸಿರುವರು.

ಸತ್ಯ-ಅಹಿಂಸೆ-ಶಾಂತಿ ನೀತಿಯಿಂದ ಭಾರತೀಯರಿಗೆ ಸ್ವಾತಂತ್ರ್ಯ ತಂದು ಕೊಟ್ಟಿರುವದನ್ನು, ದುಷ್ಟ ಜನರ ಶಿಕ್ಷೆಗೆ, ಶಿಷ್ಟಜನರ ರಕ್ಷಣೆಗೆ ಶ್ರೀಕೃಷ್ಣ, ಬುದ್ಧ, ಕ್ರಿಸ್ತರಂತೆ ಅವತಾರ ತಾಳಿ ಬಂದಿರುವನೆಂದು ಬಣ್ಣಿಸಿರುವರು. ಇದೇ ಸಂಕಲನದ 'ನಿನ್ನ ಉಪದೇಶ' ಕವನದಲ್ಲಿ ಗಾಂಧೀಜಿಯವರು ವೇದಾಗಮ, ಭಗವದ್ಗೀತೆಗಳನ್ನು ಮಂಥನಮಾಡಿ ಕಂಡುಕೊಂಡ ತತ್ತ್ವ ಚಿಂತನೆಗಳನ್ನು ನಮಗೆ ಉಪದೇಶಿಸಿರುವರು. ಜಾತಿ-ಮತಗಳ ಸಂಕೋಲೆ ಹರಿದೊಗೆದು ಮನುಕುಲದ ಮಾನವರೆಲ್ಲಾ ಒಂದೇ ಎಂದು "ದ್ವೇಷವನ್ನು ಬಿಟ್ಟು ಪ್ರೀತಿ-ನೀತಿಯಿಂದ ಬಾಳಿರೆಂದು ಉಪದೇಶಿಸಿರುವರು. ಇವರ 'ಕೃಷ್ಣಮೇಘ' ಸಂಕಲನ 'ಗಾಂಧೀಜಿಯವರನ್ನು ಕುರಿತು' ಕವನದಲ್ಲಿ ಬಹಳ ಸುದೀರ್ಘವಾಗಿ ಗಾಂಧೀಜಿಯವರ ವ್ಯಕ್ತಿತ್ವ, ತತ್ತ್ವ-ಸಿಂದ್ಧಾಂತಗಳನ್ನು, ಕಾರ್ಯಗಳನ್ನು ಕುರಿತು ಹೇಳಿರುವರು.

ಗಾಂಧೀಜಿಯವರನ್ನು ಉದ್ದೇಶಿಸಿ ಹೀಗೆ ಹೇಳಿರುವರು:–'ಭಾರತ ಪುತ್ರ, ಪ್ರೇಮಪವಿತ್ರ, ಲೋಕಮಿತ್ರನೂ, ಶಾಂತಿಯೋಗಿ, ತ್ಯಾಗಿಯೂ ಆಗಿರುವ ನೀನು ನಿನ್ನಂಥ ಶಾಂತಿದೂತನು ಜಗತ್ತಿನಲ್ಲಿ ಮತ್ತೆಲ್ಲಿಯೂ ಜನಿಸಲಾರನು. ಕಲಿಯುಗವನ್ನು ಕೃತಯುಗವನ್ನಾಗಿ ಮಾಡಿರುವೆ. ಸತ್ಯ– ಅಹಿಂಸೆ– ಶಾಂತಿಯನ್ನು ನಡೆ–ನುಡಿಯಲ್ಲಿಯೂ ಅಳವಡಿಸಿಕೊಂಡು ತೋರಿಸಿರುವೆ. ನಿಷ್ಕಾಮ ಕರ್ಮಕ್ಕೆ ನಿನ್ನ ಜೀವನವನ್ನೇ ವ್ಯಾಖ್ಯಾನ ಮಾಡಿರುವೆ. ಆ ತತ್ತ್ವ ಈ ತತ್ತ್ವವೆನ್ನದೆ ಎಲ್ಲದರ ಸಾರಹೀರಿ ವಿಶ್ವತತ್ತ್ವವನ್ನು ಕಂಡುಕೊಂಡೆ. ಸತ್ಯ, ಅಹಿಂಸೆ–ಎಂಬ ಇರ್ಬಾಯ ಖಡ್ಗವನು ಹಿಡಿದು ಹಗೆಯ ವಿರುದ್ಧ ಹೋರಾಡಿದ ಘಟನೆ ಇನ್ನೊಬ್ಬ ಗಾಂಧಿಯ ಚರಿತ್ರೆಯಲ್ಲಿ ಇದೆಯೇ? ಇಲ್ಲ ಈ ನಾಡನ್ನು ಪರದಾಸ್ಯದಿಂದ ಬಿಡುಗಡೆಗೊಳಿಸಿ ಶಾಂತಿಯ ಮಳೆಗರೆದೆ, ನಿನ್ನ ಪ್ರಭಾವದಿಂದ.

"ಬೆಂಕಿ ನೀರಾಯಿತು ನಂಜು ಹಾಲಾಯಿತು
ಹಾವು ಹೂವಾಯಿತು ನೋಡ
ಸಹನೆಯ ಸಮತೆಯ ನಿನ್ನ ತತ್ವದ ಮಾತು
ಕಾಣಿಸಿತೆಂಥ ಪವಾಡ"

(ಪರಮೇಶ್ವರಭಟ್. ಎಸ್.ವಿ., ೧೯೭೩, ಪುಟ–೨೦)

ನೀನು ಮೊದಲು ನಿನ್ನನ್ನು ನೀನು ಶುಚಿಗೊಳಿಸಿಕೊಂಡು ಆನಂತರ ಹೊರಗಿನ ಲೋಕವನ್ನು ಸುಧಾರಿಸಲು ಅಣಿಯಾದೆ. ಆಗ ಲೋಕವೇ ಮಣಿಯಿತು ನಿನಗೆ. ರಾಜಕಾರಣದೊಳಗೆ ಆಧ್ಯಾತ್ಮವನ್ನು ತಂದು ಬೆರಸಿ ರಾಜಕಾರಣವನ್ನು ಪವಿತ್ರಗೊಳಿಸಿದೆ. ವರ್ಣ–ವರ್ಗ, ವೃತ್ತಿ–ಜಾತಿ, ಎಲ್ಲವೂ ಒಂದೇ. ಈಶ್ವರ–ಅಲ್ಲಾ ರಾಮ–ರಹೀಮರೆಲ್ಲಾ ಒಂದೇ. ದೇವರೊಂದೆ ನಾಮ ಹಲವು–ಎಂದು ಬಗೆದು ಅಹಿಂಸೆಯ ಮಾರ್ಗದಲ್ಲಿ ನಡೆದು ಸತ್ಯವನ್ನು ಹುಡುಕುವ ನಿನ್ನ ಪಥ, ಜಗತ್ತಿನ ಚರಿತ್ರೆಯಲ್ಲಿ ಮತ್ತೆಲ್ಲಿಯೂ ದೊರೆಯಲಾರದು. ಸತ್ಯವನ್ನರಸುವ ನಿತ್ಯ ಯಾತ್ರಿಕನಾದ ನಿನಗೆ ಸತ್ಯವು ಪಶ್ಚಿಮ–ಪೂರ್ವ, ದಕ್ಷಿಣ–ಉತ್ತರ ಎಲ್ಲಿದ್ದರೂ ಅಲ್ಲಿಗೆಯೇ ಹೋದೆ. ಜನರಿಗೆ, 'ನಿಮ್ಮ ಅವಗುಣಗಳೆ ಹಗೆ ಹೊರಗಿನ ಜನರೆಲ್ಲ ಸ್ನೇಹದಿಂದಲೇ ಅಭ್ಯುದಯ'ವೆಂದು ಉಪದೇಶಿಸಿದೆ. ನಿಷ್ಕಾಮ ಕರ್ಮದಿಂದ ಹೊಸತನು ಸಾಧಿಸಿ, ಈ ಶತಮಾನದ ಅವಧೂತನಾದೆ. ಸತ್ಯಾಗ್ರಹದ ಅದ್ವಿತೀಯ ಸಾಹಸವನ್ನು ಮೆರೆದ ಸಮಷ್ಟಿಯ ರೂವಾರಿಯಾಗಿ ಸೃಷ್ಟಿಯ ಮಕುಟವಾದೆ. ಬರಿ ತ್ಯಾಗಕ್ಕಾಗಿ ತ್ಯಾಗ ಮಾಡಿದರೆ ಅದು ತ್ಯಾಗವಲ್ಲ. ಯಾರಿಗೆ ಯಾವುದು ಅಗತ್ಯವೊ ಅದನ್ನು ಅರಿತು ತ್ಯಾಗ ಮಾಡಿದರೆ ಅದು ನಿಜವಾದ ತ್ಯಾಗ. ತ್ಯಾಗಿಯೂ ಇದನ್ನು ಅರಿತುಕೊಳ್ಳಬೇಕೆಂದು ತಿಳಿಸಿದ್ದಾರೆ.

ಗಾಂಧೀಜಿಯವರು ಕಾಂಗ್ರೆಸ್ ನಾಯಕತ್ವ ವಹಿಸಿಕೊಂಡಿರುವದನ್ನು ಮದವೇರಿದ ಕುದುರೆಯ ಸವಾರನಾಗಿರುವದಕ್ಕೆ ಹೋಲಿಸಿ ಅದನ್ನು ಪಳಗಿಸಿಕೊಳ್ಳುವ ಬಗೆಯನ್ನು ಹೀಗೆ ಬಣ್ಣಿಸಿರುವರು:

"ಕಣ್ಣು ಪಟ್ಟಿ ಕಡಿವಾಣಗಳಣಿ ಮಾಡಿದೆ
ಜೀನು ರಿಕಾಪನು ಬಿಗಿದೆ
ಕಾಂಗ್ರೆಸ್ಸು ಕುದುರೆಯ ಬಳಿಕ ನೀನೇರಿದೆ
ಭಾರಿ ಸವ್ವಾರನೆ ಆದೆ"
(ಪರಮೇಶ್ವರಭಟ್. ಎಸ್.ವಿ., ೧೯೭೩, ಪುಟ-೨೫)

ರಾಜಕೀಯ ಮದವೇರಿದ ಈ ಕ್ರಾಂಗ್ರೆಸ್ ಕುದುರೆಯ ಕಾಲಿಗೆ ಧರ್ಮದ ನಾಲನು ಕಟ್ಟಿ, ಪಥ್ಯದ ಸೊಪ್ಪನ್ನು ತಿನ್ನಿಸಿ, ಮದವಿಳಿಸಿದಿ-ಎಂದು ಅಂದು ಕಾಂಗ್ರೆಸ್ ಪಕ್ಷವನ್ನು ಸ್ವಾತಂತ್ರ್ಯ ಹೋರಾಟಕ್ಕೆ ಸುವ್ಯವಸ್ಥಿತವಾಗಿ ಸಂಘಟಿಸಿ ಅದನ್ನು ಸುಧಾರಿಸಿರುವದನ್ನು ವರ್ಣಿಸಿರುವರು.

ಗಾಂಧೀಜಿ ಸನಾತನ ಧರ್ಮವನ್ನಳೆಯಲು ಮಾನದಂಡವಾದರು. ಶೀಲ-ಸದ್ಭಾವವನ್ನ ಅರಿಯಲು ಇವರಿಗೆ ಇವರೇ ಹೋಲಿಕೆ. ಯುದ್ಧದ ಭೀತಿಯಲ್ಲಿದ್ದ ಜಗತ್ತಿಗೆ, ನೊಂದ ಜನಕ್ಕೆ ಅವರ ಅಹಿಂಸೆಯ ತತ್ತ್ವವೇ ಸಂಜೀವನ ಔಷಧವಾಯಿತು.

ಅವರ ರಚನಾತ್ಮಕ ಕಾರ್ಯಗಳನ್ನು ಕುರಿತು ಅವರನ್ನುದ್ದೇಶಿಸಿ ಹೀಗೆ ಹೇಳಿರುವರು. 'ದಲಿತಾಶ್ರಮ ಕಟ್ಟಿ ಆಶ್ರಮ ಧರ್ಮಕ್ಕೆ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ) ಹೊಸ ಅರ್ಥಕೊಟ್ಟೆ, ಮೂರ್ತಿ ಪೂಜೆಯಲ್ಲಿ ಪ್ರೀತಿ ತೋರಿದರೂ ಮೂಢ ಭಕ್ತಿಯನ್ನು ಖಂಡಿಸಿದೆ. ನಿನ್ನ ಮಹಿಮೆಯಿಂದ ಹೊಲೆಯರು-ಹರಿಜನರಾದರು. ದಲಿತರು-ಉದ್ಧೃತರಾದರು; ಪತಿತರು-ಪಾವನರಾದರು, ಧೀನರು-ಉನ್ನತರಾದರು.'-ಎಂದಿರುವರು.

ಗಾಂಧೀಜಿಯವರ ಅವತಾರ ಕೇವಲ ಈ ದೇಶಕ್ಕೆ ಮಾತ್ರ ಸೀಮಿತವಲ್ಲ. ವಿಶ್ವಮಾನ್ಯವಾಗಿದೆ, ಅವರು ವಿಶ್ವಗುರುವಾಗಿರುವರು. 'ಗಾಂಧಿ'ಯೆಂಬುದರರ್ಥವೇ ಔದಾರ್ಯ-ಸ್ನೇಹ-ಸದ್ಭಾವನೆ-ಎಂಬುವಂತಾಯಿತು. ಗಾಂಧೀಜಿ ತತ್ತ್ವ ಸಿದ್ಧಾಂತಗಳಿಗೆ ಅಕ್ಷಾಂಶ-ರೇಖಾಂಶಗಳ ಮಿತಿ ಇಲ್ಲ, ಭೂಪಟದಲ್ಲಿ ಇವುಗಳ ತವರು ಇದಷ್ಟೇ ಎಂದು ನಕಾಶ ತೋರಿಸುವಂತಿಲ್ಲ; ವಿಶ್ವವ್ಯಾಪಿ ಎಂದು ಬಣ್ಣಿಸಿರುವರು. ಅಂದು ಭಾರತೀಯರಲ್ಲಿ ಹರಡಿದ್ದ ಅಜ್ಞಾನವನ್ನು ಹೋಗಲಾಡಿಸಿ ಪರದಾಸ್ಯದಿಂದ ಮುಕ್ತ ಮಾಡಿದ್ದನ್ನು ಹೀಗೆ ವರ್ಣಿಸಿರುವರು:

"ಭಾರತೀಯರ ಮನದಾಕಾಶದಗಲಕೆ
ಹಬ್ಬಿದ್ದಹೇ ಕೃಷ್ಣ ಮೇಘ
ಅಂದಿನ ನಿನ್ನ ಬೋಧಾಮೃತ ವರ್ಷಕೆ
ಕರಗಿತು ದಾಸ್ಯ ನಿದಾಘ"
(ಪರಮೇಶ್ವರಭಟ್. ಎಸ್.ವಿ., ೧೯೭೩, ಪುಟ-೨೯)

–ಅಂದು ನೀನು ಸಿಡಿಲಾಗಿ ಪಾಪವ ಸುಟ್ಟಿ, ಗುಡುಗಿ ಎಚ್ಚರಿಸಿದಿರಿ, ಮಳೆಯಾಗಿ ತಾಪವನ್ನು ಕಳೆದೆ, ಆದರೆ ಇಂದು ಮತ್ತೆ ಜನತೆಯ ಬಾಯಾರಿದೆ; ನಿನ್ನ ನೀರಿಗಾಗಿ ಹಪಹಪಿಸುತ್ತಿದ್ದಾರೆ. ಕ್ಷಣ ಕ್ಷಣಕ್ಕೂ ಜನತೆ ಕೆಡುತ್ತಿದ್ದಾರೆ. ಇದನ್ನು ಪರಿಹರಿಸಲು ಈಗಲೇ ಹೊಸಮಳೆ ಬರಬೇಕು, ಅಂದರೆ ಗಾಂಧೀಜಿಯವರು ಇನ್ನೊಮ್ಮೆ ಹುಟ್ಟಿಬರಲು ಕವಿ ಈ ರೀತಿ ಕೇಳಿಕೊಂಡಿದ್ದಾರೆ:

"ಸಿಡಿಲಾಗಿ ಬರಬೇಕು ಗುಡುಗಾಗಿ ಬರಬೇಕು
ಮಿಂಚಿಮಳೆಗರೆಯಲೇ ಬೇಕು
ಅವತಾರವಾಗದೆ ಉದ್ಧಾರವೆಂತಯ್ಯ
ಬಾ ತಂದೆ ಬೇಗ ಬಾರಯ್ಯ"

(ಪರಮೇಶ್ವರಭಟ್. ಎಸ್.ವಿ., ೧೯೭೩, ಪುಟ–೩೦)

–ಹೀಗೆ ಲೋಕವನ್ನು ಉದ್ಧರಿಸಲು ಹುಟ್ಟಿ ಬರಲು ಕೇಳಿಕೊಂಡಿರುವರು. ಒಂದು ವೇಳೆ ಇದಕ್ಕಾಗಿ ಹುಟ್ಟಿಬರದಿದ್ದರೂ ನೀನು ಹುಟ್ಟಿ ಬಂದೇ ಬರುತ್ತೀ–ಎಂದು ನಾನು ಭಾವುಕನಾಗಿ ನಂಬಿರುವ ತನಗಾದರೂ ಹುಟ್ಟಿಬರಬೇಕೆಂದು ಕವಿ ಕೇಳಿಕೊಂಡಿರುವರು.

ಸಿದ್ಧಯ್ಯ ಪುರಾಣಿಕರು (ಮಾನಸ ಸರೋವರ ಸಂಕಲನದ) 'ಕೋವಿಯ ಕೋರಿಕೆ' ಕವನದಲ್ಲಿ ಗಾಂಧೀಜಿಯವರ ಸಾವಿಗೆ ಕಾರಣವಾದ ಕೋವಿಯು ಜನಿಸಿದ ಮುಹೂರ್ತವೇ ಸರಿ ಇಲ್ಲ. ಅಂತೆಯೇ ಅದು ಇಂತಹ ಹೇಯ ಪಾಪದ ಕ್ರೂರ ಕಾರ್ಯವನ್ನೆಸಗಿದೆ ಎಂದು ವ್ಯಥೆಪಟ್ಟಿದ್ದರು.

ಜಗತ್ತಿನ ಕೋಟಿ ಕೋಟಿ ಕೋವಿಗಳಲ್ಲಿ ಈ ಕೋವಿ ಇಂಥ ಕೃತ್ಯವೆಸಗಲು ಕಾರಣವಾಯಿತು. ಇದು ನನ್ನ ಪಾಲಿಗೆ ಕೇಡು ತಂದಿತು. ಈ ದುಷ್ಕೃತ್ಯವೆಸಗಿದ ಗೋಡ್ಸೆಗೆ ಕವಿ–

"ಎಲೊ ಪಾಪಿಯೆ ಗೋಡಸೆ
ಈ ಕೃತ್ಯ ಮಾಡಿಸೆ
ನನ್ನನಂದು ಕೊಂದೆಯಾ
ನಿನ್ನ ನಾಡ ತಂದೆಯಾ"

(ಶ್ರೀನಿವಾಸಯ್ಯಹೊ. ೧೯೯೩, ಪುಟ–೫೬)

–ಎಂದು ಕೋಪಿಸಿಕೊಂಡಿರುವರು. ಕವಿಗೆ ಗಾಂಧೀಜಿಯವರನ್ನು ಕೊಂದುದು ತನ್ನನ್ನೇ ಕೊಂದಂತೆ, ಅದು ತನ್ನ ಕೇಡೆಂದೇ ಬಗೆದು 'ನನಗೆ ಕುಂದು ತಂದೆಯಾ'–ಎಂದಿರುವರು. ಅಲ್ಲದೆ ಗೋಡ್ಸೆಗೆ ಗಾಂಧೀಜಿಯವರು 'ನಿನ್ನ ನಾಡ ತಂದೆ'–ಎಂದು ವೈರಿಯಲ್ಲೂ ಗಾಂಧೀಜಿಯವರ ಬಗ್ಗೆ ಗೌರವ ಭಾವನೆ ಕಂಡಿರುವರು.

(ಚರಗ ಸಂಕಲನದ) 'ಆಯ್ತು ಜಗವೆ ಪವಿತ್ರವು!' ಕವನದಲ್ಲಿ ಗಾಂಧೀಜಿಯವರು ದೇವಲೋಕದಿಂದ ಮನುಜರೂಪ ಧರಿಸಿ ಅವತರಿಸಿರುವರು. ಈ ಲೋಕಕ್ಕೂ ದೇವಲೋಕದ ಮಾನ್ಯತೆ ತಂದರೆಂದು ವಿವರಿಸಿರುವರು. ಗಾಂಧೀಜಿಯವರು ಹುಟ್ಟಿನಿಂದಾಗಿ ಈ ನಾಡಿನಲ್ಲಿ–

"ಹಿಂಸೆಗೆ ಅಜ್ಞಾತವಾಸ
ದ್ವೇಷಕೆ ವನವಾಸವು
ಬಂದಿತೊಮ್ಮೆ ಗಾಂಧಿ ಹುಟ್ಟೆ
ಹುಸಿಗೆ ಬಂದಿವಾಸವು!"
(ಸಿದ್ದಯ್ಯ ಪುರಾಣಿಕ, ೧೯೬೨, ಪುಟ–೧)

ಈ ನಾಡಿನ ಜನತೆ ಕುಂಭಕರ್ಣನ ನಿದ್ದೆಯಂತೆ ಜಡತೆಯಲ್ಲಿತ್ತು; ಗಾಂಧೀಯುಸಿರಿನಿಂದ ಅದು ತೊಲಗಿತು. ಇವರಿಂದ ಸ್ವಾತಂತ್ರ್ಯ ಚಳುವಳಿಗೆ ಬಲ ಬಂದು ದೇಶವು ಸ್ವತಂತ್ರಗೊಂಡು ಪ್ರಜಾಪ್ರಭುತ್ವವಾಗಿರುವದನ್ನು–"ಒಲವಿಗಾಯ್ತು ವಿಜಯವು! ಸಾಮಾನ್ಯತೆಗಾಯ್ತು ಪಟ್ಟ" ಎಂದಿರುವರು. ಸೋತ ಶತ್ರುವೇ ರಾಜ್ಯವನ್ನು ಬಿಟ್ಟು ಕೊಟ್ಟ ವ್ಯಥೆಯನ್ನು ಮರೆತು ಗಾಂಧೀಯನ್ನು ಸ್ತುತಿಸಿರುವರು. ಗಾಂಧೀಜಿಯವರ ನುಡಿಯೊಳಗೆ ನೂರು ತೀರ್ಥ, ಅವರ ನಡೆಯೆ ದಿವ್ಯಕ್ಷೇತ್ರ ಇಂಥವರು ನಡೆದ ಈ ನೆಲ, ಈ ಜಗತ್ತು ಪವಿತ್ರವಾಯಿತು.

ಕೆ.ಎಸ್. ನರಸಿಂಹಸ್ವಾಮಿಯವರು (ಮಲ್ಲಿಗೆಯ ಮಾಲೆಯಲ್ಲಿ) 'ಗಾಂಧೀಜಿಯ ಪಾದಕೆ'– ಕವನದಲ್ಲಿ ಗಾಂಧೀಜಿಯವರು ಆಫ್ರಿಕಾದಲ್ಲಿ ಶೋಷಣೆಯ ವಿರುದ್ಧ ಹೋರಾಡಿದುದನ್ನು, ಭಾರತದಲ್ಲಿ ಬ್ರಿಟೀಷರ ದಬ್ಬಾಳಿಕೆ ಅಧಿಕಾರದ ದರ್ಪ, ಸಾಮ್ರಾಜ್ಯ ವ್ಯಾಮೋಹದ ಮದವನು ಇಳಿಸಿದುದನ್ನು, ಉಪವಾಸ ಮಾಡಿರುವದನ್ನು ದೀನರಿಗೆ ನೊಂದವರಿಗೆ ತಂದೆ–ತಾಯಿಯಾಗಿದ್ದರೆಂದು ಬಣ್ಣಿಸಿರುವರು. ಗಾಂಧೀಜಿಯವರನ್ನು–

"ಕೊಲ್ಲಬಂದವನಿಗೆ ಕ್ರಿಸ್ತನೊಲು ಕೈಮುಗಿದೆ;
–ಸಾಕ್ರೆಟೀಸ್ ! ಮತ್ತೊಮ್ಮೆ ವಿಷವ ಕುಡಿದೆ"
(ನರಸಿಂಹಸ್ವಾಮಿ.ಕೆ.ಎಸ್, ೨೦೧೨, ಪುಟ–೧೯೬)

ಕ್ಷಮಾಗುಣದಲ್ಲಿ ಯೇಸುಕ್ರಿಸ್ತನಿಗೆ ಹೋಲಿಸಿದರೆ, ಇಲ್ಲಿಯ ಶೋಷಣೆ–ದುಷ್ಕೃತ್ಯಗಳೆಂಬ ವಿಷವನ್ನು ಕುಡಿಯಲು ಸಾಕ್ರೆಟೀಸ್‌ನೇ ಮತ್ತೊಮ್ಮೆ ಗಾಂಧೀಜಿಯಾಗಿ ಹುಟ್ಟಿ ಬಂದಿರುವನೆಂದು ಕಲ್ಪಿಸಿರುವರು. ಈ ನಾಡನ್ನು ಅಹಿಂಸೆಯಿಂದ ಹರಸಿ, ಚರಕದಲಿ ಸರಳತೆಯ ಇಂಪನ್ನು ಕೊಟ್ಟೆ ಭಾರತದ ಬಿಡುಗಡೆಗಾಗಿ ಹಗಲಿರುಳು ಶ್ರಮಿಸಿ ಎಲ್ಲರಿಗೂ ಬೆಳಕಾಗಿ ತಾರೆಯಾದೆ– ಎಂದು ಬಣ್ಣಿಸಿರುವರು.

ಸ್ವಾತಂತ್ರ್ಯೋದಯದ ಸಂದರ್ಭದಲ್ಲಿ ನವಖಲಿಯಲ್ಲಿ ಮತೀಯ ಗಲಭೆಯಲ್ಲಿ ಸಂತ್ರಸ್ಥರನ್ನು ಸಂತೈಸಲು ಶಾಂತಿ ನೆಲೆಸಲು ಶ್ರಮಿಸಿರುವದನ್ನು ಪ್ರಸ್ತಾಪಿಸಿರುವರು ಲೋಕದ ಗುರು, 'ಪರಂಜ್ಯೋತಿ', ಮಾನವತೆಯ ಉಸಿರೆಂದು-ಇವರ ವ್ಯಕ್ತಿತ್ವವನ್ನು ಬಣ್ಣಿಸಿರುವರು.

ಇಂದು ಈ ನಾಡಿನ ವ್ಯವಸ್ಥೆ ಅಸ್ತವ್ಯಸ್ಥವಾಗಿದೆ. ಈ ದೇಶವನ್ನು ಸುಗಮವಾಗಿ ನಡೆಸಿಕೊಂಡು ಹೋಗಲು ಇಂದು ಗಾಂಧೀಜಿಯವರ ಅವಶ್ಯಕತೆ ಇರುವದನ್ನು ಹೀಗೆ ಹೇಳಿರುವರು:

"ಕಂಬನಿಯ ಅರ್ಘ್ಯದಲಿ ನಾಡೆಲ್ಲ ತಲೆಬಾಗಿ
ಕಲ್ಲಾಯ್ತು; ಸದ್ಗತಿಯ ತೋರು, ತಂದೆ!
ಕಡಲು, ಕತ್ತಲೆ; ಹಡಗು ಒಡೆದೀತು!-ಬೆಳಕಾಗಿ
ಭಾರತವ ಕೈ ಹಿಡಿದು ನಡೆಸು ಬಾ, ತಂದೆ!"
(ನರಸಿಂಹಸ್ವಾಮಿ ಕೆ.ಎಸ್, ೨೦೧೨, ಪುಟ-೧೯೬)

ಗಾಂಧೀಜಿಯವರು ಮಡಿದುದಕ್ಕಾಗಿ, ಇಲ್ಲದ್ದಕ್ಕಾಗಿ ಈ ನಾಡು ದುಃಖದಲ್ಲಿ ಮುಳುಗಿತು. ಮತ್ತೆ ಅಜ್ಞಾನ-ಅಂಧಕಾರ ಕವಿದಿದೆ. ದೇಶವೆಂಬ ಈ ಹಡಗು ಚಲಿಸುವ ಕಡಲಿನ ಮಾರ್ಗದಲ್ಲಿ ಕತ್ತಲೆ ಕವಿದಿದೆ. ಅಲ್ಲದೆ ಈ ಹಡಗು ಒಡೆದೀತೆಂಬ ಭಯ ಭ್ರಾಂತಿಯೂ ಇದೆ. ಅದಕ್ಕಾಗಿ ಕವಿಯು ಗಾಂಧೀಜಿಯವರಿಗೆ ಇನ್ನೊಮ್ಮೆ ಹುಟ್ಟಿ ಬಂದು ಬೆಳಕನ್ನು ತೋರಿ, ಈ ದೇಶವನ್ನು ನಡೆಸಲು ಕೇಳಿಕೊಂಡಿರುವರು.

ಜಿ.ಎಸ್. ಶಿವರುದ್ರಪ್ಪನವರು 'ಗಾಂಧಿ' ಕವನದಲ್ಲಿ ಇಂದಿನ ಕಾಲದಲ್ಲಿ ವಿಚಿತ್ರವೆನಿಸಿದ, ವಿಲಕ್ಷಣ ವ್ಯಕ್ತಿತ್ವವನ್ನು ಇಂದಿನ ಮೌಲ್ಯ ಆದರ್ಶಗಳೊಂದಿಗೆ ತುಲನಾತ್ಮಕವಾಗಿ ನೋಡಿರುವರು. ಇದು ವ್ಯವಹಾರಿಕ ಜಗತ್ತು, ಎಲ್ಲದಕ್ಕೂ-ಲಾಭ-ನಷ್ಟ ಲೆಕ್ಕ ಹಾಕಿ ಬದುಕುವ ಕಾಲ. ಇಂಥ ಕಾಲದಲ್ಲಿ ಗಾಂಧೀಜಿಯೊಬ್ಬ ವಿಚಿತ್ರ ಮನುಷ್ಯನಾಗಿ ಎಲ್ಲಿಂದ ಬಂದನೋ ಏನೋ, ಬಂದು ಬೆಲೆ ಕಟ್ಟಲು ಬಾರದ ಈ ಜನತೆಯ ಮುಂದೆ ತನ್ನದೊಂದು ಅಂಗಡಿ ತೆರೆದು ಎಲ್ಲಾ ಹರಾಜಿಗಿಟ್ಟನೆಂದು ವಿಡಂಬನಾತ್ಮಕವಾಗಿ ವಿನೋದವಾಗಿ ಗಾಂಧೀಜಿಯವರ ವಿಶೇಷ ವ್ಯಕ್ತಿತ್ವದ ವಿವರಣೆಗೆ ಪೀಠಿಕೆ ಹಾಕಿರುವರು.

ಇಂದು ಯಾವುದನ್ನು ಮಾಡಿದರೆ ಶ್ರೇಷ್ಠ ವ್ಯಕ್ತಿಯನ್ನುತ್ತಾರೆಯೋ ಗಾಂಧೀಜಿ ಅದನ್ನ ಮಾಡದೆ, ಶ್ರೇಷ್ಠತೆಯ ಮಾನದಂಡಗಳಾವವೋ ಅವು ಇರದೆ, ಅದಕ್ಕಿಂತಲೂ ಶ್ರೇಷ್ಠ ವ್ಯಕ್ತಿಯಾಗಿರುವರೆಂಬುದನ್ನು ಹೀಗೆ ವರ್ಣಿಸಿರುವರು:

"ಕಾವಿಯುಡಲಿಲ್ಲ. ಹೆಣ್ಣ ಬಿಡಲಿಲ್ಲ
ಎಲ್ಲೋ ಮಠದೊಳಗೆ ಕೂತು ರಹಸ್ಯವಾಗಿ

ಜಪಮಣಿ ಎಣಿಸಿ ಸಮಾಧಿಸ್ಥನಾಗಲಿಲ್ಲ"

(ಶಿವರುದ್ರಪ್ಪ ಜಿ. ಎಸ್, ೧೯೯೧, ಪುಟ-೩೮೫)

ಅಲ್ಲದೆ ಪವಾಡಗಳನ್ನು ಮಾಡಲಿಲ್ಲ, ಜನಸಾಮಾನ್ಯರೊಂದಿಗೆ ಅವರಂತೆ ಪ್ರಾರ್ಥಿಸಿರುವರು ಆದರೂ ಶ್ರೇಷ್ಠ ಸಂತ, ಫಕೀರನೆಂದು ಬಗೆಯಲಾಯಿತು. ಕತ್ತಿ-ಕೋವಿ ಹಿಡಿಯಲಿಲ್ಲ ಆದರೂ ಅಹಿಂಸಾ ಅಸ್ತ್ರದಿಂದ ಯುದ್ಧಮಾಡಿದರು. ಏಕಾಂಗಿಯಾದರೂ ಜನಗಣಮನದ ಅಧಿನಾಯಕರಾದರು. ದೇಶವನ್ನು ಬಿಡುಗಡೆಗೊಳಿಸಲು ಶ್ರಮಿಸಿ ಬಳಲಿದ್ದಕ್ಕೆ ಹಂತಕರ ಗುಂಡಿಗೆ ಬಲಿಯಾದುದೇ ಅವರಿಗೆ ವಿಶ್ರಾಂತಿಯಾಯಿತೆಂಬಂತೆ-"ಸಿಡಿಗುಂಡುಗಳ ಹಾಸಿಗೆಯ ಮೇಲೆ ನಿನಗೆ ತಣ್ಣನೆ ನಿದ್ದೆ"-ಎಂದು ಬಣ್ಣಿಸಿರುವರು. ಗಾಂಧೀಜಿಯವರು ಮಡಿದ ಮೇಲೆ ಈ ನಾಡು ಮತ್ತೆ ಜಡನಿದ್ದೆಯಲ್ಲಿ ಮುಳುಗಿತೆಂಬುದನ್ನು "ನಮಗೂ ನಿದ್ದೆ ಒಮ್ಮೊಮ್ಮೆ ಎಚ್ಚರ" ವೆಂದಿರುವರು. ಒಮ್ಮೊಮ್ಮೆ ಎಚ್ಚರಾದಾಗಲೇ ಈ ನಾಡಿನಲ್ಲಿ ಗಾಂಧೀಜಿ ಹೋದ ಮೇಲೂ ಅವರ ತತ್ತ್ವ ಆದರ್ಶಗಳು ಸಿದ್ಧಾಂತಗಳಿಗೆ ಯಾವ ರೀತಿ ತಿಲಾಂಜಲಿ ಇಡಲಾಗಿದೆ ಎಂಬುದನ್ನು ಮಾರ್ಮಿಕವಾಗಿ ಹೇಳಿರುವರು.

ಗಾಂಧೀಜಿ ಇದ್ದನೆಂಬ ಗುರುತಿಗೆ ಸ್ಮಾರಕ ನಿರ್ಮಿಸಿದ್ದೇವೆ ಅದಕ್ಕೆ ಪ್ರತಿವರ್ಷ ಹೂಮಾಲೆ ಹಾಕಿ ನೆನಪು ಮಾಡಿಕೊಳ್ಳುತ್ತೇವೆ. ಉಳಿದ ದಿನ ಹಕ್ಕಿಗಳು, ಮನುಷ್ಯರು ಗಲೀಜು ಮಾಡಿರುತ್ತಾರೆ. ಇದನ್ನು ತೋರಿಸಿ ಇದೇನು ಎಂದು ಕೇಳಿದ ಮೊಮ್ಮಗನಿಗೆ ಅಜ್ಜ ಹೇಳುತ್ತಾನೆ'-ಇದು ಗಾಂಧೀ'-ಹಾಗೆಂದರೇನೆಂದು ಮೊಮ್ಮಗ ಕುತೂಹಲದಿಂದ ಮರುಪ್ರಶ್ನಿಸಿದ್ದಕ್ಕೆ ಅಜ್ಜ-'ಅವನೊಬ್ಬ ಹುಚ್ಚ' ಎಂದು ಹೇಳಿ, ತನ್ನ ಕಾಲದ ಬ್ರಿಟೀಷರ ಆಡಳಿತವೇ ಚೆನ್ನಾಗಿತ್ತೆಂದು ಅಭಿಪ್ರಾಯಪಡುತ್ತಾನೆ. ಗಾಂಧೀಜಿಯವರು ಕೊಟ್ಟ ತತ್ತ್ವ-ಸಿದ್ಧಾಂತ, ಆದರ್ಶದ ಬೀಜಗಳು ಇಂದು ಮತ್ತೆ ನಾಡಿಗೆ ಫಲ ನೀಡಬಹುದೆ? ಎಂಬುದನ್ನು ಕಾತುರದಿಂದ ಕಾಯುತ್ತಿರುವನು.

'ಗಾಂಧೀ ಶತಮಾನೋತ್ಸವ'-ಕವನದಲ್ಲಿ ಜಿ.ಎಸ್. ಶಿವರುದ್ರಪ್ಪನವರು, ಗಾಂಧೀ ಜಯಂತಿಯ ಶತಮಾನೋತ್ಸವ ಸಂದರ್ಭದಲ್ಲಿ ಈ ದೇಶದ ಸ್ಥಿತಿಗತಿಗಳನ್ನು ನೆನಪಿಸಿಕೊಂಡಿರುವರು.

ಈ ನಾಡಿನಲ್ಲಿ ಅಜ್ಞಾನ ಅಂಧಕಾರದ ಮಬ್ಬುಗತ್ತಲೆ ಇದೆ. ಇಂಥದರಲ್ಲಿ 'ಒಬ್ಬ ಮುದುಕನು ಕೋಲೂರಿ ನಡೆಯುವ ಸದ್ದಿನಂತೆ"-ಎಚ್ಚರಿಸಲು ಪ್ರತಿವರ್ಷ ಗಾಂಧೀ ಜಯಂತಿ ಆಚರಣೆಗೆ ಬರುತ್ತದೆ. ಈ ಕಾಡುವ ನೆರಳು ತೊಲಗಿದರೆ ಸಾಕಪ್ಪ ಎನ್ನುತ್ತೇವೆ. ಇದರಿಂದ ತಪ್ಪಿಸಿಕೊಳ್ಳಲು ಅವನನ್ನು ಹಾಡಿ-ಹರಸಿ-ಹೊಗಳುತ್ತೇವೆ. ಅದು ಹೋದ ನಂತರ ಮತ್ತೆ ಯಥಾಸ್ಥಿತಿಗೆ ಮರಳುತ್ತೇವೆ, ಅವರ ತತ್ತ್ವ ಆದರ್ಶಗಳಿಗೆ ತಿಲಾಂಜಲಿ ಇಟ್ಟು ಅವರ ಹೆಸರಿನ ಮೇಲೆ ಪ್ರತಿಮೆ, ಫಲಕ, ಬೀದಿ, ಭವನ ನಿರ್ಮಿಸಿದ್ದೇವೆ, ಇವರ ತತ್ತ್ವ-ಸಿಂದ್ಧಾಂತ-ಆದರ್ಶಗಳು ಇಂದು ಭೂಗೋಲದ ಮೇಲೆ ಯಾವುದೇ

ಕತ್ತಲೆ ಕವಿದ ನಾಡಿನಲ್ಲಿ ಬೆಳಕು ಬೀರುತ್ತಿದ್ದರೂ ಈ ನಾಡಿನಲ್ಲಿ ಬೆಳಕು ಬಿರುತ್ತಿಲ್ಲ-ಎಂದು ಬಣ್ಣಿಸಿರುವರು.

ಚೆನ್ನವೀರ ಕಣವಿಯವರು-'ಗಾಂಧೀಯುಗ'-ಕವನದಲ್ಲಿ, ಎಲ್ಲೆಲ್ಲೂ ಗಾಂಧೀಜಿಯ ಹೆಸರೇ ಕೇಳಿಬರುತ್ತದೆ. ಅವರ ಪ್ರಭಾವವೇ ಹಾಗಿತ್ತು. ಒಂದು ಯುಗವನ್ನೇ ನಿರ್ಮಾಣ ಮಾಡಿದರು. ಅವರ ವಿಶ್ವಮಾನ್ಯ ವ್ಯಕ್ತಿತ್ವವನ್ನು ಹೀಗೆ ವರ್ಣಿಸಿರುವರು.

"ವಿಶ್ವಬಂಧು ವಿಶ್ವಾತ್ಮನೆಂದು ಜನಕೋಟಿ ನಮಿಸುತಿಹುದು
ಲೋಕದೀಚೆ ಮುಗಿಲಂಚಿನಾಚೆ ಅವಧಾತ್ಮ ತುಳುಕುತಿಹುದು
ನೇಸರುದಿಸಿ ಹೂಗಾಳಿ ಸೂಸಿ ಸಂದೇಶ ಬೀರುತಿಹವು"

ಗಾಂಧೀಜಿಯವರ ಸಮಾಜೋದ್ಧಾರದ ಕಾರ್ಯವನ್ನು ಹೀಗೆ ಶ್ಲಾಘಿಸಿರುವರು-

"ದೀನ ದಲಿತರುದ್ಧರಣ- ಹರಣ ಮುಡಿಪಿಟ್ಟ ದೇಹ ಕರಗಿ
ಯೋಗಿ ತ್ಯಾಗಿ ಮನಬುದ್ಧಿಮಾಗಿ ಪದಯುಗ್ಮಕೆರಗಿಬಾಗಿ"
(ಚನ್ನವೀರ ಕಣವಿ, ೧೯೯೬, ಪುಟ-೧೧೨)

ಇಂದು ಗಾಂಧೀಜಿಯವರು ಇಲ್ಲವೆಂದು ಅವರ ತತ್ತ್ವ ಆದರ್ಶಗಳೂ ಇಲ್ಲವೆಂದು ತಿಳಿಯುವುದು ತಪ್ಪು. ಇಂದು ಅವರು ಇಲ್ಲದಿದ್ದರೂ ಅವರು ಕೊಟ್ಟು ಹೋದ ತತ್ತ್ವ ಉಪದೇಶಗಳನ್ನು ಜಗತ್ತಿನ ಎಲ್ಲ ಜೀವಿಗಳೂ ಬಲ್ಲರು ಅವರ ತತ್ತ್ವ-ಆದರ್ಶಗಳೇ ಇಂದು ನಮ್ಮನ್ನು ಶ್ರೇಷ್ಠರಾಗಿ ಬಾಳಿರೆಂದು ಹರಸುತ್ತಿವೆ-ಎಂದು ಗಾಂಧೀಜಿಯವರನ್ನು ಬಣ್ಣಿಸಿರುವರು.

"ಗಾಂಧಿ ಹತ್ಯೆಯ ತಲ್ಲಣಗಳನ್ನು ಸಶಕ್ತವಾಗಿ ಹಗೂ ಸರಾಗವಾಗಿ ಅಭಿವ್ಯಕ್ತಿಸುವ 'ದಿವ್ಯಜ್ಯೋತಿ'. ಅವರ ಬದುಕಿನ ಆರೋಹಣವನ್ನು ಸೂಚಿಸುತ್ತದೆ. ಸ್ವಾತಂತ್ರ್ಯ ಯೋಗಿಯ ತ್ಯಾಗ, ಬಲಿದಾನಗಳಷ್ಟೇ ಮುಖ್ಯವಾದ ಅವರ ವ್ಯಕ್ತಿತ್ವದ ಮಹೋನ್ನತಿ ಕವಿತೆಯಲ್ಲಿ ವ್ಯಕ್ತವಾಗಿದೆ.." (ಪರಡ್ಡಿ ಎಸ್.ಎಸ್., ೨೦೧೧, ಪುಟ-೭೩) ದಿವ್ಯಜ್ಯೋತಿ' ಕವನ 'ನಕ್ಷತ್ರಗಾನ'ದಲ್ಲಿ ಬಂದಿದ್ದು, 'ಗೀತಗೌರವ'ದಲ್ಲಿ ಪುನರಾವರ್ತನೆಗೊಂಡಿದೆ.

"ಎನಿತು ಸರಳ ನುಡಿ, ಎಷ್ಟು ಸಹಜ ಮನದ ಮಹತಿಯೇನು!
ಅವನ ಎದೆಯ ಉನ್ನತಿಯ ನಿಲುಕುವುದು ಯಾವ ಗಿರಿಯಸಾನು?
ಇಹುದೆ ಅವನ ಕರುಣೆಯನು ಧರೆಗೆ ಕರೆವಂಥ ಕಾಮಧೇನು?
ಅವನು ಗೈದ ಲೀಲೆಯಲಿ ಲಯಸಿತೆಂಥವರ ನಾನು ನಾನು"
(ಜಗದೀಶ ಮಂಗಳೂರಮಠ (ಸಂ);೨೦೦೦, ಪುಟ-೪೩)

ಗಾಂಧೀಜಿಯವರ ಸರಳ ಜೀವನ, ಉದಾತ್ತ ವ್ಯಕ್ತಿತ್ವವು ಈ ವಿಶ್ವದ ಜನರಲ್ಲಿರುವ ಅಹಂಕಾರವನ್ನು ನಾಶಮಾಡುವಂತಹ ಆಗಾಧವಾದ ಸಾಮರ್ಥ್ಯವಿದೆ. ಇಂತಹ ವ್ಯಕ್ತಿತ್ವದ ಮುಂದೆ

ಯಾವ ಒಂದು ಗಿರಿ ಶಿಖರಗಳು ಸಮನಾಗಲಾರವು. ಸಿದ್ಧಿ ಪುರುಷರ ಕಾರುಣ್ಯವು ಇಂದು ಅತ್ಯಂತ ಅವಶ್ಯವಾಗಿದೆ. ಇಂತಹ ಉನ್ನತ ವ್ಯಕ್ತಿತ್ವದ ಬದುಕನ್ನು ಕರ್ಕಿಯವರು ದೈವತ್ವಕ್ಕೇರಿಸುತ್ತಾರೆ.

**೩.೭. ವಿಡಂಬನಾ ಅಭಿವ್ಯಕ್ತಿ:**

ಗಂಭೀರವಾದ ಮತ್ತು ಗಹನವಾದ ವಿಷಯವೊಂದನ್ನು ನಗೆಯ ದೃಷ್ಟಿಯಿಂದ ಅನುಕರಿಸಿದರೆ, ಆಗ ಅಣಕವಾಡು ರೂಪಗೊಳ್ಳುತ್ತದೆ. ಇದರ ಹಿಂದೆ ಆ ವಿಷಯದ ಬಗ್ಗೆ ಗೌರವ ಭಾವನೆಯೂ ಇರುತ್ತದೆ. ದೋಷಗಳನ್ನು ನ್ಯೂನ್ಯತೆಗಳನ್ನು ಅತಿಯಾಗಿ ತೋರಿಸಿ ನಗಿಸಿ ತಿದ್ದುವದಕ್ಕೆ ವ್ಯಂಗ್ಯ ಬಳಕೆಯಾಗುತ್ತದೆ. ವ್ಯಂಗ್ಯವೆಂದರೆ ಅದು ತೋರಿಸುವ ಅರ್ಥವನ್ನು ಬಿಟ್ಟು. ಅದಕ್ಕೆ ವಿರುದ್ಧವಾದ ಅರ್ಥವನ್ನು ವ್ಯಕ್ತಪಡಿಸುವದು, ವ್ಯಕ್ತಿದೂಷಣೆ, ಅವಹೇಳನ ಇದರ ಉದ್ದೇಶವಲ್ಲ.

ನಮ್ಮ ಸುತ್ತಮುತ್ತಲಿನ, ಸಮಾಜದಲ್ಲಿನ ತಪ್ಪುಗಳನ್ನು ನೇರವಾಗಿ ತಿದ್ದಲು ಎರಡು ಮಾರ್ಗಗಳಿವೆ. ಅವು–ಒಂದು ಶಿಕ್ಷೆ, ಮತ್ತೊಂದು ಬೋಧನೆ. ಇವೆರಡೂ ನೇರಮಾರ್ಗಗಳನ್ನು ಬಿಟ್ಟು ಇನ್ನೊಂದು ಮೂರನೆಯ ಮಾರ್ಗವೊಂದಿದೆ. ಅದು ತಪ್ಪನ್ನು ಎತ್ತಿತೋರಿಸಿ ಅವರನ್ನು ನಗೆಪಾಟಲಿಗೆ, ಅಪಹಾಸ್ಯಕ್ಕೆ ಗುರಿಮಾಡಿ ತಿದ್ದಿಕೊಳ್ಳುವಂತೆ ಮಾಡುವದು. ಇದಕ್ಕೆ 'ವಿಡಂಬನೆ' ಎನ್ನುವರು. ನ್ಯೂನ್ಯತೆ ದೋಷಗಳಿದ್ದಲ್ಲಿ ವಿಡಂಬನದ ಕತ್ತಿ ಝಳಪಿಸುತ್ತದೆ. ನಗೆ–ವ್ಯಂಗ್ಯಗಳೇ ವಿಡಂಬನದ ಉಪಕರಣಗಳು. ವಿಡಂಬನಕಾರನಿಗೆ ಕೆಟ್ಟದರ ಬಗ್ಗೆ ದ್ವೇಷ: ಒಳ್ಳೆಯದರ ಬಗ್ಗೆ ಪ್ರೇಮವಿರಬೇಕು. ಯಾವುದು ಸರಿ, ಯಾವುದು ತಪ್ಪೆಂದು ತುಲನಾತ್ಮಕವಾಗಿ ಅಳೆದು ನಿರ್ಧರಿಸುವ ಸಾಮರ್ಥ್ಯವಿರಬೇಕು. ಅಂದಾಗ ಮಾತ್ರ ಆತನಿಗೆ ಆರೋಗ್ಯಕರವಾದ ವಿಡಂಬನೆಯಿಂದ ತಪ್ಪನ್ನು ತಿದ್ದಲು ಸಾಧ್ಯ. ಅನ್ಯೋಕ್ತಿಯು ವಿಡಂಬನದ ಒಂದು ಭಾಗ. ಇದರಲ್ಲಿ ಯಾವುದೋ ಒಂದರ ತಪ್ಪು ಕೆಟ್ಟದ್ದನ್ನು ಉದ್ದೇಶಿಸಿ ಇನ್ನೊಂದಕ್ಕೆಂದು ಹೇಳುವದು ಕುಕವಿಯನ್ನು ಕುರಿತು ಹೇಳಬೇಕಾದಲ್ಲಿ ಕತ್ತೆಯನ್ನೋ, ಕಾಗೆಯನ್ನೋ ಕುರಿತು ಅಪಹಾಸ್ಯ ಮಾಡುವದು. ಈ ಅನ್ಯೋಕ್ತಿಯನ್ನು ಹಳಗನ್ನಡದಲ್ಲಿ ವಿರಳವಾಗಿ ಕಾಣುತ್ತೇವೆ. ವಿಡಂಬನಕಾರನ ಕೆಲಸವನ್ನು ಹಂಬರ್ಟ ವುಲ್ಫ್ ಎಂಬುವವರು–"ಆತ್ಮಕ್ಕೆ ಅಂಟಿರುವ ಸಾವು ತರುವಂತಹ ಕಾಯಿಲೆಗಳನ್ನು ನಾಶಪಡಿಸುವದೇ ಹೊರತು ಜೀವ ಕೊಡುವದಲ್ಲ" (ಅನಂತನಾರಾಯಣ ಎಸ್, ೧೯೯೧, ಪುಟ–೩೬೭)ಎಂದಿರುವರು.

ಒಬ್ಬ ವ್ಯಕ್ತಿಯ ದ್ವೇಷದಿಂದ ಮಾಡುವ ವಿಡಂಬನೆ ಶ್ರೇಷ್ಠ ಮಟ್ಟದ್ದಲ್ಲ, ಹಾಗೆಯೇ ಒಬ್ಬ ವ್ಯಕ್ತಿಯ ದೋಷಗಳನ್ನು ಕುರಿತದ್ದು ಉತ್ತಮ ವಿಡಂಬನೆ ಎನಿಸದು. ಎಲ್ಲವನ್ನೂ ಎಲ್ಲರನ್ನೂ ಒಳಗೊಳ್ಳಬೇಕು. ಸಮಷ್ಟಿಯನ್ನು ಕುರಿತಿರಬೇಕೆ ಹೊರತು ವ್ಯಕ್ತಿಯನ್ನಲ್ಲ. ಹದಿನೇಳನೇ ಶತಮಾನದ 'ವಿದರ್'–ಎಂಬ ವಿಡಂಬನಕಾರ–"ನಾನು ಬರೆದ ವಿಡಂಬನೆಗಳಲ್ಲಿ ಇದೊಂದೆ ಮುಖ್ಯವಾದ ಗುಣವಿರಲಿ: ಕೆಟ್ಟದ್ದೆಂದು ಒಡೆದು ಕಾಣುವುವದನ್ನೆಲ್ಲಾ ಕಂಡು ಹಿಡಿದು ದಂಡಿಸುವುದು ಯಾವ

ವ್ಯಕ್ತಿಯನ್ನೂ ಲಕ್ಷದಲ್ಲಿಟ್ಟು ಇವುಗಳನ್ನು ಬರೆದಿಲ್ಲ, ಆದರೆ ಎಲ್ಲ ವ್ಯಕ್ತಿಗಳಿಗೂ ಇಲ್ಲಿ ಮಂಗಳಾರತಿಯಾಗಿದೆ-ಎಂದಿದ್ದಾನೆ.

ಶಿವರಾಮ ಕಾರಂತರು ವಿಡಂಬನೆಯ ರೀತಿ ಉದ್ದೇಶವನ್ನು ಕುರಿತು-"ಜನತೆಯಲ್ಲಿ ಏನಾದರೊಂದು ಮಂಕು, ತಪ್ಪು, ಜೀವನಕ್ಕೆ ಬೆಪ್ಪು, ಭಾವನೆಗಳಿಗೆ ಜಿಪ್ಪು ಕಟ್ಟಿಕೊಂಡಿದ್ದರೆ ಅವನ್ನು ನಯವಾಗಿ ನಗಿಸುತ್ತ ಕಿತ್ತು ತೆಗೆಸುವ ರೀತಿ ವಿಡಂಬನದ್ದು"(ಅನಂತನಾರಾಯಣ ಎಸ್, ೧೯೯೧, ಪುಟ-೩೬೯)ಎಂಬ ಅಭಿಪ್ರಾಯ ವ್ಯಕ್ತಪಡಿಸಿರುವರು.

ಈ ವಿಡಂಬನ ಕಾವ್ಯ ಕನ್ನಡಕ್ಕೆ ಪಾಶ್ಚಾತ್ಯ ಕಾವ್ಯಗಳ ಪ್ರೇರಣೆಯಿಂದ ೨೦ನೇ ಶತಮಾನದಲ್ಲಿ ಬಂತು. ಹಾಗೆಂದರೆ, ನಮ್ಮಲ್ಲಿ ಹಿಂದೆ ಈ ರೀತಿಯ ಕಾವ್ಯ ಇದ್ದಿರಲಿಲ್ಲವೆಂದು ಅರ್ಥವಲ್ಲ.-ಋಗ್ವೇದದಲ್ಲಿಯೂ ಭೂದಾಳಿಯು ತನ್ನನ್ನೇ ಮೂದಲಿಕೆ ಮಾಡಿಕೊಂಡಿದ್ದಾನೆ. ಕಾವ್ಯಗಳಲ್ಲಿ ಕುಕವಿ ನಿಂದೆಯಲ್ಲಿಯೂ ಕಾಣಬಹುದು. ಬಸವಣ್ಣನವರ ಹಾಗೂ ಇತರ ಶರಣರ ವಚನಗಳಲ್ಲೂ ಸರ್ವಜ್ಞನ ವಚನಗಳಲ್ಲೂ ಸಮಾಜ ವಿಡಂಬನೆಯನ್ನು ಕಾಣುತ್ತೇವೆ. ಪಂಪ-ಮೊದಲಾದ ಹಳೆಗನ್ನಡ ಕವಿಗಳ ಕಾವ್ಯಗಳಲ್ಲಿಯೂ ಇತ್ತು. ಕುಮಾರವ್ಯಾಸನು ಮಹಾಭಾರತಕ್ಕಿಂತ ರಾಮಾಯಾಣವನ್ನೇ ಕುರಿತು ಹೆಚ್ಚಾಗಿ ಕೃತಿ ರಚಿಸಿರುವದನ್ನು 'ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲ್ಲಿ'-ಎಂದು ವಿಡಂಬಿಸಿರುವನು, ಅಲ್ಲದೆ ಇವನ ಕಾವ್ಯದಲ್ಲಿ ಉತ್ತರಕುಮಾರನ ಪಾತ್ರ ಚಿತ್ರಣದಲ್ಲಿ ಇದನ್ನು ಕಾಣಬಹುದು. ಹೀಗೆ ವಿಡಂಬನೆ, ಹಿಂದೆ, ನಮ್ಮ ಸಾಹಿತ್ಯ ಪರಂಪರೆಯಲ್ಲಿ ಇತ್ತು. ಆದರೆ ಇದು ಹುಲುಸಾಗಿ ಕನ್ನಡದಲ್ಲಿ ಬೆಳೆದು ಬಂದದ್ದೂ-೨೦ನೇ ಶತಮಾನದ ಇಂಗ್ಲೀಷ್ ಸಾಹಿತ್ಯದ ಪ್ರಭಾವದಿಂದ ನವೋದಯ ಸಾಹಿತ್ಯ ಹುಂಬ ಆಶಾವಾದಿಯಲ್ಲ ಎಲ್ಲವನ್ನೂ ವೈಭವೀಕರಿಸಿ, ಎಲ್ಲದರಲ್ಲೂ ಬರಿ ಆದರ್ಶವನ್ನೇ ಕಾಣುತ್ತಾ ದೋಷಗಳಿಗೆ ಕುರುಡಾಗಲಿಲ್ಲ, ಸ್ವಾತಂತ್ರ್ಯ ಪೂರ್ವದಲ್ಲಿ ದೇಶದ ಗತಕಾಲದ ವೈಭವವನ್ನು ನೆನಪಿಸಿ ಜನತೆಯಲ್ಲಿ ಅಭಿಮಾನ ಹೆಮ್ಮೆ ಮೂಡಿಸಿ ಬಿಡುಗಡೆಯ ಹೋರಾಟಕ್ಕೆ ಪ್ರೇರೆಪಿಸಿದ ಈ ಸಾಹಿತ್ಯ ಸ್ವಾತಂತ್ರ್ಯಗೊಂಡ ನಂತರ ನಮ್ಮದೇ ಆದ ಲೋಪ-ದೋಷಗಳನ್ನು ಕುರಿತು ತಮ್ಮ ಮೊನಚಾದ ವಿಡಂಬನೆ ವ್ಯಂಗ್ಯದ ಮೂಲಕ ತಮ್ಮ ಕಾವ್ಯಗಳಲ್ಲಿ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದಾರೆ.

ದೇಶವು ಸ್ವಾತಂತ್ರ್ಯಗೊಂಡ ನಂತರ ಏನನ್ನು ನಿರಿಕ್ಷಿಸಲಾಗಿತ್ತೋ ಅದು ಈಡೇರಲಿಲ್ಲ. ರಾಷ್ಟ್ರದ ಆಗುಹೋಗುಗಳಲ್ಲಿ ಲೋಪ-ದೋಷಗಳು ಮನೆಮಾಡಿದವು. ಟೊಳ್ಳು ಆದರ್ಶ, ಸುಳ್ಳು ಆಶ್ವಾಸನೆ, ಪೊಳ್ಳು ಭರವಸೆಗಳು-ಜನತೆಯಲ್ಲಿ ಭ್ರಮನಿರಸವನ್ನುಂಟು ಮಾಡಿದವು. ದೇಶದ ಸಾಮಾಜಿಕ ಮೌಲ್ಯಗಳು ಬದಲಾದಂತೆ ಸಾಹಿತ್ಯದ ವಸ್ತು ಶೈಲಿ-ರೀತಿ-ಮನೋಧರ್ಮವೂ ಬದಲಾಗುತ್ತದೆ.

ಸ್ವಾತಂತ್ರ್ಯ ಪೂರ್ವದಲ್ಲಿಯೂ ಲೋಪ-ದೋಷಗಳಿದ್ದವು. ಆದರೆ ಎಲ್ಲರ ಗಮನವು ಸ್ವಾತಂತ್ರ್ಯದೆಡೆಗೆ ಗಮನ ಕೇಂದ್ರಿಕೃತವಾಗಿತ್ತು. ಇಲ್ಲವೆ ಈ ಲೋಪ-ದೋಷಗಳಿಗೆ ಪರದಾಸ್ಯವೇ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಕಾರಣವಾಗಿರುತ್ತಿತ್ತು. ನವೋದಯ ಕವಿಗಳು ಸ್ವಾತಂತ್ರ್ಯೋತ್ತರ ಕಾಲದ(ದೇಶದಲ್ಲಿಯ) ಲೋಪ-ದೋಷಗಳನ್ನು ರಾಷ್ಟ್ರದ ಹಿತಾಸಕ್ತಿ, ಕಾಳಜಿಯನ್ನಿಟ್ಟುಕೊಂಡು ತಿದ್ದುವ ಉದ್ದೇಶದಿಂದ ತಮ್ಮ ಕಾವ್ಯಗಳಲ್ಲಿ ವ್ಯಂಗ್ಯ-ವಿಡಂಬನೆ, ಟೀಕೆ ಮಾಡಿದ್ದಾರೆ. ಅವುಗಳನ್ನು ನೋಡಬಹುದಾಗಿದೆ.

ಆನಂದಕಂದರು (ಕಾರಹುಣ್ಣಿಮೆ ಸಂಕಲನದ) 'ಪ್ರಜಾರಾಜ್ಯ' ಕವನದಲ್ಲಿ ಪ್ರಜಾಪ್ರತಿನಿಧಿಗಳ ಡಾಂಭಿಕತೆಯನ್ನು ವಿಡಂಬಿಸಿದ್ದಾರೆ. 'ಯಾರದು ಈ ರಾಜ್ಯ?'-ಎಂದು ಪ್ರಜೆಗಳಿಗೆ ಗೊತ್ತಿಲ್ಲ. ಆದರೂ ಇದು ಪ್ರಜಾರಾಜ್ಯ. ಏಕೆಂದರೆ ಚುನಾವಣೆಯ ದಿನ ಪ್ರಜೆಗಳ ಬಾಯ್ಗೆ ಭಕ್ಷ್ಯ-ಭೋಜ್ಯ ಬೀಳುತ್ತದೆಂದು ವ್ಯಂಗ್ಯ ಮಾಡಿದ್ದಾರೆ. ಚುನಾವಣೆ ಮುಗಿದ ಮೇಲೆ ಪ್ರಜೆಗಳು ತ್ಯಾಜ್ಯ ವಸ್ತುಗಳು. ಪ್ರಜಾನಿಧಿಗಳ ಬಾಯ್ಗೆ ಭಾಜ್ಯ.

ಲಂಚಗಾರರ ಕಳ್ಳ ಪೇಟೆಗಾರರ ಕೃತಿಯಿಲ್ಲದೆ ಬರಿಮಾತುಗಾರರ ಪ್ರಜಾರಾಜ್ಯವಿದು. ಇಂದು ಪ್ರಜಾರಾಜ್ಯದ ಪ್ರತಿನಿಧಿಗಳ ಧ್ಯೇಯ-ಧೋರಣೆಗಳಾವುವೆಂದರೆ ತನ್ನ ನೆಂಟರು ಮಾಡಿದ್ದು ನ್ಯಾಯ, ಇತರರು ಮಾಡಿದ್ದು ಅನ್ಯಾಯ. ಅಧಿಕಾರದ ಕುರ್ಚಿಗೆ ಇತರರು ಅಪೇಕ್ಷಿಸದೇ ದುಡಿಯಬೇಕು.ಬಾಯಿ ಮಾತಿನಲ್ಲಿ ನಾವೆಲ್ಲರೂ ಒಂದೇ, ಒಂದು ದೇಶದವರು, ಆದರೆ ಜಾತಿ-ನುಡಿ-ಗಡಿಗಳ 'ಜಗಳಗಳೇ ತುಂಬಿವೆ. ಹೀಗಿರಲು ಪ್ರಜಾರಾಜ್ಯವನ್ನು ನೀವೆ ಕಾಯಬೇಕೆಂದು ಕವಿಗಳು ಜಗದೀಶ್ವರನಿಗೆ ಮೊರೆ ಹೋಗಿದ್ದಾರೆ.

'ಸ್ವಾತಂತ್ರ್ಯ'ಕವನದಲ್ಲಿ ಸ್ವಾತಂತ್ರ್ಯ ಬಂದರೂ ವಿಧಿ-ನಿಷೇಧ-ಕಟ್ಟಳೆಗಳು ಇರುತ್ತವೆಂಬುದನ್ನು ಕವಿ ಮಾರ್ಮಿಕವಾಗಿ ಪ್ರಕೃತಿಯ ನಿಯಮಕ್ಕೆ ಹೋಲಿಸಿರುವರು.

"ಪ್ರಕೃತಿ ತನ್ನ ಕಟ್ಟಳೆಗಳ
ಕೋಟೆಗಳನು ನಿರ್ಮಿಸಿಹಳು;
ಪ್ರತಿ ಜೀವವ ಪ್ರತಿ ಜಡವನು
ಕಟ್ಟಳೆಯಲಿ ಬಂಧಿಸಿಹಳು."

(ಬೆಟಗೇರಿಕೃಷ್ಣ ಶರ್ಮ, ೧೯೫೧, ಪುಟ-೭೧)

ಈ ಬಂಧನವನ್ನು ಹರಿದು ಹಾಕುವದೆಂಬರೆ ಲೋಕಕ್ಕೆ ತೊಂದರೆ, ಅಲ್ಲದೆ ಸ್ವಾತಂತ್ರ್ಯದಲ್ಲಿ ಸುಖವಿದೆ ಎಂದು ತಿಳಿದಿದ್ದರೆ ಅದು ತಪ್ಪು. ಇದೊಂದು ಆಟವಿದ್ದಂತೆ ಆಟವೂ ಕೂಡ ತಂತ್ರ ಬದ್ಧವಾಗಿರುತ್ತದೆ. ತಂತ್ರವಿಲ್ಲದ ಬಾಳು ಕೂಡಾ ಬಾಳಲ್ಲ, ಅದು ಗೋಳು; ಕೊನೆಗೆ ಬಾಳು

ಹಾಳಾಗುತ್ತಾ ಬೀಳಾಗುತ್ತದೆ. ಹೀಗೆ ಸ್ವಾತಂತ್ರ್ಯವೆಂದರೆ ಸ್ವೇಚ್ಛಾಚಾರವಲ್ಲ, ಅದಕ್ಕೂ ಕೆಲವು ಇತಿ– ಮಿತಿ ಬಂಧನ, ಕಟ್ಟು–ಕಟ್ಟಳೆಗಳು ಇರುತ್ತವೆಂಬುದನ್ನು ಸೊಗಸಾಗಿ ಬಣ್ಣಿಸಿದ್ದಾರೆ.

ಇವರ 'ರಾಜ್ಯ ಶಾಸನ ಶಕ್ತಿ' ಕವನವು ಇಂದಿನ ಸಮಾಜದಲ್ಲಿನ ವಿಷಮತೆಯನ್ನು ಕುರಿತಿದೆ. ಜಗದ ಜೀವನ ವಿಷಮಯವಾಗಿರುತ್ತದೆ. ದೈವವು ವಿಷಮತೆಯಲ್ಲಿ ಸಮತೆ ತರಲೆಂದು 'ರಾಜ್ಯಶಾಸನ ಶಕ್ತಿ'ಯನ್ನು ನಿಯಮಿಸುತ್ತದೆ. ಇದು ದೇಶ ದೇಶಗಳಲ್ಲಿ ಸಮಾನತೆಯನ್ನು ತರಲು ಬರುತ್ತದೆ. ಈ ರಾಜ್ಯಶಾಸನಶಕ್ತಿಯು ಜನರ ಮನೋ ಇಂಗಿತ ಅರಿತು, ವಿಷಮತೆಯ ಹಿಂದೆ ಸಮತೆಯೂ ಇದೆ. ಅದರ ಅರಿವು ಮಾನವರಲ್ಲಿ ಉದಿಸಿದರೆ ಸಮತೆ ತಾನಾಗಿಯೇ ಬರುತ್ತದೆಂದು ತಿಳಿಸುತ್ತದೆ. ಅವು ಯಾವುವೆಂದರೆ, ಜನನ, ಜೀವನ, ಹಸಿವು, ಹಗೆಯಂಜಿಕೆ, ಅಜ್ಞಾನ, ರೋಗವಾರ್ಧಕ್ಯ, ಮರಣ–ಇವು ಎಲ್ಲರಿಗೂ ಸಮಾನವಿವೆ. ಇವುಗಳನ್ನು ಪರಿಹರಿಸಲು ಯುಕ್ತಿ ಹೂಡಿರೆಂದು ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ ತಿಳಿಸುತ್ತದೆ.

ಆದರೆ ಹಸಿವೆಗೆ–ಅನ್ನ, ವಸತಿಗೆ–ಆಶ್ರಯ, ಹಗೆಯಿಂದ ರಕ್ಷಣೆ ಅಜ್ಞಾನವನ್ನಳಿಯಲು–ವಿದ್ಯೆ, ರೋಗ ರುಜಿನ ಅಳಿಯಲು ಮದ್ದು, ಮುದ್ದಿಗೆ–ವಿಶ್ರಾಂತಿ–ಇವುಗಳನ್ನು ಪಡೆಯಲು ನಿಯತಿ (ದೈವ–ತಾಯಿ) ಜನತೆಗೆ ನೀಡಿದ ಹಕ್ಕಾಗಿದೆ. ಆದರೆ, "ರಾಜ್ಯಶಾಸನ ಶಕ್ತಿ"–ಕುಟಿಲತೆಯಿಂದ ತಪ್ಪಿಸಿಕೊಳ್ಳುತ್ತಿದೆ. ಇದಕ್ಕಾಗಿ ಜನ ಹೋರಾಡಬೇಕಾಗಿದೆ. ಇಲ್ಲದಿದ್ದರೆ ವಿಷಮತೆಯನ್ನು ಉಣ್ಣಬೇಕು. ಅಂತೆಯೇ ಕವಿ ಈ ಜಗದ ಜೀವನ–

"ವಿಷಮ ಜೀವ ವಿಷಮ ಭಾವ
ವಿಷಮ ಜಗದ ಜನಮನ
ವಿಷಮ ಬುದ್ಧಿ ವಿಷಮ ಸಿದ್ಧಿ
ವಿಷಮ ರುಚಿಯ ಕಾರಣ
ವಿಷಮಯ ಜನ ಜೀವನ"

(ಬೆಟಗೇರಿಕೃಷ್ಣ ಶರ್ಮ, ೧೯೭೨, ಪುಟ–೨೫)

–ಎಂದು ಸೂತ್ರೀಕರಿಸಿದ್ದಾರೆ. ಹೀಗೆ ಈ ಕವನದಲ್ಲಿ ಇಂದು ಸರಕಾರವು ಜನತೆಯ ಬದುಕುವ ಹಕ್ಕನ್ನು ಯಾವ ರೀತಿ ಮೊಟಕುಗೊಳಿಸುತ್ತದೆ. ಜನತೆಯಲ್ಲಿ ಸಮಾನತೆ ತರಲು ಯಾವ ರೀತಿ ವಿಫಲವಾಗಿದೆ–ಎಂಬುದನ್ನು ಚಿತ್ರಿಸಿದ್ದಾರೆ.

ದಿನಕರ ದೇಸಾಯಿಯವರು ರಾಜ್ಯ–ರಾಷ್ಟ್ರದ ರಾಜಕಾರಣವನ್ನು ಹೂ–ಗೊಂಚಲು ಮತ್ತು ದಾಸವಾಳ ಸಂಕಲನದ ಹಲವಾರು ಕವನಗಳಲ್ಲಿ ವಿಡಂಬಿಸಿರುವರು. ರಾಜಕೀಯ ಅಸ್ಥಿರತೆಯನ್ನು ಹೋಗಲಾಡಿಸಿ ಸರಕಾರ ಭದ್ರತೆ ಕಾಯ್ದುಕೊಳ್ಳಲು ಶಾಸಕರನ್ನೇ ತೃಪ್ತಿಪಡಿಸಲು ಪದೇ ಪದೇ ಮಂತ್ರಿಮಂಡಲ ವಿಸ್ತರಣೆ, ಹೊಸ ಮಂತ್ರಿಮಂಡಳ ರಚನೆ ಮಾಡುತ್ತಿದ್ದ ಆಗಿನ ರಾಜ್ಯ ಸರಕಾರದ ಕ್ರಮವನ್ನು ಕುರಿತು–

"ಮಳೆಗಾಲ ಚಳಿಗಾಲ
ಬೇಸಿಗೆ ಬರುವಂತೆ
ಮೂರು ತಿಂಗಳಿಗೊಮ್ಮೆ
ಹೊಸ ಮಂತ್ರಿಗಳ ಸಂತೆ"

(ಶ್ರೀಪಾದಶೆಟ್ಟಿ, ೧೯೮೮, ಪುಟ–೧೨೭)

ದಾಸವಾಳ ಸಂಕಲನದ 'ಮುಖ್ಯ ಮಂತ್ರಿಯ ಹೇಳಿಕೆ' ಕವನದಲ್ಲಿಯೂ ಪದೇ ಪದೇ ಹೊಸ ಸರಕಾರ ರಚಿಸುವುದಕ್ಕೆ 'ಮೂರು ವಾರಕ್ಕೊಂದು ಸರಕಾರ ಕಟ್ಟಿ ಸುಟ್ಟುಕೊಳ್ಳುವರು ಅವರವರ ರೊಟ್ಟಿ"–ಎಂದು ಟೀಕಿಸಿರುವರು. ಮಂತ್ರಿಗಳು ಕೊಡುವ ಆಶ್ವಾಸನೆಗಳು ಆಕಾಶದಲ್ಲಿ ಮಿನುಗುವ ನಕ್ಷತ್ರಗಳಿದ್ದಂತೆ. ಅವುಗಳನ್ನು ನಾವು ಬರಿ ದಿಟ್ಟಿಸಿನೋಡಿಯೇ ನಲಿಯಬೇಕು. ಅವು ನಮಗೆ ಕೈಗೆಟಕಲಾರವು. 'ರಾಷ್ಟ್ರೀಯ ಯೋಜನೆ' ಕವನದಲ್ಲಿ ಯೋಜನೆಯ ಹೆಸರಿನಲ್ಲಿ ಭ್ರಷ್ಟರು– ಸ್ವಾರ್ಥಿಗಳು ತಮ್ಮ ಹಂಬಲ–ದುರಾಸೆ ತೀರಿಸಿಕೊಳ್ಳುತ್ತಿದ್ದಾರೆ.ಅವುಗಳ ವಿಫಲತೆಯನ್ನು ಬಹಳ ಮನೋಹರವಾಗಿ ಬಣ್ಣಿಸಿರುವರು, 'ಗಾಂಧೀಜಿಯವರಲ್ಲಿ ಭಿನ್ನವತ್ತಳೆ'–ಕವನದಲ್ಲಿ ಲಂಚ ತಿಂದ ಮಂತ್ರಿಯೊಬ್ಬ ಸಿಕ್ಕಿ ಬಿದ್ದು ಮಂತ್ರಿ ಪದವಿ ಕಳೆದುಕೊಂಡು ಆತ ತಾನು ಮಾಡಿದ ತಪ್ಪನ್ನು ಗಾಂಧೀಜಿಯವರ ಮುಂದೆ ಹೇಳಿಕೊಳ್ಳುವ ರೀತಿ ಹೀಗಿದೆ:

"ಎಲ್ಲರೂ ಹಂಚಿಕೊಳ್ಳಿ ಎಂದು ನೀ ಕೊಟ್ಟೆ
ಎಲ್ಲರಿಗೂ ಹಂಚಿಯೇ ನಾ ತಿಂದು ಬಿಟ್ಟೆ"

(ಶ್ರೀಪಾದಶೆಟ್ಟಿ, ೧೯೮೮, ಪುಟ–೧೨೨೮)

ಈ ಕಲ್ಪನೆ ಅವರ ದೇಶದ ಇಂದಿನ ವ್ಯವಸ್ಥೆಯ ವಿಡಂಬನೆಗೆ ಉತ್ತಮ ನಿದರ್ಶನವಾಗಿದೆ. ಚೌಪದಿಗಳಲ್ಲೂ ದೇಶದ ವ್ಯವಸ್ಥೆಯ ಲೋಪ–ದೋಷಗಳನ್ನು ವಿಡಂಬಿಸಿರುವರು, ಪಂಚವಾರ್ಷಿಕ ಯೋಜನೆಯ ದುರುಪಯೋಗ ಕುರಿತು:

"ಪಂಚವಾರ್ಷಿಕದಿಂದ ನಾಡಿನುದ್ಧಾರ
ರಾಜಕಾರಣಿಗಳಿಗೆ ಮಾಣಿಕದ ಹಾರ.
ಕಂಟ್ರಾಕ್ಟುದಾರನಿಗೆ ದಿನಕೋಟಿ.
ಬಡವರಿಗೆ ಸಿಕ್ಕದ್ದು ಹರಕು ಲಂಗೋಟಿ."

(ದಿನಕರ ದೇಸಾಯಿ, ೧೯೭೮, ಪುಟ–೧೨೮)

–ಎಂದು ಪಂಚವಾರ್ಷಿಕ ಯೋಜನೆಯ ಕೋಟಿ ಗಟ್ಟಲೆ ಹಣವು ವ್ಯರ್ಥವಾಗಿ ಸೋರಿ ಹೋಗುವದಕ್ಕೆ ವ್ಯಥೆಪಟ್ಟಿರುವರು. ಅಂದಿನ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯು ತುರ್ತು ಪರಿಸ್ಥಿತಿ ಸಾರಿ ಅನೇಕ ಜನ ನಿರಪರಾಧಿಗಳನ್ನು, ತನ್ನ ರಾಜಕೀಯ ವಿರೋಧಿಗಳನ್ನು ಸೆರೆಮನೆಗೆ ತಳ್ಳಿರುವದನ್ನು–

"ತುರ್ತುಸ್ಥಿತಿಯೆಂಬ ಕರಡಿಯ ಮುಂದೆ ಮಾಡಿ
ಸಜ್ಜನರ ಕೈಯಿಗೂ ಹಾಕಿದರು ಬೇಡಿ.
ಈ ಅಧೋಗತಿಗೆ ಜಾರಿದರೆ ಸರಕಾರ
ನವಭಾರತಕೆ ಲಪಂಗರ ರಾಜ್ಯಭಾರ."

(ದಿನಕರ ದೇಸಾಯಿ, ೧೯೭೮, ಪುಟ–೨೦೦)

–ಎಂದು ಶ್ರೀಮತಿ ಇಂದಿರಾ ಗಾಂಧಿಯವರ ಸರ್ವಾಧಿಕಾರತ್ವ, ತುರ್ತು ಪರಿಸ್ಥಿತಿ ಸಾರಿ, ಪ್ರಜಾಪ್ರಭುತ್ವಕ್ಕೆ ಕುಂದು ತಂದಿರುವದನ್ನು, ತನ್ನ ರಾಜಕೀಯ ವಿರೋಧಿಗಳನ್ನು ಸೆರೆಮನೆಗೆ ಕಳಿಸಿದ್ದನ್ನು, ವಿಡಂಬಿಸಿದ್ದಾರೆ.

ಪು.ತಿ.ನ. ಅವರು 'ಬಿಡುಗಡೆಯ ಹಿರಿಮೆ ದಿನ' ಕವನದಲ್ಲಿ ಪ್ರತಿವರ್ಷ ಮರಳಿ ಮರಳಿ ಬರುವ ಸ್ವಾತಂತ್ರ್ಯೋತ್ಸವ ಬರುಬರುತ್ತಾ ತನ್ನ ಮಹತ್ವವನ್ನು ಕಳೆದುಕೊಳ್ಳುತ್ತಿದೆ. ಹರ್ಷ ಕಳೆಯುತ್ತಿದೆ, ನಾಡು ಮೊದಲಿನಂತೆಯಾಗುತ್ತಿದೆ. ನಡೆಗೆ–ನುಡಿಗೆ ಹೆರವರ ಕಡೆ ಕೈ ಚಾಚುತ್ತಿದ್ದೇವೆ. ಹೆರವರೆರಚುವ ಕೂಳನ್ನೇ ತಿನ್ನುತ್ತಿದ್ದೇವೆಂದು ವ್ಯಥೆಪಟ್ಟಿರುವರು. ಅಂತೆಯೇ ಕವಿಗೆ–"ತೋರದು ತ್ರಿವರ್ಣ ಧ್ವಜಂ ಸತ್ಯ ವಿಶ್ವಾಸವಂ ಸಾರುತಿದೆ ಗಾಳಿ ಪಾರದರ್ಶಿಗಳಿಡುವ ನಿಶ್ವಾಸವಂ"(ನರಸಿಂಹಚಾರ್ಯ ಪು.ತಿ. ೧೯೯೮, ಪುಟ–೫೫೪)ಎಂದು ಹೇಳಿರುವರು.

"ಸ್ವಾತಂತ್ರ್ಯ ದೇವಿಗೆ"–ಕವನದಲ್ಲಿ ಪು.ತಿ.ನ ಅವರು ದೇಶವು ಸ್ವಾತಂತ್ರ್ಯಗೊಂಡಿತು ಅದರ ಬೆನ್ನ ಹಿಂದೆಯೇ ದೇಶದ ವಿಭಜನೆ, ಜಾತಿ–ಮತದ ಕಲಹಗಳುಂಟಾದವು. ಇದಕ್ಕೆ ಮುಂಗುರುಹುವೆಂಬಂತೆ ಸ್ವಾತಂತ್ರ್ಯ ದೇವಿಯು ಈ ನಾಡಿಗೆ ಸ್ವರ್ಗದಿಂದ ಇಳಿದು ಬರಬೇಕಾದರೆ ಆಕೆ ಸೌಮ್ಯಮುಖಿಯಾಗಿರಲಿಲ್ಲ. ರೌದ್ರತೆ ಹೊಂದಿದ್ದಳು. ಅವಳ ಅರ್ಭಟಕ್ಕೆ ಭೂಮಿಯೇ ನಡುಗಿತು. ಸ್ವಾತಂತ್ರ್ಯ ದೇವಿಯ ಜಯ ಘೋಷ ಅದೇ ತಾನೆ ಮೊಳಗಿತು. ಮರುಕ್ಷಣವೇ ದುಃಖಾರ್ತಲೋಕದಾಕ್ರಂದನವಾಯಿತು. ಸ್ವಾಂತ್ರ್ಯಗೀತೆಯೇ ಶೋಕ ಗೀತೆಯಾಯಿತು?–ಎಂದು ಮುಂತಾಗಿ ದೇಶವು ಸ್ವಾತಂತ್ರ್ಯಗೊಂಡನಂತರ ಮತೀಯ ಕಲಹ ಅಧಿಕಾರ ದಾಹ–ಮೊದಲಾದ ಜ್ವಲಂತ ಸಮಸ್ಯೆಗಳಿಗೆ ವ್ಯಥೆಪಟ್ಟಿರುವರು.

ಕುವೆಂಪುರವರು (ಮಂತ್ರಾಕ್ಷತೆ ಸಂಕಲನದ) 'ಆಪತ್ಕಾಲ'–ಕವನದಲ್ಲಿ ಇಂದಿರಾ ಗಾಂಧಿಯವರು ದೇಶದಲ್ಲಿ ತುರ್ತುಪರಿಸ್ಥಿತಿ ಸಾರಿದಾಗ ಪ್ರಜಾಪ್ರಭುತ್ವವನ್ನು ಕೊಲ್ಲಲಾಯಿತೆಂದು ಸೊಗಸಾಗಿ ಬಣ್ಣಿಸಿರುವರು:

"ಬಾಯ್ಗೆ ಬಟ್ಟೆ ತುರುಕಿದಾರೆ
ಬಿಗಿದು ಕೈಯ ಕಟ್ಟಿದಾರೆ.
ಗಂಟಲೊತ್ತಿ ಹಿಸುಗಿದಾರೆ!

ಸತ್ತೆ ಸತ್ತೆ ಅಯ್ಯೋ ಸತ್ತೆ
ನಾನು-ಪ್ರ-ಜಾ-ಸ-ತ್ತೆ!"

(ಕುವೆಂಪು, ೧೯೮೨, ಪುಟ-೬೩)

ಶಿವರಾಂ ಕಾರಂತರು (ಸೀಳ್ಗವನಗಳು ಸಂಕಲನದ) 'ವಂದೇ ಮಾತರಂ' ಕವನದಲ್ಲಿ ದೇಶದ ನಾಯಕರ ಡಾಂಭಿಕತೆ, ಭ್ರಷ್ಟತೆಯನ್ನು ವಿಡಂಬಿಸಿರುವರು. ಅಂದು 'ವಂದೇ ಮಾತರಂ' ಎಂದು ಕೂಗಿದೆವು, ಅದರ ಫಲವೊ ಅಥವಾ ದಂಗೆಯ ಫಲವೋ, ದೇಶಕ್ಕೆ ಸ್ವಾತಂತ್ರ್ಯ ಬಂತು. ಆದರೆ ಇಂದು ನಾವು ಆರಿಸಿ ಕಳಿಸಿದ ಜನಪ್ರತಿನಿಧಿಗಳು ಸಾಮಾನ್ಯರಲ್ಲ; ಬಹಳ ಯುಕ್ತಿವಂತರು. ಅಶೋಕ-ಅಕ್ಬರರನ್ನು ತಿಂದು ತೇಗಬಲ್ಲರು. ನಾಲ್ಕು ದಶಕಗಳಲ್ಲಿ ದೇಶವು ಬಾನಿನಾ ವಿಸ್ತಾರದಷ್ಟು ಸಾಧಿಸಿದ್ದು ಏನೆಂದರೆ-ಹಿಂದೆ ಸತ್ಯಸಂಧರ ನಾಡಾದ ಇದು ಇಂದು, ಕಳ್ಳಕಾಕರ ನಾಡಾಗಿದೆ. ಇಂದಿನ ನಾಯಕರು-

"ಸತ್ಯವನು ವಧಿಸುತಲಿ ಧರ್ಮವನು ಮುರಿಯುತಲಿ
ಮೆರೆದೆ ಮೆರೆಯುತ್ತಿಹರು ರಾಷ್ಟ್ರದಲ್ಲೆಲ್ಲ;"

(ಶಿವರಾಮ ಕಾರಂತ, ೧೯೯೦, ಪುಟ-೫೩)

-ಇದಕ್ಕಿಂತಲೂ ಜನಕೆ ಹೆಚ್ಚಿಗೇನು ಬೇಕು? ಪ್ರಜೆಯ ನಿತ್ಯ ಶೋಷಣೆಯ ಮದುವೆ ನಡೆಯುತ್ತಿದೆ. ಈ ನೆಲ ಮಸಣವಾಗಿದೆ. 'ಹೆಬ್ಬಾರತ ಗೀತೆ'-ಯಲ್ಲಿಯೂ ಕಾರಂತರು ಲೋಪ-ದೋಷಗಳಿಗೆ ಸಿಡಿಮಿಡಿಗೊಂಡು ವಿಡಂಬಿಸಿದ್ದಾರೆ."ಜನಗಣ ನೊಣಗಳೆ ಏಳಿ ಎದ್ದೇಳಿ'-ಎಂದು ಮೌಢ್ಯ ಜನತೆಯನ್ನು ಮೂದಲಿಸಿ ಎಚ್ಚರಿಸಿದ್ದಾರೆ. ನಾಯಕರಿಗೆ ಜಯವಾಗಲಿಕ್ಕೆ ದೇಶದ ಇಂದಿನ ಸಂತತಿ ಹಿಂದಿನಂತಲ್ಲ. ಇಂದು ನೀತಿ-ನೇತಿಗಳಾಗಿವೆ. ಸ್ವಾತಂತ್ರ್ಯ ಕುತಂತ್ರದ ಜಾಲವಾಗಿ ಮಾರ್ಪಟ್ಟಿದೆ. ಅಂತೆಯೇ-"ಗಾಂಧಿ ಗೀಂಧೀ ಸರಿದರು ಹಿಂದೆ; ಬ್ರಾಂದಿ ಗೀಂದಿ ನದಿಗಳ ತುಂಬೆ"(ಶಿವರಾಮ ಕಾರಂತ, ೧೯೯೦, ಪುಟ-೬೯)ಎಂದು ವ್ಯಂಗ್ಯವಾಡಿದ್ದಾರೆ. ಇಂದು ಬುದ್ಧಿ ಇದ್ದರೂ ಒಂದೆ, ಇಲದಿದ್ದರೂ ಭಯಪಡಬೇಕಾಗಿಲ್ಲ. ಲಂಡರ ಭಂಡರ ಪಡೆಯೇ ನಿರ್ಮಾಣವಾಗಿದೆ. ಇವರೇ ಆಳಲು ನಿಂತಾಗ ಭಯವೇಕೆ? ನಮ್ಮ ನಾಳುವ ಜನಪ್ರತಿನಿಧಿಗಳ ಆಯ್ಕೆಯನ್ನು ಕುರಿತು ಸೂಕ್ಷ್ಮವಾಗಿ ಛೇಡಿಸಿದ್ದಾರೆ.

"ಅತಿ ಹೆಚ್ಚಿನ ಭಂಡರ ಲಂಡರ ಗೆಲಿಸಿರಿ
ಭಾರತಾಂಬೆಯ ಚಿತೆಯನು ಉರಿಸಿರಿ
ಚಿಂತೆಯನುಳಿದು 'ಸತಿ'-ಯಳ ಸ್ಮರಿಸಿರಿ."

(ಶಿವರಾಮ ಕಾರಂತ, ೧೯೯೦, ಪುಟ-೭೦)

ಆ ಚಿತೆಯಲ್ಲಿ ಭಾರಂತಾಬೆ 'ಸತಿ' ಹೋಗುವ ಕಲ್ಪನೆಯನ್ನು ಕೊಟ್ಟಿರುವರು.

'ಭಾರತದಿ ಜನಿಸೆ' ಕವನದಲ್ಲಿ ಭ್ರಷ್ಟತೆ, ಡಾಂಭಿಕತೆ ತುಂಬಿದ ದೇಶದಲ್ಲಿ ಹುಟ್ಟ ಬೇಕಾದರೆ ನೂರು ಜನ್ಮದ ಪುಣ್ಯಬೇಕೆಂದು ವ್ಯಂಗ್ಯಮಾಡಿದ್ದಾರೆ. ಪರದೇಶಿ ಅಕ್ಬರ, ಸ್ವದೇಶಿ ಅಶೋಕ ಆಳಿದ, ಬುದ್ಧ, ಬಸವಣ್ಣನಂಥವರು ಒರಗಿದ್ದ ನೆಲವಿದು. ಇಂದೂ ಕೂಡಾ ನಮ್ಮಲ್ಲಿ ಸಾಮಾನ್ಯರಿಲ್ಲಾ,– (ರಾಜನಾರಾಣ, ಮಣ್ಯಶುಭ್ರಮರು, ಚಂದ್ರಶೇಖರ, ಲಾಲದೇವಿ, ಚಂದ್ರಸ್ವಾಮಿ, ಧಿರೇಂದ್ರ–ಮೊದಲಾದವರು ಇದ್ದಾರೆ). ಇವರು–"ತೋಪಿನಾ ಗುಂಡುಗಳ ನುಂಗಬಲ್ಲವರುಂಟು: ಇಡಿ ಇಡೀ ತೋಪನ್ನೇ ನುಂಗುವವರುಂಟು;"(ಶಿವರಾಮ ಕಾರಂತ, ೧೯೯೦, ಪುಟ–೭೧)ಇಂಥವರು ನಮ್ಮ ತಾರಾಂಗಣದಲ್ಲಿ ಧೂಮಕೇತುಗಳಿದ್ದಂತೆ ನಡು ಹಗಲನ್ನೇ ಅಮವಾಸ್ಯೆಯ ರಾತ್ರಿಯೆಂದು ಸೂರ್ಯನಿಗೆ ಛಾಲೆಂಜುಮಾಡುವ ಧೀರರಿವರು. 'ಭಾರತವು ಭಾರತವೇ–ಕವನದಲ್ಲಿ ಈ ದೇಶ ಜನರಾದ ನಾವು ನಮ್ಮ, ಚಾಳಿ, ನೀತಿ, ಧೋರಣೆ ಬಿಡಲಾರೆವು. ಅದು ಒಂದೇ ಓದುವ ಚಟವಿಲ್ಲ, ಹಗಲು–ರಾತ್ರಿ ಯೋಗ ನಿದ್ರೆಮಾಡುವೆವು. ಅಂತೆಯೇ ಭಾರತವು ಬದಲಾಗಲಾರದು. ಭಾರತವು ಭಾರತವೇ ಆಗಿರುತ್ತದೆ. ಭಾರತವನ್ನು ಬಿಟ್ಟರೆ ನಮಗೆ ಗತಿಯೇ ಇಲ್ಲ. ಹಾಗಾಗಿ ನಾವು ಶ್ರೀಮಂತರಲ್ಲದಿದ್ದರೂ ಪುಣ್ಯವಂತರು; ಧೀಮಂತರು. ಹೀಗೆ ಸ್ವಾತಂತ್ರ್ಯೋತ್ತರದ ದೇಶದ ಜನತೆಯ ಮೌಢ್ಯತೆ ಜಡತೆಯನ್ನು ವಿಡಂಬಿಸಿದ್ದಾರೆ.

ಸಿದ್ಧಯ್ಯ ಪುರಾಣಿಕರು (ಚರಗ ಸಂಕಲನದ) 'ಏಕೆ ಮನೆಯೆ ಬಿರುಕು ಬೇಗ ಬಿಟ್ಟೆ?'–ಕವನದಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದು ಮೂರು ದಶಕಗಳಲ್ಲಿಯೇ ಅದರ ಬಾದಕಗಳನ್ನ (ವಿಫಲತೆಗಳನ್ನು) ಕಂಡು ಹೊಸದಾಗಿ ಕಟ್ಟಿದ ಮನೆ ಬೇಗನೆ ಶಿಥಿಲಗೊಂಡುದಕ್ಕೆ ಹೋಲಿಸಿದ್ದಾರೆ. ಇದನ್ನು ಕಟ್ಟಿದ ಬಗೆಯನ್ನು ಕವಿ ಹೀಗೆ ವರ್ಣಿಸಿರುವರು.

"ಬಿಡುಗಡೆಗೆ ಬಲಿಯಾದ ಗಂಡುಗಲಿಗಳ ಗಟ್ಟಿ
ಗುಂಡಿಗೆಯ ರಕ್ತದಲಿ ರಾಷ್ಟ್ರಭಕ್ತಿಯ ಮಣ್ಣ
ಬೆರೆಸಿ ಇಟ್ಟಿಗೆ ಮಾಡಿ ತ್ಯಾಗಾಗ್ನಿಯಲಿ ಸುಟ್ಟು
ಕಟ್ಟಿದೀ ಕಟ್ಟಡವು"

(ಸಿದ್ದಯ್ಯ ಪುರಾಣಿಕ, ೧೯೮೨, ಪುಟ–೭)

ಅಷ್ಟಾದರೂ ಇದು ಮೂರೇ ದಶಕಗಳಲ್ಲಿ ಶಿಥಿಲಗೊಂಡಿದೆ. ಮನೆಯ ಒಡೆಯರಿದ್ದರೂ ಮನೆಯಲ್ಲಿ ಧೂಳು, ಕಸ, ತುಂಬಿದೆ. ಹುಲ್ಲೂ ಹುಟ್ಟಿದೆ. ಇಲ್ಲಾಣ; ಜಾಡ ಬಿಟ್ಟಿದೆ. ಸೊಳ್ಳೆ–ಇಲಿ–ಹೆಗ್ಗಣಗಳ ಕಾಟ, ಮಾಳಿಗೆ ಸೋರುತ್ತಿದೆ. ಈ ಮನೆಗೆ ಕಳ್ಳ ಕನ್ನ ಹಾಕದೆಯೆ ನುಗ್ಗಬಹುದು. ಇದರಲ್ಲಿ ಕೂಡಿ ಉಣ್ಣುವದಿರಲಿ, ಕೂಡಿ ಆಡುವದೂ ಪಾಪವೆನಿಸಿದೆ–ಮುಂತಾಗಿ ದೇಶದ ಅಸ್ಥವ್ಯಸ್ಥ ಸ್ಥಿತಿಯನ್ನು ಅಸ್ಥವ್ಯಸ್ಥವಾದ ಹಾಳು ಬಿದ್ದ ಮನೆಗೆ ಹೋಲಿಸಿ ವಿವರಿಸಿದ್ದಾರೆ. ನೀರಿಗಾಗಿ, ಬೇರೆ ನಾಡಿಗಾಗಿ, ಗಡಿಗಾಗಿ ನಿತ್ಯವೂ ಹೊಡೆದಾಟ–ಬಡಿದಾಟ ನಡೆಯುತ್ತಿದೆ. ಈ ಮನೆ ಬೀಳುವ ಮೊದಲೇ ಅದರ

ರಿಪೇರಿ ಮಾಡಬೇಕಾಗಿದೆ. ಕೇಂದ್ರ ಸರ್ಕಾರದ ವಿರುದ್ಧ ಕಿಡಿಕಾರಿದ ಮನೋಭಾವವನ್ನು ಒಳಗೊಂಡಿದೆ. ರೈತರೇ ಹಾಡಿದ್ದಾರೆನ್ನುವಂತಹ "ರಾಯ್ ಬರೇಲಿ ರೈತರ ಹಾಡು"-ಕವನವು ರೈತರು ಸಂಘಟನೆಯಾಗಿ ಹೋರಾಟದಿಂದ ಅಂದಿನ ಭಾವನೆಯನ್ನು ಇದು ವ್ಯಕ್ತಪಡಿಸುತ್ತದೆ. ರೈತರ ಹೋರಾಟವನ್ನು ಹತ್ತಿಕ್ಕಲು ಸರಕಾರ ಒಂದು ವೇಳೆ ಜೈಲಿಗೆ ಕಳಿಸಲೂ ಮುಂದಾದರೆ, ಈ ರೀತಿ ರೈತರನ್ನು 'ಒಲಿಸಿ ಅಳ್ವುದ ಬಿಟ್ಟು ಅಳಿಸಿ ಆಳುವವರನ್ನು ಕೆಳಗೆ ಇಳಿಸುವೆವು, ಅವರು ಇಂದಿರಾಗಾಂಧಿಯಾಗಿರಲಿ ಯಾರೇ ಆಗಿರಲಿ!"-ಎಂದು ಗುಡುಗಿದ್ದಾರೆ. ಇಂದಿನ ನಾಯಕರಿಗೆ ರಾಮ-ಗ್ರಾಮ-ಪ್ರಜಾ ಸುಖೀ ಈ ಯಾವ ರಾಜ್ಯವೂ ಬೇಕಾಗಿಲ್ಲ. ಅವರಿಗೆ ಬೇಕಾದದ್ದು-

"ನನ್ನ ರಾಜ್ಯವೇ ಬೇಕು, ಆ ಮೇಲೆ
ನನ್ನ ಮಗನ ರಾಜ್ಯ ಬೇಕೆನ್ನುವರ"
(ಸಿದ್ದಯ್ಯ ಪುರಾಣಿಕ, ೧೯೮೨, ಪುಟ-೩೨)

ಇಂಥಹ ಪೊಳ್ಳು ಆದರ್ಶವಾದಿ ನಾಯಕರು ಸುಳ್ಳು ಭರವಸೆಗಳನ್ನು ಕೊಡುತ್ತಾ ಜನರನ್ನು ಹಲವು ಧರ್ಮ-ಜಾತಿ-ಮತ-ಪಂಗಡ-ವರ್ಗಗಳಾಗಿ ಒಡೆದು ಶೋಷಣೆ ಮಾಡುತ್ತಾ, ಬಡವರ ಹೆಸರಿನಲ್ಲಿ ಸುಲಿಗೆ ಮಾಡುತ್ತಿದ್ದಾರೆ. ಹಣ-ಹೆಂಡ-ಜಾತಿ-ಕುಲಗಳ ಬಲದಿಂದ ಒಡೆತನ ಪಡೆದು ಮುಗ್ಧ ರೈತರನ್ನು ಮರುಳು ಮಾಡಿ ಆಳುವ ಕಾಲ ಹೋಯಿತು. ಇಂದು ರೈತರು ತಾವೆಲ್ಲರೂ ಒಂದಾಗಿ ಇಂಥವರನ್ನು ತೊಲಗಿಸಲು ಹೋರಾಡಬೇಕೆಂದಿದ್ದಾರೆ. ಇವರ ಹೋರಾಟವನ್ನು ಸರಕಾರ ತರ್ತು, ಬಿ.ಎಸ್.ಎಫ್, ರಿಜರ್ವ ಪೋಲಿಸ್, ಸೆರೆಮನೆವಾಸ- ಮುಂತಾದವುಗಳಿಂದ ನಮ್ಮನ್ನು ಬಗ್ಗಿಸಲು ಸಾಧ್ಯವಿಲ್ಲ, ಬದಲಾಗಿ ಅವರನ್ನೇ ಬಗ್ಗಿಸುತ್ತೇವೆ-ಎಂಬ ದೃಢ ನಿಲುವನ್ನು ತಾಳಿರುವರು. ಇದೇ ಸಂಕಲನದ 'ಮಂತ್ರಿಯ ಮನವಿ' ಕವನದಲ್ಲಿ ಮಂತ್ರಿಯೋರ್ವನು ಜನರ ಆರೋಪಗಳಿಗೆ ತಮ್ಮ ನಿಜಸ್ಥಿತಿಯನ್ನು ಅರುಹುವ ಚಿತ್ರಣವನ್ನು ಕೊಟ್ಟಿರುವರು.

ಮಂತ್ರಿಯು ಜನತೆಗೆ, 'ನೀವು ಮಂತ್ರಿಗಳಿಗೆ ನೂರಾರು ಆರೋಪಗಳನ್ನು ಮಾಡುವಿರಿ. ಆದರೆ ಅವುಗಳಲ್ಲಿ ಮುಖ್ಯವಾದವು ಮೂರು, ಅವು: 'ನುಡಿದಾಂಗ ನಡೆಯೋದಿಲ್ಲ','ಸುಳ್ಳು ಭಾಳ ಹೇಳ್ತಾರ', "ಭಾಳ ದುಡ್ಡು ಹೊಡೀತಾರ',-ಇವುಗಳಿಗೆ ಯಾವ ಮಂತ್ರಿಯು ಸತ್ಯದಿಂದ ಉತ್ತರ ಕೊಡುವದಿಲ್ಲ. ಆದರೆ ತಾನು 'ಹೋಮ್‌ಟ್ರುತ್'-ಹೇಳುತ್ತೇನೆಂದು, ಇವುಗಳಿಗೆ ಉತ್ತರ ಕೊಟ್ಟಿದ್ದಾರೆ. ಮೊದಲನೆಯದು 'ನುಡಿದಂಗ ನಡೆಯೋದಿಲ್ಲ'-ಎಂಬುದಕ್ಕೆ ಮಂತ್ರಿಯು ತಮ್ಮ ಹೊತ್ತೆಲ್ಲಾ ನುಡಿಯೋದರೊಳಗ ಹೋಗುತ್ತದೆ. ಆದ್ದರಿಂದ ನಡೆಯಲಿಕ್ಕೆ ಹೊತ್ತು ಸಿಗುತ್ತಿಲ್ಲ.

ಎರಡನೆಯದು-"ಸುಳ್ಳು ಭಾಳ ಹೇಳ್ತಾರ"-ಇದಕ್ಕೆ ಮಂತ್ರಿಯು ಇದ್ದದ್ದೂ ಇದ್ದಾಂಗ ಹೇಳಿದ್ರ ಜನ ಮತ ಹಾಕುವದಿಲ್ಲ. ನಾವು ಐದು ವರ್ಷಕ್ಕಲ್ಲ, ಐವತ್ತು ವರ್ಷಕ್ಕೆ ಆರಿಸಿಬಂದ್ರು ಸಹಿತ ಈ

ದೇಶದ ಜನತೆಗೆ ಹಾಲಲ್ಲ ಮಜ್ಜಿಗೆ ಸಹಿತ ಕೊಡಲಿಕ್ಕಾಗುವದಿಲ್ಲ, ಬಡತನ ಕಳೆಯೋದಿಕ್ಕೆ ಸಾಧ್ಯವಿಲ್ಲ. ಇದು ಎಲ್ಲರಿಗೂ ತಿಳಿದ ಸತ್ಯವೇ. ಆದರೆ ಈ ಸತ್ಯ ಹೇಳಿದ್ರ ಮತ ಹಾಕುವದಿಲ್ಲ. ಅದಕ್ಕೆ ಬದಲಾಗಿ ನಾವು ಆರಿಸಿ ಬಂದ ಕೂಡಲೆ–

"ನಿಮ್ಮ ಬಡತನಾ ಬುಡ ಮೇಲ್ಮಾಡ್ತೀವಿ
ನಿಮ್ಮನೆ ಮುಂದೆ
ಹಾಲಿನ ಹಳ್ಳಾ ಹರಿಸ್ತೀವಿ
ಬೆಣ್ಣೆ ಬೆಟ್ಟ ಏರಿಸ್ತೀವಿ"

(ಸಿದ್ದಯ್ಯ ಪುರಾಣಿಕ, ೧೯೮೨, ಪುಟ–೪೨)

–ಎಂದು ಹೇಳಿದರೆ ನಮಗೆ ಮತ ಹಾಕುತ್ತಾರೆ. ಒಂದು ವೇಳೆ ಸತ್ಯ ಹೇಳಿದರೇ ನೀವು ಮತ ಹಾಕುತ್ತಿದ್ದರೆ ನಾವ್ಯಾಕೆ ಸುಳ್ಳು ಹೇಳುತ್ತಿದ್ದೀವಿ. ಮೂರನೆಯ ಆರೋಪ–'ಭಾಳ ದುಡ್ಡು ಹೊಡೀತಾರ' ಇದಕ್ಕೆ ಮಂತ್ರಿಯು ಕೊಡುವ ಉತ್ತರ

"ದುಡ್ಡಿಲ್ದೆ ಮತ ಕೊಡೋ
ದಡ್ಡರಾರೂ ಉಳ್ದಿಲ್ರಿ ಈಗ!
ದುಡ್ಡಿಲ್ದೆ ಹ್ಯಾಗ ಆರಿಸಿ ಬರೋದ್ರಿ?
ನೀವೇ ಹೇಳ್ರಿ!"

(ಸಿದ್ದಯ್ಯ ಪುರಾಣಿಕ, ೧೯೮೨, ಪುಟ–೩೩)

–ಎಂದು ಜನರನ್ನೇ ಪ್ರಶ್ನಿಸಿದ್ದಾನೆ ವಿನಾ ಕಾರಣ ನಮ್ಮನ್ನು ಬೈಯೋದನ್ನು ಬಿಟ್ಟು ಈ ಸತ್ಯ ತಿಳಿದು ನಡೆಯಿರೆಂದಿರುವನು.

'ಬೆಲೆಪಟ್ಟಿ'–ಕವನದಲ್ಲಿ ದೇಶದಲ್ಲಿನ ಭ್ರಷ್ಟಾಚಾರ ಲಂಚಗುಳಿತನವನ್ನು ವಿಡಂಬಿಸಿದ್ದಾರೆ. ಸರಕಾರ ಬೆಲೆ ಪಟ್ಟಿ ಹಾಕದೆ ವ್ಯಾಪಾರ ಮಾಡಬಾರದೆಂದು ವ್ಯಾಪಾಸ್ಥರಿಗೆ ಆಜ್ಞೆ ಹೊರಡಿಸಿದೆ. ಇದೂ ಕೂಡ ಗ್ರಾಹಕರ ಕಣ್ಣೊರೆಸುವ ಕುತಂತ್ರ ಆದರೆ ಬೆಲೆಪಟ್ಟಿ ಹಾಕಿಯೂ ತಮಗೆ ಬೇಕಾದ ಬೆಲೆಗೆ ಮಾರಿ ಕೊಳ್ಳಬಹುದೆಂದು ವ್ಯಾಪಾರಸ್ಥರಿಗೆ ರಹಸ್ಯವಾಗಿ ತಿಳಿಸಲಾಗಿರುತ್ತದೆ. ಆದರೆ ಭ್ರಷ್ಟಾಚಾರ–ವೆಂಬ ವ್ಯಾಪಾರ ಹೀಗಿಲ್ಲ. ಭ್ರಷ್ಟಾಚಾರಿ, ಲಂಚಗುಳಿಯು ತಾನು ಇದುವರೆಗೆ ಕದ್ದು–ಮುಚ್ಚಿ ಮಾಡುತ್ತಿದ್ದ ಕಾರ್ಯವನ್ನು ಇನ್ನು ಮುದ್ದಾಮ ಬಹಿರಂಗವಾಗಿ ಇದು ತನ್ನ ಪಾಲಿನ ಕರ್ತವ್ಯವೆಂದು ಮಾಡುವದಾಗಿಯೂ ಮತ್ತು ಅದರ ಅಗತ್ಯವನ್ನೂ, ತಮ್ಮಂಥವರು ಇದನ್ನು ಮಾಡದಿದ್ದರೆ–

"ಪಾಪ ರಾಜಕಾರಣಿಗಳಿಗೆ ಚುನಾವಣಾ ನಿಧಿಯಿಲ್ಲ!
ಚುನಾವಣೆಗಳಿಲ್ಲದಿದ್ದರೆ ಪ್ರಜಾಪ್ರಭುತ್ವವಿಲ್ಲ
ಪ್ರಜಾಪ್ರಭುತ್ವ ವಿಲ್ಲದಿದ್ದರೆ ಸ್ವ– ರಾಜ್ಯವಿಲ್ಲ
ಸ್ವರಾಜ್ಯವಿಲ್ಲದಿದ್ದರೆ ನಮಗೆ ಸ್ವ–ರಾಜ್ಯವಿಲ್ಲ!"

(ಸಿದ್ದಯ್ಯ ಪುರಾಣಿಕ, ೧೯೮೨, ಪುಟ–೪೫)

–ಎಂದು ಮಾರ್ಮಿಕವಾಗಿ ಹೇಳಿರುವನು. ತನ್ನ ಬೆಲೆ ಪಟ್ಟಿಯನ್ನು ಬಹಿರಂಗಪಡಿಸಿರುವನು. ಪಕ್ಷಾಂತರಕ್ಕೆ ಆರು ಅಂಕಿ, ಪಕ್ಷದಲ್ಲಿ ಕೈಕೊಡಲು ಐದಂಕಿ, ವರ್ಗಮಾಡಿಸಲು ನಾಲ್ಕಂಕಿ, ಸುಳ್ಳು ಸರ್ಟಿಫಿಕೇಟಿಗೆ ಮೂರಂಕಿ ಹೀಗೆ ತನ್ನ ಬೆಲೆ ತಿಳಿಸುವನು, (ಈ ಹಿಂದೆ ಹೇಳಿದ) ವ್ಯಾಪಾರಸ್ಥರಂತೆ ಬೆಲೆ ಪಟ್ಟಿ ಹಾಕುವದೊಂದು ತೆಗೆದುಕೊಳ್ಳುವದೊಂದು ಇಲ್ಲ. ಆ ರೀತಿ ಅನ್ಯಾಯ ತನಗೆ ಬೇಡ. ತನ್ನದು ನ್ಯಾಯ ಬೆಲೆಯ ಅಂಗಡಿ–ಎಂದು ಇಂದು ದೇಶದಲ್ಲೆಲ್ಲಾ ಭ್ರಷ್ಟಾಚಾರ ಅಧಿಕೃತವಾಗಿಯೇ ಎಷ್ಟೊಂದು ಪರಾಕಾಷ್ಠೆಗೆ ಮುಟ್ಟಿದೆ ಎಂಬುದನ್ನು ವಿಡಂಬಿಸಿದ್ದಾರೆ.

'ನಾಯಿಗಳು'–ಕವನದಲ್ಲಿ ಇಂದಿನ ದೇಶದ ಭ್ರಷ್ಟ ಲಂಚಗುಳಿ ನಾಯಕರುಗಳನ್ನು 'ನಾಯಿಗಳೆಂದು' ವ್ಯಂಗ್ಯಮಾಡಿದ್ದಾರೆ. ನಾಯಕರ ವಿಧಗಳನ್ನು ವರ್ಗಗಳನ್ನು ಹಲವಾರು ನಾಯಿ ಜಾತಿಗಳೆಂದು ವರ್ಗೀಕರಿಸಿರುವನು. ಈ ನಾಯಿಗಳು–

"ದೇಶ–ದೇಹಕ್ಕೆ ಬಾಯಿಕ್ಕ ಬೇಕೆ?
ದೇಹ ಹೆಣವಾಗದೆಯೆ ಅದ ನೆಕ್ಕಬೇಕೆ?"
(ಸಿದ್ದಯ್ಯ ಪುರಾಣಿಕ, ೧೯೮೨, ಪುಟ–೪೯)

–ಎಂದು ಅವುಗಳ ವಿಶ್ವಾಸ ದ್ರೋಹದ ಸ್ವಭಾವ, ಕಾರ್ಯವನ್ನು ಪ್ರಶ್ನಿಸಿರುವರು. ಇದು ಈ ದೇಶಕ್ಕೆ ಹೊಸತೆನಲ್ಲ. ಈ ನಾಯಿಗಳನ್ನು ತಳ್ಳಿ ದೇಶವನ್ನು ರಕ್ಷಿಸುವರೇ ಇಲ್ಲವಲ್ಲವೆಂದು ಕವಿಯ ಕಳವಳ. ಕವಿಯೇ ನಾಯಿಯನ್ನು ಬಡಿಯಲು ಒಂದು ಬಣ್ಣದ ಕೋಲು ಕೊಳ್ಳುತ್ತಾನೆ. ಬಡಿಯಲೋ ಬೇಡೋ ಎಂಬ ಧರ್ಮ ಸಂಕಟದಲ್ಲಿ ಸಿಲುಕಿಕೊಂಡು–

"ಬಡಿದರೆ ಬಣ್ಣದ ಕೋಲು ಮುರಿವ ಭಯ
ಬಡಿಯದಿರೆ ದೇಶವೇ ಹೆಣವಾಗುವ ಭಯ
ಆಯ್ದುಕೋ–ಬಣ್ಣದ ಕೋಲು ಬೇಕೋ
ದೇಶ ಬೇಕೋ?"
(ಸಿದ್ದಯ್ಯ ಪುರಾಣಿಕ, ೧೯೮೨, ಪುಟ–೪೯)

–ಎಂದು ಮನೋ ಇಂಗಿತವನ್ನು ವ್ಯಕ್ತ ಪಡಿಸಿರುವರು. ಹೀಗೆ ಪುರಾಣಿಕರು ಸಮಕಾಲೀನ ರಾಜಕೀಯವನ್ನು ತಮ್ಮ ಕವನಗಳಲ್ಲಿ ವಿಡಂಬನೆ ಮಾಡಿರುವರು.

ಸಿದ್ಧಯ್ಯ ಪುರಾಣಿಕರು ಆಧುನಿಕ ವಚನಕಾರರಲ್ಲಿ ಪ್ರಮುಖರು. ದೇಶವು ಸ್ವತಂತ್ರಗೊಂಡನಂತರ ರಾಜಕೀಯ ವ್ಯವಸ್ಥೆಯಲ್ಲಿ ಮೊದಲಿದ್ದ ಆದರ್ಶ, ನೈತಿಕ ಮೌಲ್ಯಗಳು ಯಾವ ರೀತಿ ಕುಸಿದಿವೆ. ಇಂದು ಬರಿ ಅಧಿಕಾರ ಲಾಲಸೆ, ಭ್ರಷ್ಟಾಚಾರ, ಸ್ವಜನ ಪಕ್ಷಪಾತ ತುಂಬಿ ತುಳುಕುತ್ತಿವೆ. ಇವುಗಳೆಲ್ಲವನ್ನು ಹಲವಾರು ವಚನಗಳಲ್ಲಿ ವಿಡಂಬಿಸಿದ್ದಾರೆ.

"ಹುಸಿ ಪ್ರಚಾರ ಕಸಕ್ಕೆ ಕಸವರದ ಸ್ಥಾನ ಕೊಟ್ಟಿದೆ
ಜಾತಿಯತೆ ರಾಷ್ಟ್ರೀಯತೆಗೆ ನಿಧಿ ಸಿದ್ಧಗೊಳಿಸುತ್ತಿದೆ
ಸ್ವರವೃತ್ತಿ ಸ್ವತಂತ್ರಕ್ಕೆ ಸಮಾಧಿ ಕಟ್ಟುತ್ತಿದೆ"
(ಮರುಳಯ್ಯ ಸಾ.ಶಿ.(ಸಂ) ೧೯೮೧, ಪುಟ-೪೦೩)

ಇಂದು ಸ್ವೇಚ್ಛಾಚಾರ ಪ್ರವೃತ್ತಿ ಸ್ವಾಂತ್ರ್ಯದ ತತ್ತ್ವ ಸಿದ್ಧಾಂತಗಳ ಅರ್ಥಗಳನ್ನು ಕಳೆದಿದೆ. ಜಾತೀಯತೆಯೇ ರಾಷ್ಟ್ರದ ರಾಜಕೀಯಕ್ಕೆ ಬಂಡವಾಳವಾಗಿದೆ. ಸೊಗಲಾಡಿಗರಿಗೆ, ಡಾಂಭಿಕರಿಗೆ ಹೆಚ್ಚು ಪ್ರಚಾರ ಸಿಗುತ್ತಿದೆ. ಗಾಂಧೀಜಿಯವರು ಹೇಳಿದ ಏಳು ದೋಷಗಳು ತತ್ವರಹಿತ ರಾಜಕಾರಣ, ಶ್ರಮರಹಿತ ಸಂಪತ್ತು ನೀತಿವಿಹೀನ ವ್ಯಾಪಾರ, ಶೀಲಶೂನ್ಯ ಶಿಕ್ಷಣ, ಮನಸಾಕ್ಷಿ ಇಲ್ಲದ ಭೋಗ, ಮನುಷ್ಯತ್ವ ರಹಿತ ವಿಜ್ಞಾನ, ತ್ಯಾಗವಿಹೀನ ಪೂಜನ- ಈ ಸಪ್ತದೋಷಗಳು ದೇಶಕ್ಕೆ ಆತಂಕಕಾರಿಯಾಗಿವೆ. ಇವುಗಳನ್ನು ತೊಡೆದು ಹಾಕಲು ಗಾಂಧೀಜಿಯವರು ಹೇಳಿದ್ದರೂ ಅವು ಇಂದು ದೇಶದಲ್ಲಿ ನಡೆಯುತ್ತಿವೆ. ಇಂದು ಈ ವ್ಯವಸ್ಥೆಯಲ್ಲಿ ಮಾನವರು ಮಾತ್ರ ಅಗ್ಗವಾಗಿದ್ದಾನೆ. ಬರಿ- "ಓಟುಗಳ ಬೆಲೆ ಬೆಳೆಯುತ್ತಿದೆ, ನೋಟುಗಳ ಬೆಲೆ ಇಳಿಯುತ್ತದೆಯಯ್ಯ" ಎಂದು ವ್ಯಥೆ ಪಟ್ಟಿರುವರು. ಅಧಿಕಾರಿಗಳು, ರಾಜಕಾರಣಿಗಳು ಸರಕಾರಗಳು ಕರ್ತವ್ಯ ವಿಮುಖರಾದುದಕ್ಕೆ ವಿಡಂಬಿಸಿದ್ದಾರೆ.

"ಅಧಿಕಾರ ಬೇಕು ಕರ್ತವ್ಯ ನಿರ್ವಹಣೆ ಬೇಡ
ಜನರ ಮತಗಳು ಬೇಕು ಜನಹಿತ ಸಾಧನೆ ಬೇಡ
ಶಾಸನದ ರಕ್ಷೆ ಬೇಕು ಶಾಸನದ ರಕ್ಷಣೆ ಬೇಡ"
(ಬುಳ್ಳಾ.ಎನ್.ಬಿ, ೧೯೯೯, ಪುಟ-೪೩೯)

ತಾವು ಒಬ್ಬ ಅಧಿಕಾರಿಯಾಗಿಯೂ ಸಹ ಈ ರೀತಿ ಸಮಕಾಲೀನ ದೇಶದ ಸರಕಾರದ ಲೋಪ-ದೋಷಗಳನ್ನು ನಿಷ್ಠುರವಾಗಿ ಎತ್ತಿ ತೋರಿಸಿ ಟೀಕಿಸಿರುವರು, ಇಂದು ಪ್ರಜಾಪ್ರಭುತ್ವದಲ್ಲಿ ಅಧಿಕಾರ ವಿಕೇಂದ್ರಿಕರಣ ನಡೆಯಿತು. ಇದು ಯಾವ ರೀತಿ ಯಾವುದಕ್ಕೆ ಎಷ್ಟಾಯಿತು. ಇದರಿಂದ ಏನಾಗುತ್ತಿದೆ ಎಂದರೆ, ಶಾಸನ ರಚಿಸುವ, ಬದಲಿಸುವ, ಆಯ್ಕೆಗೆ ನಿಲ್ಲುವ, ಮತ ನೀಡುವ, ಅಭಿಪ್ರಾಯ ತಿಳಿಸುವ, ಟೀಕಿಸುವ, ಸಂಘಟಿಸುವ, ಸಂಘರ್ಷಿಸುವ-ಮುಂತಾದವುಗಳಲ್ಲಿ ನಡೆಯಿತೆಂದು ಟೀಕಿಸಿದ್ದಾರೆ. ಸವದತ್ತಿ ಎಲ್ಲಮ್ಮನಿಗೆ ಜೋಗತಿಯರಾಗುವ ಅನಿಷ್ಟ-ಮೂಢ ಸಂಪ್ರದಾಯವನ್ನು ನಿಲ್ಲಿಸಲು ಕ್ರಮ ತೆಗೆದುಕೊಳ್ಳಬೇಕೆಂದ ರಾಜ್ಯ ಸರಕಾರಕ್ಕೆ

"ದಿಲ್ಲಿಯ ಎಲ್ಲಮ್ಮನಿಗೆ
ಜೋಗತಿಯರಾಗುವುದ
ಮೊದಲು ನಿಲ್ಲಿಸಲಯ್ಯ
ಸ್ವತಂತ್ರಧೀರ ಸಿದ್ದೇಶ್ವರ"
(ಬುಳ್ಳಾ.ಎನ್.ಬಿ, ೧೯೯೯, ಪುಟ-೧೧೪)

–ಸಮಾಜದಲ್ಲಿಯ ಈ ಅನಿಷ್ಟ–ಮೂಢ ಸಂಪ್ರದಾಯವನ್ನು ತೊಡೆಯುವುದು ಒಳ್ಳೆಯದೇ. ಆದರೆ ಅದಕ್ಕಿಂತಲೂ ರಾಜ್ಯದ ಅಂದಿನ ಕಾಂಗ್ರೆಸ್ ಸರಕಾರ ಎಲ್ಲದಕ್ಕೂ ಕೇಂದ್ರಸರಕಾರದ, ತಮ್ಮ ಪಕ್ಷದ ಹೈಕಮಾಂಡ ಆಗಿನ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರಲ್ಲಿಗೆ ಹೋಗುವದನ್ನು ಖಂಡಿಸಿರುವರು. ಕೇಂದ್ರ ಮತ್ತು ರಾಜ್ಯಗಳ ಮಧ್ಯ ತೆರಿಗೆಯ ಹಣಕಾಸಿನ ಹಂಚಿಕೆಯು ಸಮರ್ಪಕವಾಗಿಲ್ಲದಿರುವದರಿಂದ ಅಂದಿನ ಶ್ರೀಮತಿ ಇಂದಿರಾ ಗಾಂಧಿಯವರನ್ನು–

"ತಿರಿದು ತಂದರಲ್ಲಿ
ಅರ್ಧ ದಿಲ್ಲಿಗೆ
ಅರ್ಧ ಉಳಿದ ದೇಶಕ್ಕೆ
ಹಂಚುತ್ತಲಿಹಳು ಅಭಿನವ ಕುಂತಿ"

(ಬುಳ್ಳಾ.ಎನ್.ಬಿ, ೧೯೯೯, ಪುಟ–೪೩೯)

–ಎಂದು ಟೀಕಿಸಿರುವರು. ಸ್ವಾತಂತ್ರ್ಯಗೊಂಡ ಹಲವಾರು ವರ್ಷಗಳಾದರೂ ದೇಶವನ್ನು ಸ್ವಾವಲಂಬಿಯನ್ನಾಗಿ ಮಾಡದೇ ಇನ್ನು ಪರರಾಷ್ಟ್ರಕ್ಕೆ ಕೈ ಚಾಚುತ್ತಿರುವದನ್ನು ಕಂಡು ರಾಜಕೀಯ ಪಕ್ಷಗಳಿಗೆ 'ಭಿಕ್ಷಾ ಪಾತ್ರೆ'ಯನ್ನು ತಮ್ಮ ಪಕ್ಷದ ಚಿಹ್ನೆಯಾಗಿ ಮಾಡಿಕೊಳ್ಳಿರೆಂದು ವ್ಯಂಗ್ಯವಾಡಿದ್ದಾರೆ.

ಜಿ.ಎಸ್. ಶಿವರುದ್ರಪ್ಪನವರು 'ಜನಗಣಮನ ಅಧಿನಾಯಕ', 'ಈ ದೇಶದಲ್ಲಿ' ಮತ್ತು 'ಬೇಕಾಗಿದೆ'– ಕವನಗಳಲ್ಲಿ ಇಂದಿನ ರಾಜಕೀಯ ವಿಡಂಬನೆ ಇದೆ. ನಮ್ಮ ಜನ ಪ್ರತಿನಿಧಿಗಳ ಕಾರ್ಯವೈಖರಿ, ಭ್ರಷ್ಟತೆ, ಸ್ವಜನ ಪಕ್ಷಪಾತ, ಸಮಾಜ ಘಾತಕ ಕೆಲಸಗಳನ್ನು ಕುರಿತು, ವಿಡಂಬನೆ ಮಾಡಿದ್ದಾನೆ. ಇಂದಿನ ಪೋಲಿ–ಪಟಿಂಗ ವಿದ್ಯಾರ್ಥಿಯೇ ನಾಳೆ ನಮ್ಮ ನಾಯಕನಾಗುತ್ತಾನೆ. ಈ ನಮ್ಮ ಜನಗಣಮನ ಅಧಿನಾಯಕ, ಈತನ ಕೃತ್ಯಗಳು ಬೀದಿದೀಪ, ಕಿಟಕಿಗಾಜು ಒಡೆಯುವದು, ಬಸ್ಸಿಗೆ ಬೆಂಕಿ ಹಚ್ಚುವದು, ಊರಿಗೆ ಬೆಂಕಿ ಹಚ್ಚುವ ನಾಟಕವಾಡುವದು.

ಭಕ್ತ ಪ್ರಹ್ಲಾದನು ನಂಬಿ ಕರೆದಾಗ ಮಾತ್ರ ನಾರಾಯಣನು ಕಂಬದಲ್ಲಿ ಪ್ರತ್ಯಕ್ಷನಾದನು. ಅವನಂತೆ ಇವನೂ ಸರ್ವವ್ಯಾಪಿ ಆದರೆ ಈತ ನಂಬಿ ಕರೆಯದಿದ್ದರೂ ಕಂಬ–ಕಂಬದಲಿ ಪ್ರತ್ಯಕ್ಷನಾಗುವವನು. ಮೇಲ್–ಕೆಳ–ಒಳ ಮನೆಗಳಲ್ಲಿ ಇದ್ದಾನೆ. ದೇಶದ ನಾನಾಭಾಗಗಳಲ್ಲಿ ಇಂಥ ನಾಯಕರೇ ತುಂಬಿದ್ದಾರೆನ್ನಲು ರಾಷ್ಟ್ರ ಗೀತೆಯಲ್ಲಿಯ ಸಾಲುಗಳನ್ನೇ ವಿಡಂಬನೆಗಾಗಿ ಉದಾಹರಿಸಿರುವರು–

"ಪಂಜಾಬ ಸಿಂಧು ಗುಜರಾತ ಮರಾಠಾ
ದ್ರಾವಿಡ ಉತ್ಕಲ ವಂಗ
ಎಲ್ಲೆಲ್ಲೂ ಇವನೇ"

(ಶಿವರುದ್ರಪ್ಪ. ಜಿ.ಎಸ್, ೧೯೯೧, ಪುಟ–೪೦೪)

ಸದಾ ಎಚ್ಚರವಾಗಿರುವ ಈ ಅಧಿನಾಯಕನಿಗೆ ಜಯಕಾರ ಹಾಕದಿದ್ದರೆ, ತಾಯಾರು ನೀಯಾರೆಂಬುದನ್ನು ಒಂದು ಕೈ ತೋರಿಸುತ್ತಾನೆ.

'ಈ ದೇಶದಲ್ಲಿ'-ಎನ್ನುವ ಕವನದಲ್ಲಿ ದೇಶದ ನಾಯಕರ ಸ್ವಜನ ಪಕ್ಷಪಾತ, ಅಧಿಕಾರ ದಾಹವನ್ನು ಬಿಂಬಿಸಿದ್ದಾರೆ. ರಾಜಕೀಯ ನಾಯಕರು ಈ ದೇಶದಲ್ಲಿ ಅಮೂಲಾಗ್ರವಾಗಿ ಎಲ್ಲವೂ ಬದಲಾಗಬೇಕೆಂದು ಬಹಿರಂಗವಾಗಿ ಭಾಷಣ ಮಾಡುವರು, ಜಾತಿ-ಮತ-ಪಂಥಗಳನ್ನು ಹೋಗಲಾಡಿಸಬೇಕು, ವ್ಯಕ್ತಿಪೂಜೆ, ವಂಶಪ್ರತಿಷ್ಠೆ ಕಳೆಯಬೇಕು. ಎಲ್ಲರೂ ಬರಿ ಮಾತಾಡುವದನ್ನು ಬಿಟ್ಟು ಕೃತಿಗೆ ಮಹತ್ವ ಕೊಡಬೇಕೆಂದು ಬಹಿರಂಗದಲ್ಲಿ ಹೇಳುವರು, ಆದರೆ ಹೇಳಿದಂತೆ ಅವರೆ ಇರುವದಿಲ್ಲ, ಅವರ ನಿಜ ಧೋರಣೆಯೇ ಬೇರೆ ಇರುತ್ತದೆ. ಅದಕ್ಕೆ ವ್ಯತಿರಿಕ್ತವಾಗಿ ಎಲ್ಲ ಬದಲಾದರೂ ತನ್ನ ಕುರ್ಚಿ ಉಳಿಯಬೇಕು, ತಮ್ಮ ಜಾತಿ ಜನಾಂಗದವರಿಗೊಂದಿಷ್ಟು ಸ್ಥಾನ ಉಳಿಯಬೇಕು, ತಮ್ಮ ಮನೆಯ ವಂಶ ಪ್ರತಿಷ್ಠೆ ಉಳಿಯಬೇಕು, ತಾ ಹೇಳುವದನ್ನೇ ಎಲ್ಲರೂ ಸುಮ್ಮನೆ ಪಾಲಿಸಬೇಕು.

'ಬೇಕಾಗಿದೆ' ಕವನದಲ್ಲಿಯೂ ಇಂದಿನ ರಾಜಕೀಯ ನಾಯಕರನ್ನು ಕಟು ವ್ಯಂಗ್ಯ ಮಾಡಿರುವರು. ಅವರನ್ನು ಲಂಗು-ಲಗಾಮಿಗೆ ಇನ್ನು ಪಳಗದ ಕುದುರೆಗೆ, ಬಣ್ಣ ಬದಲಾಯಿಸುವ ಗೋಸುಂಬೆಗಳಿಗೆ, ಬೇಕಾ ಬಿಟ್ಟಿ ತಿಂದು ಕೊಬ್ಬಿರುವ ಇಲಿ-ಹೆಗ್ಗಣಗಳಿಗೆ, ಸರಿಯಾಗಿ ಬೇರು ಬಿಡದ, ನಿಷ್ಪ್ರಯೋಜಕ, ಹೂ-ಹಣ್ಣು-ಕಾಯಿ ಬಿಡದ ತೋಟದ ಗಿಡಕ್ಕೆ ಖೋಟಾ ನಾಣ್ಯ ತಯಾರಿಸಿ ಮೇಧಾವಿಯಂತೆ ಇರುವವರಿಗೆ ಹೋಲಿಸಿದ್ದಾರೆ.

ಇಂಥವರನ್ನು ತಿದ್ದಲು ಇಲ್ಲವೆ ತೊಲಗಿಸಲು ಕವಿಗೆ ಒಬ್ಬ ಅಶ್ವರೋಹಿ, ಬಣ್ಣ ಬದಲಾಯಿಸಲು ಬಾರದಂತಹ ಇಂಜೆಕ್ಷನ್ ಕೊಡುವ ವೈದ್ಯ, ಇಲಿ ಹೆಗ್ಗಣ ಹಿಡಿಯಲು ಬೋನು ಮಾಡುವ ಕುಶಲ ಶಾಲಿ, ಕಸಿ ಮಾಡುವ ತೋಟಿಗ, ಗೂಢಚಾರ ಪ್ರವೃತಿ ಬೇಕಾಗಿದೆ. ಈ ಹುದ್ದೆಗೆ ಅರ್ಜಿಹಾಕಲು ಕೇಳಿಕೊಂಡಿದ್ದಾನೆ. ಇದಕ್ಕೆ ಅರ್ಹತೆ 'ನಿಯತ್ತು' ಮತ್ತು 'ತಾಕತ್ತು'-ಹೀಗೆ ಬಹಳ ಸೊಗಸಾಗಿ ಇಂದಿನ ವ್ಯವಸ್ಥೆಯ ಲೋಪ ದೋಷಗಳನ್ನು ಇದರಲ್ಲಿ ವ್ಯಂಗ್ಯ ಮಾಡಿರುವರು.

ಬಿ.ಎ. ಸನದಿಯವರ (ಸೀಮಾಂತರ ಸಂಕಲನವದ) 'ಘೇರಾವೊ' ಕವನದಲ್ಲಿ ಇಂದು ದೇಶದ ಜನತೆ ವಿನಾಃಕಾರಣ ಮುಷ್ಕರ ಹೂಡುವುದನ್ನು ಖಂಡಿಸಿರುವರು. ಹಿಂದೆ ಗಾಂಧೀಜಿಯವರು ಬ್ರಿಟೀಷರ ವಿರುದ್ಧ ಸತ್ಯಾಗ್ರಹ ಹೂಡಿದ್ದರು. ಆದರೆ ಇಂದಿನ ಜನತೆ ವಿನಾಃಕಾರಣ ಕ್ಷುಲ್ಲಕ ಕಾರಣಕ್ಕಾಗಿ ಎಲ್ಲದಕ್ಕೂ ಮುಷ್ಕರ ಹೂಡುತ್ತಾರೆ. ಯಾವ ಹೊತ್ತಿನಲ್ಲಿ, ಏತಕ್ಕಾಗಿ ಮಾಡಬೇಕೆಂಬುದು, ಮಾಡುತ್ತಿದ್ದೇವೆಂಬುದು ಇವರಿಗೆ ಗೊತ್ತಿರುವದಿಲ್ಲ, ಇವರು ಮುಷ್ಕರ ಹೂಡಿ ದೇಶದ ಜನತೆಗೆ ನೆಮ್ಮದಿ ಹಾಳುಮಾಡುವ ಮೊದಲೇ ಮತಿವಂತರು, ಬುದ್ಧಿವಂತರು ಕೂಡಿ ಇವರ ಸ್ವೇಚ್ಛಾಚಾರಕ್ಕೆ ಘೇರಾವು ಹಾಕಿ ನಿಲ್ಲಿಸಬೇಕೆಂದು ಕವಿಯ ಕೋರಿಕೆಯಾಗಿದೆ.

ಹೀಗೆ ನವೋದಯ ಕವಿಗಳು ದಂತದ ಮನೆಯಲ್ಲಿ ಕುಳಿತು ಪೊಳ್ಳು ಆದರ್ಶ, ಹುಸಿ ಭರವಸೆಗಳನ್ನಿಟ್ಟುಕೊಂಡು ಬರಿ ನಾಡು-ನುಡಿ ದೇಶವನ್ನು ವೈಭವಿಕರೀಸುತ್ತಾ ಲೋಪ-ದೋಷಗಳಿಗೆ ಕುರುಡಾಗಲಿಲ್ಲ, ಅವುಗಳನ್ನು ಎತ್ತಿ ತೋರಿಸಿ ಪ್ರತಿಭಟನೆಯ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದಾರೆ. ರಾಷ್ಟ್ರದ ಹಿತಾಸಕ್ತಿಯನ್ನಿಟ್ಟುಕೊಂಡು ದೇಶದ ವ್ಯವಸ್ಥೆಯಲ್ಲಿನ, ರಾಷ್ಟ್ರದ ಆಗು ಹೋಗುಗಳಲ್ಲಿನ ಅನಾರೋಗ್ಯಕರವಾದ ಲೋಪ ದೋಷಗಳನ್ನು ಕಂಡು ಅವುಗಳನ್ನು ತಮ್ಮ ಕಾವ್ಯಗಳ ಮೂಲಕ ವಿಡಂಬನೆಯ ಚುಚ್ಚುಮದ್ದಿನಿಂದ ಆರೋಗ್ಯಕರ ವಾತಾವರಣ ನಿರ್ಮಾಣವಾಗಲು ಶ್ರಮಿಸಿದ್ದಾರೆ.

**೩.೮. ಮಹಿಳಾ ಅಭಿವ್ಯಕ್ತಿ:**

ದೇಶಪ್ರೇಮದ, ರಾಷ್ಟ್ರಪ್ರಜ್ಞೆಯ ಜಾಗೃತಿಯಲ್ಲಿ ಅನೇಕ ಕವಯಿತ್ರಿಯರು ಸ್ಪಂದಿಸಿರುವ ಕುರಿತು ಕನ್ನಡ ಮೊದಲ ಕವಯಿತ್ರಿ ಅಕ್ಕಮಹಾದೇವಿಯಿಂದ ಪ್ರತಿಭಟನಾ ಅಭಿವ್ಯಕ್ತಿಯನ್ನು ಮೈಗೂಡಿಸಿಕೊಂಡ ಅನೇಕ ಮಹಿಳೆಯರು ಈ ಹಿನ್ನೆಲೆಯಲ್ಲಿ ಕಾವ್ಯ ರಚನೆ ಮಾಡಿಕೊಳ್ಳಲಾಯಿತು. ಅವುಗಳಲ್ಲಿ ಪ್ರಮುಖವಾಗಿ ಕೆಲವು ಕಾವ್ಯಗಳನ್ನು ಮಾತ್ರ ಗಮನಿಸಬಹುದು.

ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಲು ಮಹಿಳೆಯರೂ ಹಿಂಜರಿಯಲಿಲ್ಲ. ದೇಶಾದ್ಯಂತ ಎಲ್ಲ ರಾಜ್ಯಗಳ ಮಹಿಳೆಯರ ಅನೇಕರು ಅಂದಿನ ರಾಜಕೀಯ ನಾಯಕರ ಹಾಗೂ ಗಾಂಧೀಜಿಯವರ ಕರೆಗೆ ಓಗೊಟ್ಟು ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿದರು. ಸೆರೆಮನೆಗೆ ಸೇರಿದರು. ಅದರಲ್ಲಿ ವಿದೇಶೀ ಮಹಿಳೆಯರೂ ಇದ್ದರು. ಅನಿಬೆಸೆಂಟ್, ಮೆಡಿಲಿನ್ ಸ್ಲೇಡ್ (ಮೀರಾ ಬೆಹನ್), ನೆಲ್ಲಿ ಸೇನ್‌ಗುಪ್ತ ಮುಂತಾದವರು ತಮ್ಮ ದೇಶವನ್ನು ಬಿಟ್ಟುಬಂದು ಭಾರತ ಸ್ವಾತಂತ್ರ್ಯಕ್ಕಾಗಿ ತಮ್ಮ ಜೀವನವನ್ನೇ ಮುಡುಪಿಟ್ಟವರು.

ಮಹಿಳಾ ಸಾಹಿತಿಗಳು ಸಹ ದೇಶಪ್ರೇಮದಿಂದ ಪ್ರೇರಿತರಾಗಿ ಕವನ, ಕಾವ್ಯಗಳನ್ನು ಬರೆದಿದ್ದಾರೆ. ಇತಿಹಾಸತಜ್ಞರೂ, ಖ್ಯಾತ ಪತ್ರಕರ್ತರೂ, ಸಂಶೋಧಕರೂ ಆಗಿದ್ದ ಶ್ರೀ ತಿರುಮಲೆ ತಾತಾಚಾರ್ಯರ ಪತ್ನಿ ಶ್ರೀಮತಿ ತಿರುಮಲೆ ರಾಜಮ್ಮನವರು 'ಭಾರತಿ' ಎಂಬ ಕಾವ್ಯನಾಮದಿಂದ ಹಲವಾರು ಕೃತಿಗಳನ್ನು ಬರೆದು ಪ್ರಸಿದ್ಧರಾಗಿದ್ದರು. ಮದರಾಸಿನಲ್ಲಿ ಮಹಾತ್ಮಾಜಿಯವರ ದರ್ಶನ ಮಾಡಿದ ರಾಜಮ್ಮನಲ್ಲಿ ರಾಷ್ಟ್ರಾಭಿಮಾನ ಉಕ್ಕಿ ಹರಿಯಿತು. ಅಂದಿನ ಸಭೆಯಲ್ಲಿ ರಾಜಮ್ಮನವರು 'ದೇಶ ಸೇವಾನಿರತರಾಗಿರ್ರೈ' ಎಂಬ ಗೀತೆಯನ್ನು ರಚಿಸಿ ಹಾಡಿದರು. ಅಂದಿನಿಂದ ರಾಜಮ್ಮನವರ ತನುಮನಧನಗಳಲ್ಲಿ ದೇಶಸೇವೆಯ ಮಂತ್ರ ಮಿಡಿಯಲಾರಂಬಿಸಿತು. ಅದೇ ದಿನ ನಾಲ್ಕಾಣೆ ಕೊಟ್ಟು ತಾವೂ ಕಾಂಗ್ರೆಸ್‌ನ ಸದಸ್ಯೆಯಾದರು.

"ದೇಶಭಕ್ತಿಯೇ ತನ್ನ ತಂಗಿಯನ್ನು ಕವಯಿತ್ರಿಯನ್ನಾಗಿ ಮಾಡಿತು. ರಾಷ್ಟ್ರೀಯ ಚಳುವಳಿಯೇ ಕಾವ್ಯಕ್ಕೆ ಹುರುಪನ್ನಿತ್ತಿತು. ಭಾರತದ ವೈಭವವೇ ಕಾವ್ಯದ ವಸ್ತುವಾಯಿತು" ಎಂದರು ಆಕೆಯ ಅಣ್ಣ ಶಾಮಣ್ಣನವರು. ಅನೇಕ ದೇಶಭಕ್ತರ ಪರಿಚಯ ಬೆಳೆದು, ಅವರ ಭಾಷಣಗಳನ್ನು ಕೇಳುತ್ತಾ ಗಾಂಧೀ ಸಾಹಿತ್ಯ ಭಾಗಗಳನ್ನು ಓದುತ್ತಾ ರಾಜಮ್ಮನವರ ಜೀವನದೃಷ್ಟಿ, ಕವಿತಾ ರಚನೆ ರಾಷ್ಟ್ರಕ್ಕೆ ಮೀಸಲಾಯಿತು.

ತಿರುಮಲೆ ರಾಜಮ್ಮನವರು 'ಭಾರತಿ' ಎಂಬ ಕಾವ್ಯನಾಮದಲ್ಲಿ ಬರೆದ ರಾಷ್ಟ್ರಶಕ್ತಿ ಎಂಬ ಕವನ ಸಂಕಲನ ರಾಷ್ಟ್ರದಲ್ಲಿ ಸಮರಸ್ಫೂರ್ತಿಯನ್ನಿತ್ತಿತು. ಇವುಗಳಲ್ಲಿ ಕೆಲವು ಉಪ್ಪಿನ ಸತ್ಯಾಗ್ರಹದ ಸಮಯ, ಪೂಜ್ಯ ಬಾಪೂ, ಮಹದೇವ ದೇಸಾಯಿ, ಕಸ್ತೂರಬಾ, ನೆಹರೂ ಮುಂತಾದವರೆಲ್ಲ ಸೆರೆಮನೆಯಲ್ಲಿದ್ದ ಸಮಯ, ಈ ವೀರ ಸಾಹಸಿಗಳ ಅಧಿದೇವತೆ ಸೆರೆಮನೆಗಳನ್ನು ಹುಡುಕುತ್ತಾ ಅಲೆಯುತ್ತಿರುವಂತೆ–

ಸತ್ವ ಸಂಗ್ರಾಮ ರಂಗಕೆ ಬನ್ನಿ ಬನ್ನಿ
ಚಿತ್ತ ಪರಿಶೋಧಿಸಿ ಪವಿತ್ರರಾಗಲು ಬನ್ನಿ
ಸತ್ಯಾಶ್ರಮದ ಮುಕ್ತಿ ಸದನ ಮೈದಲು ಬನ್ನಿ॥

(ನಿರುಪಮಾ ಲಲಿತಾಶಾಸ್ತ್ರಿ, ೨೦೧೨, ಪುಟ–೮೦)

ಸತ್ಯಾಗ್ರಹ ಅಸಹಕಾರ ಆಂದೋಲನದಲ್ಲಿ, ದೇಶಕ್ಕಾಗಿ ಜೀವನ ಸರ್ವಸ್ವವನ್ನೂ ಅರ್ಪಿಸಿ, ಸೆರೆಮನೆಗಳಲ್ಲಿ ಬಂಧಿತರಾದ ಭಾರತವೀರರು ಅಸಂಖ್ಯಾತರು. ಸಂಗ್ರಾಮ ನಡೆಯುತ್ತಿದ್ದಾಗ ವಿದೇಶೀ ಸೈನ್ಯ ಪಡೆಗಳಿಗೆ ಸುಖಭೋಜನಕ್ಕಾಗಿ ಹಳ್ಳಿಗಾಡಿನ ಕಡೆಯಿಂದ ದನಕರುಗಳನ್ನು ತರಿಸಿ ಒದಗಿಸಲಾಗುತ್ತಿತ್ತು. ಸಾಲು ಸಾಲಾಗಿ ನೂರಾರು ಮೂಕ ಜೀವಿಗಳು ಬರುತ್ತಿದ್ದ ದೃಶ್ಯ ಸಹಿಲಾಗದ ವೇದನೆಯಿಂದ ರಾಜಮ್ಮನವರು ಬರೆದ ಕವನವಿದು:

ನಂದಿನೀ । ಸುಹೃದಯಾನಂದ ಸಂವರ್ಧಿನೀ ಜಗದಾತ್ಮ
ಬಂಧು ಜೀವನ ಸೌಖ್ಯ ಬಾಧ್ಯ ಪ್ರದಾಯಿನೀ
ಕುಂದಿತೇಕೆ ಮನ–ವಾಕ್ರಂದವಿದೇನು, ಜನನೀ ನಯನ
ಬಿಂದುಗಳ ತಡೆಯಿದಿರೆ ಈ ಧರೆಯುಳಿಯುವುದೇ?
ಅವರ ಇನ್ನೊಂದು ದೇಶಭಕ್ತಿ ಗೀತೆ:
ಜೈ ಭಾರತ ಭೂಮಿಗೆ ಮಾತೆಗೆ
ಜೈ ಪಾವನ ಮೂರುತಿಗೆ
ಸನ್ಮಂಗಳವಾಗಲಿ ಸತತಂ".

(ನಿರುಪಮಾಲಲಿತಾಶಾಸ್ತ್ರಿ, ೨೦೧೨, ಪುಟ–೮೧)

ರಾಜಮ್ಮನವರು ಸೆರೆಮನೆಗೆ ಹೋಗಲಿಲ್ಲ, ಬ್ರಿಟಿಷರಿಂದ ಛಡಿ ಏಟು ತಿನ್ನಲಿಲ್ಲ. ಆದರೆ ಭಾರತಭಾಗ್ಯ ವಿಧಾತನ ಪ್ರೀತಿಯ ಪುತ್ರಿಯಾಗಿದ್ದರು. ತಿರುಮಲೆ ರಾಜಮ್ಮನವರ ಸಂಗೀತವೆಂದರೆ

ರಾಷ್ಟ್ರದಲ್ಲೆಲ್ಲಾ ಜನಪ್ರಿಯವಾಗಿತ್ತು. ಆಂದೋಲನಕ್ಕೆ ಸಿದ್ಧಪಡಿಸುತ್ತಿತ್ತು. ಸ್ವಾತಂತ್ರಕ್ಕಾಗಿ ಹೋರಾಡಲು ಸ್ಫೂರ್ತಿಕೊಡುತ್ತಿತ್ತು. ಇದಕ್ಕಿಂತ ಬೇಕೆ ಕಾವ್ಯದ ಉಪಕಾರಕ್ಕೆ?

೧೯೨೪ ರಲ್ಲಿ ಬಾಪೂಜಿ ಬೆಂಗಳೂರಿಗೆ ಬಂದಿದ್ದಾಗ ರಾಜಮ್ಮನವರ ಬಾಯಿಂದಲೇ 'ಕೈವಲ್ಯ ಸೋಪಾನ' ಎಂಬ ರಚನೆಯನ್ನು ಹಾಡಿಸಿ ಕೇಳಿ ಮೆಚ್ಚಿದರಂತೆ.

ರಾಷ್ಟ್ರಶಕ್ತಿಯ ವಿರಾಡ್ ರೂಪಧಾರಿ ನಮೋ। ರಾಷ್ಟ್ರ ರಚನಾ ಚತುರ ವಿಶ್ವ ಸಾಮ್ರಾಜ್ಯದ ಕಿರೀಟಧಾರೀ ನಮೋ। ಹಾಡಿನ, ವೆಂಕಮ್ಮ ಎಂಬುವರು ದಾಸಸಾಹಿತ್ಯದಲ್ಲಿ ಹೆಸರಾದವರು. ಈಕೆ ಬರೆದ ಒಂದು ದೇಶಭಕ್ತಿ ಪರ ಪದ ಹೀಗಿದೆ:

ಹಿಂದೂ ಜನರಿಗೆ ತಂದೆಯೆನಿಸಿಹ । ಸುಂದರ ಸುಟಿಳಕ
ಅಂದ ಮಾನಕೆ ಇಂದು ಒಯ್ಯರೆ । ಕೊಂದಪಾಪವು ಅವರಿಗೆ
ಆರುವ ವರ್ಷದ ಘೋರಶಿಕ್ಷೆಯು । ಪಾರುಗಾಣಿಸೋ ಪ್ರಭುವರ
ಧೀರ ಗುಣ ಗಂಭೀರ ಟಿಳಕಿಗೆ । ಪೂರ್ಣವಿರಬೇಕಾಸರ ।

(ನಿರುಪಮಾ ಲಲಿತಾಶಾಸ್ತ್ರಿ, ೨೦೧೨, ಪುಟ-೮೦)

ಭಾರತ ಕೇಂದ್ರ ಸರ್ಕಾರದಲ್ಲಿ ಸಚಿವೆಯಾಗಿ ಬಹಳ ಪ್ರಭಾವ ಬೀರಿದ ಬಹುಮುಖ ಪ್ರಜ್ಞಾವಂತೆ, ಖ್ಯಾತ ಲೇಖಕಿಯೂ ಆದ ಡಾ. ಸರೋಜಿನಿ ಮಹಿಷಿ 'ಸ್ವಾತಂತ್ರ್ಯ ಕಹಳೆ' ಎಂಬ ಕವನ ಸಂಕಲನ ತಂದಿದ್ದಾರೆ. ಅವರು ಮಕ್ಕಳಿಗಾಗಿ ಬರೆದ ಒಂದು ಕವನ ಹೀಗಿದೆ:

ಗಾಂಧಿ ಬಂದರು । ತಂದರು ಅರಿವನು
ಭಾರತ ಬಿಡಿರಿ । ಬಿಳಿಯರೆ ತೊಲಗಿರಿ
ಲೋಕ ಮಾನ್ಯರು। ಬಿತ್ತಿದ ಬೀಜ
ಸ್ವರಾಜ್ಯವೆಂಬುದು । ನಮ್ಮಯ ಹಕ್ಕು
ಗಾಂಧಿ ನೆಹರು ವಲ್ಲಭ ಭಾಯಿ
ಎಲ್ಲರು ಸೇರಿ ಕೂಗಿದರೊಡನೆ ॥

(ನಿರುಪಮಾ ಲಲಿತಾಶಾಸ್ತ್ರಿ, ೨೦೧೨, ಪುಟ-೮೨)

ವಿವಾಹವಾಗಿ ಅಮೆರಿಕೆಯಲ್ಲೇ ನೆಲೆಸಿರುವ ಹೆಸರಾಂತ ನಿವೃತ್ತ ನ್ಯಾಯಾಧೀಶರಾಗಿದ್ದ ಶ್ರೀ ಮಳಿಮಠರ ಪುತ್ರಿ ವಿಮಲಾ ಅವರ ಕನ್ನಡ ಭಾಷಾಭಿಮಾನ ಅತಿ ಉಚ್ಚ ಮಟ್ಟದ್ದು, 'ಕನ್ನಡದಲ್ಲಿ ನುಡಿದರೆ ಅದೇ ಅವರಿಗೆ ಅಮೃತ ನುಡಿ ಎನ್ನ ವೀಣೆ' ಎಂಬ ಅವರ ಕವನ ಸಂಕಲದಲ್ಲಿ 'ಕನ್ನಡವನ್ನು ನುಡಿವಲ್ಲಿ ನನ್ನ ಬೀಡು। ಕಾವೇರಿ ಹರಿವಲ್ಲಿ ಕನ್ನಡ ಮಲ್ಲಿಗೆಯು ಅರಳಿದರೆ ನಿಂತಲ್ಲಿ ನೋಡು। ಮಾಮರದಿ ಕೇಳುವುದು ಕೋಗಿಲೆಯ ಹಾಡು' ಎಂದು ತಮ್ಮ ಕನ್ನಡದ ಪ್ರೇಮವನ್ನು ತೋಡಿಕೊಂಡಿದ್ದಾರೆ.

ಖ್ಯಾತ ದೇಶಭಕ್ತರ ಮನೆತನದಲ್ಲಿ ಹುಟ್ಟಿಬೆಳೆದ ಶಾಂತಾಬಾಯಿ ಕರಮರಕರು ಕೂಡ ಈ ಸಂಗ್ರಾಮದಲ್ಲಿ ಧುಮುಕಿದರು. ತಂದೆ ಸ್ವಾತಂತ್ರ್ಯ ಹೋರಾಟಗಾರರಾದ ಮಧ್ವರಾವ್ ಕಬ್ಬೂರರಿಂದ

೧೯೩೦ ರಲ್ಲಿ ಉಪ್ಪಿನ ಸತ್ಯಾಗ್ರಹಕ್ಕೆ ಪ್ರಚೋದನೆ ಪಡೆದವರು. ಈಕೆ ತನ್ನ ತಾಯಿ, ಚಿಕ್ಕಮ್ಮ ಜೊತೆ ಅನೇಕ ಮಹಿಳೆಯರನ್ನು ವಿದ್ಯಾರ್ಥಿನಿಯರನ್ನು ಸೇರಿಸಿಕೊಂಡು ಧಾರವಾಡದ ಬೀದಿ ಬೀದಿಗಳಲ್ಲಿ

ಭಾರತ ಮಹಿಳೆಯರೇ ಏಳಿರಿ ಬೀರುತ ಜಗದಲ್ಲಿ
ಭಾರತ ತೇಜದ ವೀರವ ತೋರುತ ಪರತಂತ್ರವದೂಡಿ ॥
(ನಿರುಪಮಾ ಲಲಿತಾಶಾಸ್ತ್ರಿ, ೨೦೧೨, ಪುಟ-೮೨)

ಎಂದು ಹಾಡುತ್ತ ಪ್ರಭಾತ ಫೇರಿಯಲ್ಲಿ ಭಾಗವಹಿಸಿದರಲ್ಲದೇ ಪರದೇಶಿ ವಸ್ತು ಬಹಿಷ್ಕಾರದ ಆಂದೋಲನದಲ್ಲಿ ಭಾಗವಹಿಸಿದ್ದರು. ಹಾಗೆಯೇ ೧೯೪೨ರ 'ಕ್ವಿಟ್ ಇಂಡಿಯಾ' ಚಳುವಳಿಯಲ್ಲಿ ಭಾಗವಹಿಸಿದ್ದರ ಫಲವಾಗಿ ಬಂಧನಕ್ಕೊಳಗಾದರು. ಬಿಡುಗಡೆಯ ನಂತರವೂ ತಮ್ಮ ಪ್ರಯತ್ನ ಮುಂದುವರೆಸಿ ೧೯೪೩ ಅಗಸ್ಟ್ ೯ ರಂದು ತಮ್ಮ ಆರು ತಿಂಗಳ ಹಸುಗೂಸಿನೊಂದಿಗೆ ಸೆರೆಮನೆ ಸೇರಿದರು.

ಧಾರವಾಡದ ದೇಶಭಕ್ತರ ಮನೆತನದಲ್ಲಿ ಹುಟ್ಟಿದ ಶಾಂತಾಬಾಯಿ ದತ್ತಾತ್ರೇಯ ಕರಮರಕರ್ ತನ್ನ ಹಿರಿಯರ ಜೊತೆಗೆ ತಾನೂ ರಾಷ್ಟ್ರದ ಚಳುವಳಿಯಲ್ಲಿ ಭಾಗವಹಿಸಿದ್ದರು. ವಿದ್ಯಾರ್ಥಿನಿಯಗಿದ್ದಾಗಲೇ ಪ್ರಭಾತ ಫೇರಿ ಸಮಯದಲ್ಲಿ ಹಾಡುತ್ತಿದ್ದರು.

ಸತ್ಯವ ಸಾರುತಲಿ। ಸತ್ಯದ ಮರ್ಮವ ಬೀರುತಲಿ
ಸತ್ಯಮೂರ್ತಿತಾ ಸತ್ಯವ ತೋರುವ ಸತ್ಯಾಗ್ರಹಿಯಾದ
ಸನ್ನುತ ಕಾರ್ಯತೆ ಕಾಯುವ ಸವೆಸುತ ಸುಜನರು ಹೊರಟಿಹರು।
(ನಿರುಪಮಾ ಲಲಿತಾಶಾಸ್ತ್ರಿ, ೨೦೧೨, ಪುಟ-೮೨)

ಈಕೆ ಹೇಳಿದ ಮತ್ತೊಂದು ಹಾಡು: ಶಾಂತಿ ಸಮರದಾ ಕ್ರಾಂತಿಯ ಕೇಳಿ ಎದ್ದು ನಿಂತಿತು ಹಿಂದೂಸ್ತಾನ ಭ್ರಾಂತರಾದರಯ್ಯ ಆಂಗ್ಲರು........ ಬೆದರಿ ನಡುಗಿತು ಲಂಡನ್

ಭಾರತಕ್ಕೆ ಸ್ವಾತಂತ್ರ್ಯ ಬಂದನಂತರ ಅನೇಕ ಕವಯಿತ್ರಿಯರು ದೇಶಭಕ್ತಿಯ ಗೀತೆಗಳನ್ನು ರಚಿಸಿದ್ದಾರೆ. ಅಂತಹವರಲ್ಲಿ ಈಚೆಗೆ 'ದೇಶಭಕ್ತಿ ಗೀತೆಗಳು' ಎಂಬ ಕವನ ಸಂಕಲನವನ್ನು ತಂದ ಶ್ರೀಮತಿ ಇಂದಿರಮ್ಮ ಪ್ರಮುಖರಾದವರು.

**ವೀರ ಮಹಿಳೆಯರು:**

ಈಗಾಗಲೇ ಭಾರತ ಸ್ವಾತಂತ್ರ್ಯ ಹೋರಾಟದ ಬೆಳ್ಳಿಚುಕ್ಕಿ ಎನಿಸಿದವಳು ಕಿತ್ತೂರ ಚೆನ್ನಮ್ಮ, ಬ್ರಿಟೀಷ ಸರಕಾರಕ್ಕೆ ಸಿಂಹಸ್ವಪ್ನಳೆನಿಸಿದ ಝಾನ್ಸಿರಾಣಿಯ ಪರಾಕ್ರಮ ಅಚ್ಚೊತ್ತಿ ಭಾರತೀಯರ ಮನದಾಳದಲ್ಲಿ ನೆಲೆನಿಂತಿದ್ದರು. ಮೇಡಂ ಕಾಮಾ ಎಂಬುವರು ಜರ್ಮನಿಯಲ್ಲಿ ಜರುಗಿದ ಅಂತರಾಷ್ಟ್ರೀಯ ಸಮಾಜವಾದಿಗಳ ಸಮ್ಮೇಳನದಲ್ಲಿ ಭಾರತೀಯ ಸ್ವಾತಂತ್ರ್ಯದ ತ್ರಿವರ್ಣ ಧ್ವಜ ಹಾರಿಸಿ

ಸರ್ವರನ್ನೂ ಚಕಿತಗೊಳಿಸಿದ್ದರು. ನಿದ್ರಿಸುತ್ತಿರುವ ಭಾರತೀಯರನ್ನು ಎಚ್ಚರಿಸಿ ಅವರು ತಾಯ್ನಾಡಿಗಾಗಿ ದುಡಿಯುವಂತೆ ಪ್ರೇರೆಪಿಸುವ ಒಂದು ಭಾರತೀಯ ಟಾಂ ಟಾಂ ಆಗಿದ್ದೇವೆ. ಎಂದು ಹೇಳುತ್ತಿದ್ದರು. ಅನ್ನಿಬೆಸೆಂಟ.

ಹೋರಾಟಗಾರ್ತಿಯವರಲ್ಲಿ ಮೊದಲನೆಯ ಮಹಿಳೆ ಎನಿಸಿದ ಸೋದರಿ ದಕ್ಷಿಣ ಕರೋಲಿನದ ಸಾರಾಗ್ರಿಮ್ಸ್. ಸ್ತ್ರೀ ಪುರುಷ ಸಮಾನತೆಗೆ ಚಳುವಳಿ ಆರಂಭಿಸಿದ್ದರು. ಸಾರ್ವಜನಿಕ ಭಾಷಣಗಳಿಂದಲೂ ಮುಷ್ಕರ ಚಳುವಳಿಗಳಿಂದಲೂ ಅನೇಕ ಬಾರಿ ಸೆರೆಮನೆ ವಾಸ ಕೈಗೊಂಡ ಇವರು ಇನ್ನುಳಿದ ಮಹಿಳೆಯರಿಗೆ ಮಾಗದರ್ಶಕರೆನಿಸಿದ್ದರು. ಕಮಲಾದೇವಿ ಚಟ್ಟೋಪಾಧ್ಯಾಯ, ಸರೋಜಿನಿ ನಾಯ್ಡು, ಕಸ್ತೂರಬಾರಂತಹ ಕೆಲವು ರಾಷ್ಟ್ರೀಯ ನೇತಾರರು ಸಮಸ್ತ ಮಹಿಳಾ ಕುಲಕ್ಕೆ ಆದರ್ಶ ವ್ಯಕ್ತಿಗಳೆನಿಸಿದರು. ಇವರ ಪ್ರೋತ್ಸಾಹ ಜನಮನದಲ್ಲಿ ತುಂಬಿದ ಅದಮ್ಯ ಉತ್ಸಾಹ ಅಸಂಖ್ಯ ಮಹಿಳೆಯರನ್ನು ಸ್ವಾತಂತ್ರ್ಯ ಹೋರಾಟಗಾರರನ್ನಾಗಿ ಪರಿವರ್ತಿಸಿತ್ತು.

ಕೆಲವು ಮಹಿಳೆಯರ ವ್ಯವಸ್ಥಿತ ಕಾರ್ಯಸಾಧನೆ ಬ್ರಿಟಿಷ್ ಸರಕಾರಕ್ಕೆ ನುಂಗಲಾರದ ತುತ್ತಾಗಿತ್ತು. ಪ್ರತಿಯೊಂದು ಜೀವನದಲ್ಲಿ ಹೊಸ ಚೈತನ್ಯ ತುಂಬಿ ಕಾರ್ಯಸನ್ನದ್ಧಗೊಳಿಸುತ್ತಿತ್ತು. ಇಂಥ ಸ್ವಾತಂತ್ರ್ಯ ಹೋರಾಟಗಾರ್ತಿಯರ ಪಾತ್ರವನ್ನು ಸುವರ್ಣಾಕ್ಷರದಲ್ಲಿ ಬರೆದಿಡಬೇಕು ಎಂದು ಸಾರಿದವರು ಮಹಾತ್ಮಾ ಗಾಂಧೀಜಿ.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕಮಲಾದೇವಿ ಚಟ್ಟೋಪಾಧ್ಯಾಯರದು ಮಹತ್ವದ ಹೆಜ್ಜೆ. ಬಾಲವಿಧವೆಯಾಗಿದ್ದ ಇವರು ಮೂಢನಂಬಿಕೆಗಳಿಗೆ ದೀರ್ಘದಂಡ ನಮಸ್ಕಾರ ಹಾಕಿ ಸರೋಜನಿ ನಾಯ್ಡುರವರ ಸೋದರ ನರೇಂದ್ರನಾಥರನ್ನು ಮದುವೆಯಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿದರು. ಪುಣೆಯಲ್ಲಿ ಗೋಪಾಲಕೃಷ್ಣ ಗೋಖಲೆಯವರು 'ಮಹಿಳಾ ಸೇವಾ ಸದನ' ಮತ್ತು 'ಸರ್ವಂಟ ಆಫ್ ಇಂಡಿಯಾ' ಎಂಬ ಎರಡು ಸಂಸ್ಥೆಗಳ ಸದಸ್ಯರಾಗಿ ಕಾರ್ಯಕೈಕೊಂಡರು. ಇವರ ಹಾದಿಯಲ್ಲಿ ಮುನ್ನಡೆದ ದೇಶಭಕ್ತ ಉಮಾಬಾಯಿ ಕುಂದಾಪುರ ಅವರು. ಬ್ರಿಟೀಷರ ದಬ್ಬಾಳಿಕೆ ಮನಗಂಡು ಸ್ವಾತಂತ್ರ್ಯ ಸಂಗ್ರಾಮದಲ್ಲಿ ೧೯೧೯ ರಲ್ಲಿ ನಡೆದ 'ಜಲಿಯನ್‌ವಾಲಾಬಾಗ್' ಹತ್ಯಾಕಾಂಡದ ದುಷ್ಕೃತ್ಯದ ನೋವನ್ನುಂಡರು. ಹುಬ್ಬಳ್ಳಿಯಲ್ಲಿ 'ಭಗಿನಿ ಸಮಾಜ' ಎಂಬ ಸಂಸ್ಥೆ ರಚಿಸಿ ಅದರ ಮೂಲಕ ಸಾಮಾಜಿಕ ಕ್ರಾಂತಿ ಮುಂದುವರೆಸಿದರು. ಅಂದು ಕಾಂಗ್ರೆಸ್ ನಿಧಿಗಾಗಿ ಒಂದು ಲಕ್ಷ ರೂ. ಸಂಗ್ರಹಿಸಿ ಕೊಟ್ಟ ಕೀರ್ತಿ ಇವರದು. ಪಣಜೀಕರ ಕೃಷ್ಣಾಬಾಯಿ, ಈಸೂರಿನ ದಿಟ್ಟ ಹೋರಾಟಗಾರ್ತಿಯರೆನಿಸಿದ ಪಾರ್ವತೆಮ್ಮ ಸಿದ್ಧಮ್ಮ ಹಾಲಮ್ಮ ಎಂಬುವವರು ಚಲೇಜಾವ್ ಚಳುವಳಿಯಲ್ಲಿ ಭೂಗತರಾಗಿ ಕಾರ್ಯ ಕೈಕೊಂಡರು.

**ಅಹಿಂಸಾತ್ಮಕ ಹೋರಾಟ:**

ಗಾಂಧೀಜಿಯವರು ಕೈಕೊಂಡ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಹಿಳೆಯರಿಗೆ ಹೆಚ್ಚಿನ ಉತ್ತೇಜನವಿತ್ತು. "ನಮ್ಮದು ಅಹಿಂಸಾ ಚಳುವಳಿ. ಇದರಲ್ಲಿ ಮಾನವಶಕ್ತಿಯನ್ನು ಅಳಿಯಬೇಕಿಲ್ಲ. ಸಹನೆ, ತಾಳ್ಮೆ, ತ್ಯಾಗ ನಿಶ್ಚಲತೆ, ಸದ್ಗುಣಗಳು ಇಲ್ಲಿ ಅಗತ್ಯ. ಈ ಗುಣಗಳಲ್ಲಿ ಸ್ತ್ರೀ ದಕ್ಷಳೆಂದು ನಿರೂಪಿತವಾಗಿದೆ" ಎಂದವರು ಬಾಪೂಜಿ. ಜವಾಹರಲಾಲ ನೆಹರೂ ತಮ್ಮ ಆತ್ಮಕಥನದಲ್ಲಿ ಬರೆದಂತೆ 'ರಾಷ್ಟ್ರೀಯ ಹೋರಾಟದಲ್ಲಿ ಸ್ತ್ರೀಯರ ಪಾತ್ರ' ಗಮನಾರ್ಹವಾಗಿತ್ತು. ತಂತಮ್ಮ ಮನೆಗಳಿಂದ ಪ್ರತ್ಯೇಕಗೊಂಡು ಅನೇಕ ಸ್ತ್ರೀಯರು ಹೊರಬಂದು ಸಾರ್ವಜನಿಕ ಚಟುವಟಿಕೆಗಳಲ್ಲಿ ಯಾವ ಅನುಭವ ಇಲ್ಲದಿರುವಾಗಲೂ ರಾಷ್ಟ್ರೀಯ ಚಳುವಳಿಗೆ ಧುಮುಕಿದರು. ವಿದೇಶೀ ಬಟ್ಟೆ ಮತ್ತು ಮದ್ಯದ ಅಂಗಡಿಗಳ ಮುಂದೆ ಮುಷ್ಕರ ಹೂಡುವದು ಬಹುಮಟ್ಟಿಗೆ ಸ್ತ್ರೀಯರ ಕೆಲಸಗಳಾಗಿದ್ದವು. ಎಲ್ಲ ನಗರಗಳಲ್ಲಿಯೂ ಹೆಣ್ಣು ಮಕ್ಕಳೇ ಇದ್ದ ಪ್ರತಿಭಟನಾ ಮೆರವಣಿಗೆಗಳು ಜರುಗಿದವು. . ಇವರುಗಳ ಧೋರಣೆ ಪುರುಷ ಧೋರಣೆಗಳಿಗಿಂತ ಹೆಚ್ಚು ಬಿಗಿಯಾಗಿರುತ್ತಿತ್ತು ಎಂದಿರುವರು.

ಉಪ್ಪಿನ ಸತ್ಯಾಗ್ರಹದಲ್ಲಿ ಮುನ್ನುಗ್ಗಿ ಬ್ರಿಟೀಷರಿಗೆ ಪತ್ತೆಯಾಗದಿರಲೆಂದು ತಮ್ಮ ಹೆಸರು ವೇಷ ಚರ್ಯೆಯನ್ನು ಬದಲಾಯಿಸಿಕೊಂಡು ಗುಪ್ತ ಸ್ಥಳಗಳಿಗೆ ಹೋಗಿ ಜನರಲ್ಲಿ ಜಾಗೃತಿಯನ್ನುಂಟು ಮಾಡಿದ ಮಹಿಳೆಯರ ತಂಡ ಅಂದು ಬೆರಗುಗೊಳಿಸುವಂತಿತ್ತು. ಅವಿದ್ಯಾವಂತರೆನಿಸಿದ ಭಾರತೀಯ ಮಹಿಳೆಯರು ಅಹಿಂಸಾತ್ಮಕ ಮತ್ತು ಬ್ರಿಟೀಷರ ವಿರುದ್ಧ ಅಸಹಕಾರ ಚಳುವಳಿಯಲ್ಲಿ ಅತ್ಯಂತ ಉತ್ತಮ ರೀತಿಯಿಂದ ನಡೆದುಕೊಂಡಿದ್ದಾರೆ. ಬ್ರಿಟಿಷ್ ಸರಕಾರದ ಶಿಕ್ಷೆಯನ್ನು ಕ್ರೋಧವನ್ನು, ಬೈಗುಳವನ್ನು ತಾಳ್ಮೆಯಿಂದ ಧೈರ್ಯದಿಂದ ಸಹಿಸಿದ್ದಾರೆ. ಅಹಿಂಸಾ ಚಳುವಳಿಗೆ ನಿಜವಾದ ಅರ್ಥ ಕೊಟ್ಟು, ಕಾರ್ಯಗತ ಮಾಡಿದ್ದಾರೆ ಎಂದು ಅನೇಕ ಹೋರಾಟಗಾರರು ತಿಳಿಸಿದ್ದಾರೆ.

ಸ್ವಾತಂತ್ರ ಹೋರಾಟದ ಸಂದರ್ಭದಲ್ಲಿ ಮಹಿಳೆಯರ ಕ್ರಾಂತಿಗಳ ಚಟುವಟಿಕೆಗಳೂ ಅವರ ಪ್ರಚಂಡ ಸ್ವಾತಂತ್ರ್ಯ ಮನೋಭಾವ ಸಾಹಸಮಯವೆನಿಸಿದ್ದವು. ಸಾಮಾಜಿಕ ಜೀವನದ ಕುಂದುಕೊರತೆ ನೀಗಿಸಲು ಪ್ರಯತ್ನ ಪಟ್ಟರು. ಶೈಕ್ಷಣಿಕ ಪ್ರಗತಿ, ಆಧ್ಯಾತ್ಮಿಕ ಜೀವನದ ಉನ್ನತಿ, ವರ್ಗ ವರ್ಣಭೇದಗಳ ವಿರುದ್ಧ ಹೋರಾಡಿದರು. ಮಾನವೀಯ ಅನುಕಂಪ ವಿಶ್ವಪ್ರೇಮ ಜನತೆಯ ಮುಂದಾಳಾಗಿ ರಾಷ್ಟ್ರ ಮುನ್ನಡೆಸಬಲ್ಲ ಆಧ್ಯಾತ್ಮಿಕ ಶಕ್ತಿ ಇವರನ್ನು ದೇಶಪ್ರೇಮಿಗಳನ್ನಾಗಿಸಿತ್ತು.

ನಾವೆಲ್ಲರು ಒಂದೆ ಜಾತಿ ಒಂದೆ ಮತ ಒಂದೆ ಕುಲ
ನಾವು ಮನುಜರು
ನರರ ನಡುವಿನಡ್ಡ ಗೋಡೆಗಳನ್ನು ಕುಟ್ಟಿ ಕೆಡಹುವೆವು
ನಾವು ವಿಲಯರುದ್ರರು

ಹೊಸ ಬಾಳಿನ ಹೊಸ ಸಮತೆಯ ಸಮರಸವನು ಸವಿಪೆವು
ನಾವು ನವವಿಧಾತರು॥
(ಗೋಪಾಲಕೃಷ್ಣ ಅಡಿಗ, ೨೦೧೦, ಪುಟ-೬೯)

ನಾವೆಲ್ಲರೂ ಒಂದೇ ಜಾತಿ ಎಂಬ ಭಾವನೆ ಮೊಳೆತು. ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಅಂದು ಸ್ವಾತಂತ್ರ್ಯ ಸಮರದಲ್ಲಿ ಧುಮುಕಿದರು. ಕೆಲವು ಮಹಿಳೆಯರಿಗೆ ದೊರೆತ ಈ ಪರಿಸರ ಅವರನ್ನು ಸ್ವಾತಂತ್ರ್ಯ ಹೋರಾಟಗಾರರನ್ನಾಗಿಯೇ ಹುಟ್ಟಿಸಿತ್ತೆನ್ನಬೇಕು. ಆದರೆ ಯಾವುದೂ ಪರಿಸರ, ಸಮರ್ಥ ಮಾಗದರ್ಶನವಿಲ್ಲದೆ ಈ ಸಮಾರಂಭದಲ್ಲಿ ಧುಮುಕಿದವರೇ ಅಧಿಕ. ಗೃಹಕೃತ್ಯಕ್ಕೆ ತಮ್ಮ ಜೀವನದ ಬಹುಭಾಗವನ್ನು ಸೆರೆಮನೆಯಲ್ಲಿ ಕಳೆದ ಭಾರತೀಯ ಮಹಿಳಾವರ್ಗ ಸ್ತುತ್ಯವೆನಿಸಿದೆ. ಬ್ರಿಟಿಷ್ ಸರದಾರರ ದೃಷ್ಟಿಯಲ್ಲಿ ಹೆಣ್ಣು ಗಂಡು ತಾರತಮ್ಯತೆ ಇಲ್ಲದೆ ಶಿಕ್ಷಿಸಿದುದನ್ನು ಅನೇಕ ಕೃತಿಗಳು ವ್ಯಕ್ತಪಡಿಸಿವೆ. ಮಹಾತ್ಮಾ ಗಾಂಧೀಜಿಯವರ ದೇಶಪ್ರೇಮ, ಅನುಪಮ ಮಾನವೀಯ ಅನುಕಂಪ ಆ ಯುಗಕ್ಕೆ ಹಾಕಿದ ಮೋಡಿಯೆನಿತ್ತು. ಇಂಥ ಉತ್ತಮ ಸನ್ಮಾರ್ಗದರ್ಶನ ವರ್ಗವರ್ಣ ಜಾತಿ ಕುಲಗೋತ್ರಗಳನ್ನು ಬದಿಗಿರಿಸಿ ಬಹುಸಂಖ್ಯೆಯ ಮಹಿಳೆಯರನ್ನು ಹೋರಾಟಕ್ಕೆ ದೀಕ್ಷಾಬದ್ಧರನ್ನಾಗಿಸಿತ್ತು.ಮಹಾತ್ಮಾಜಿಯವರ ಆದೇಶದಂತೆ ರಾಷ್ಟ್ರದಾದ್ಯಂತ ಸ್ವಾತಂತ್ರ್ಯ ಸಂಗ್ರಾಮ ಪ್ರಾರಂಭವಾದಾಗ ಉಮಾಬಾಯಿ ಕುಂದಾಪುರ, ಕೃಷ್ಣಾಬಾಯಿ ಪಣಜೀಕರ ಮುಂತಾದ ಮಹಿಳೆಯರು ಮಹಿಳಾ ಮಂಡಲಗಳನ್ನು ಸ್ಥಾಪಿಸಿ ಮಹಿಳೆಯರಲ್ಲಿ ಜಾಗೃತಿಯನ್ನು ತುಂಬತೊಡಗಿದರು. ಸ್ವದೇಶಿ ಬಟ್ಟೆ, ಖಾದಿ ಪ್ರಚಾರ, ಸ್ವದೇಶಿ ವಸ್ತ್ರ ಬಹಿಷ್ಕಾರ ವಿದೇಶಿ ವಸ್ತುಗಳ ಅಂಗಡಿಗಳ ಮುಂದೆ ಪಿಕೆಟಿಂಗ ಮಾಡುವದು. ಶಾಂತಾಬಾಯಿ ಕಝುರಕರ ಅವರು ೧೯೩೦ ರಲ್ಲಿ ಉಪ್ಪಿನ ಸತ್ಯಾಗ್ರಹ, ೧೯೩೧ ರಲ್ಲಿ ಕರನಿರಾಕರಣೆಯ ಚಳುವಳಿಯಲ್ಲಿ ಭಾಗಿಯಾದರು. ಹರಿಜನಪ್ರಿಯ ಶ್ರೀಮತಿ ನಾಗಮ್ಮ ಸರದಾರ ವೀರನಗೌಡ ಪಾಟೀಲ ಹುಬ್ಬಳ್ಳಿಯಲ್ಲಿ ಮಹಿಳಾ ವಿದ್ಯಾಪೀಠ ಕಟ್ಟಿದರು. ದೇಶಭಕ್ತರಾದ ವೀರನಗೌಡರು ಸ್ವಾತಂತ್ರ್ಯ ಚಳುವಳಿಯಲ್ಲಿ ತಮಗೆ ಕೆಲಸ ವಹಿಸಿಕೊಡಬೇಕೆಂದು ಮಹಾತ್ಮಾಜಿಯವರನ್ನು ಕೇಳಿದಾಗ ಅವರು 'ಇದೂ ಒಂದು ಸ್ವಾತಂತ್ರ್ಯ ಚಳುವಳಿಯೇ. ಅಸ್ಪೃಶ್ಯತೆ ಈ ದೇಶದ ಸ್ವಾತಂತ್ರ್ಯಕ್ಕೆ ಅಡ್ಡಿ ತಂದಿದೆ. ನಮ್ಮ ಸಮಾಜದಲ್ಲಿ ಅಸ್ಪೃಶ್ಯತೆಗಿರುವ ಕೀಳುಭಾವನೆ ತೊಲಗುವವರೆಗೂ ನಾವು ಸ್ವತಂತ್ರರಾಗಲು ಸಾಧ್ಯವಿಲ್ಲ. ಅಸ್ಪೃಶ್ಯ ನಿವಾರಣೆ ಸ್ವಾತಂತ್ರ್ಯ ಚಳುವಳಿಯ ಮುಖ್ಯ ಕೆಲಸ' ಎಂದು ಹೇಳಿದ್ದರಿಂದ ಈ ಕೆಲಸವನ್ನು ಶಿರಸಾವಹಿಸಿ ತಾವೂ ಶ್ರಮಿಸಿದುದಲ್ಲದೆ ಈ ಕೆಲಸದ ಪೂರ್ಣ ಜವಾಬ್ದಾರಿಯನ್ನು ಮಡದಿ ನಾಗಮ್ಮನವರಿಗೆ ವಹಿಸಿಕೊಟ್ಟರು. ಇದರಿಂದಾಗಿ ೧೯೩೪ ರಲ್ಲಿ ಇಬ್ಬರು ಹರಿಜನ ವಿದ್ಯಾರ್ಥಿನಿಯರಿಂದ ಪ್ರಾರಂಭವಾಯಿತು ಈ ಮಹಿಳಾ ವಿದ್ಯಾಪೀಠ. ಸರದಾರ ವೀರನಗೌಡರ ಮಾತಿನಲ್ಲಿಯೆ ಹೇಳುವದಾದರೆ ಇಂಥ ಬಾಲಿಕಾಶ್ರಮ ಸ್ಥಾಪನೆಯಾದುದು ಮೊದಲು ವಾರ್ಧದಲ್ಲಿ ಅನಂತರ ಕರ್ನಾಟಕದಲ್ಲಿ. ಇಡೀ ಭಾರತದಲ್ಲಿಯ ಎರಡನೆಯದಾಗಿ ಪ್ರಸಿದ್ಧವಾದುದು ಹುಬ್ಬಳ್ಳಿಯಲ್ಲಿ ಎಂದಿರುವರು. ಹರಿಜನರಲ್ಲಿ ಜಾಗೃತಿ ತರುವುದು ಸ್ವಾತಂತ್ರ್ಯಕ್ಕಾಗಿ ಹೋರಾಟದ ಇನ್ನೊಂದು ಮುಖದ

ಚಳುವಳಿಯೆನಿಸಿತ್ತು. ಈ ದೃಷ್ಟಿಯಿಂದ ಪ್ರಭಾತಫೇರಿ, ದೇಶಭಕ್ತಿಗೀತೆಗಳು, ಕೀರ್ತನೆಗಳು, ಲಾಠಿ, ಲೇಝಿಮ್, ವಾಯಲಿನ್ ಶಿಕ್ಷಣ, ಹಂಜಿ ನೂಲುವುದು ಮುಂತಾದ ಚಟುವಟಿಕೆಗಳಿಂದ ಸಮಾಜದಲ್ಲಿ ಒಳ್ಳೆಯ ವಾತಾವರಣ ಹುಟ್ಟಿಸಿ ಎಷ್ಟೋ ಕಾಲದಿಂದ ಬೆಳೆದುಬಂದ ವರ್ಣದ ತಾರತಮ್ಯ ಕಡಿಮೆಗೊಳಿಸಿದುದು. 'ಪತಿತರಾದ ಜೀವಂತದೇವರ ಪೂಜೆಯೇ ನಿಜವಾದ ದೇವರ ಪೂಜೆ' ಎಂದು ನಂಬಿ ನಡೆದರು.

ಹೀಗೆ ಅಸಂಖ್ಯೆಯಲ್ಲಿ ಭಾವಹಿಸಿದ ಸ್ವಾತಂತ್ರ್ಯ ಹೋರಾಟಗಾರ್ತಿಯರಲ್ಲಿ ಹಾಸನದ ಶಾರದಮ್ಮ ಗೋವಿಂದರಾವ, ಮೈಸೂರಿನ ಸುನಂದಮ್ಮ, ಬೆಂಗಳೂರಿನ ಬಿ. ಕಾಮಾಕ್ಷಮ್ಮ ಮುಂತಾದವರನ್ನು ಹೆಸರಿಸಬಹುದಾಗಿದೆ. ಗಂಗಾಬಾಯಿ ತಮಿಳುನಾಡಿನ ಹೋರಾಟಗಾರ್ತಿ ಕಲ್ಕತ್ತಾದಲ್ಲಿ ಮಹಿಳಾ ವಿದ್ಯಾಲಯ ಮಹಾಕಾಳಿ ವಿದ್ಯಾಲಯ ಪಾಠಶಾಲೆ ಪ್ರಾರಂಭಿಸಿದ್ದರು. ಪ್ರತಿ ಭಾರತೀಯ ಮಹಿಳೆಯರನ್ನು ಚಳುವಳಿಯಲ್ಲಿ ತರಬೇತಿ ಮಾಡುತ್ತಿದ್ದರೆಂದು ಕೆಲವರಿಗೆ ಮಾತ್ರ ಗೊತ್ತು. ಬ್ರಿಟೀಷರು ಈಕೆಯನ್ನು ಮಹಿಳಾ ವಿದ್ಯಾಲಯದ ಸ್ಥಾಪಕಳೆಂದು ಬಗೆದಿದ್ದರೆ ಅದರ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಹೋರಾಟದ ಕಿಚ್ಚು ಎಬ್ಬಿಸಿದ ಹೋರಾಟಗಾರ್ತಿ ಈಕೆ ಎನಿಸಿದ್ದಳು.

೧೯೪೨ ರ ಈಸೂರಿನ ಘಟನೆ. ಸ್ವಾತಂತ್ರ್ಯ ಹೋರಾಟಗಾರರಾದ ಗುರಪ್ಪ ಮಲ್ಲಪ್ಪ, ಶಂಕ್ರಪ್ಪ, ಸೂರ್ಯನಾರಾಯಣರಾವ್ ಮತ್ತು ಹಾಲಪ್ಪರಿಗೆ ಗಂಭೀರ ಶೈಲಿಯಲ್ಲಿ ಮರಣದಂಡನೆ ಜಾರಿಮಾಡಿತು. ಅವರನ್ನು ಗಲ್ಲಿಗೇರಿಸಲು ಹಿಂದಿನ ದಿನ ಅವರ ಪತ್ನಿ ಮತ್ತು ಮಾತೆಯರು ಸೆರೆಮನೆಯಲ್ಲಿ ಅವರನ್ನು ಕರಿಯಕಂಬಳಿಯ ಮೇಲೆ ಕೂರಿಸಿ ದೀಪಹಚ್ಚಿಟ್ಟು ಹಣೆಗೆ ಅಕ್ಷತೆ ಇಟ್ಟು ಆರತಿ ಬೆಳಗಿ ದೇಶಕ್ಕಾಗಿ ಪ್ರಾಣ ನೀಡಿದ ವೀರಭಾರತೀಯರಾಗಿ ಸ್ವರ್ಗ ಸೇರಿ' ಎಂದು ಆಶೀರ್ವದಿಸಿ ಕಂಬನಿಗರೆದರು. ಈ ಪ್ರಕರಣದಲ್ಲಿ ಈಸೂರು ಹಾಲಮ್ಮ ಪಾರ್ವತಮ್ಮ ಮತ್ತು ಸಿದ್ಧಮ್ಮ ಎಂಬುದು ೨೦ ವರ್ಷ ಕಠಿಣಶಿಕ್ಷೆಗೆ ಒಳಗಾದದ್ದು ಗೊತ್ತಾಗುತ್ತಿದೆ. ಸವಿನಯ ಭಂಗ ಚಳುವಳಿಯಲ್ಲಿ ಕೊಟ್ಟೂರ ಸಿದ್ಧಪ್ಪನವರು ತಮ್ಮ ವಿವಾಹವನ್ನು ಹರಿಜನಕೇರಿಯಲ್ಲಿ ನಡೆಸಿಕೊಂಡರು. ಯಾವುದೇ ಸಂಪ್ರದಾಯವಿರದೇ ಖಾದಿ ಬಟ್ಟೆ ತೊಟ್ಟು ನೂಲಿನ ಹಾರಗಳ ವಿನಿಮಯ ಮಾಡಿಕೊಂಡು ತ್ರಿವರ್ಣ ಧ್ವಜ ಹಾರಿಸುವದರೊಂದಿಗೆ ವಿವಾಹ ಮಾಡಿಕೊಂಡರು.

ಹೀಗೆ ಕೆಲವು ಮಹಿಳೆಯರು ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರೀಯವಾಗಿ ತಮ್ಮನ್ನು ತೊಡಗಿಸಿಕೊಂಡು ಮಹಿಳೆಯರಿಗೆ ಸಮಾನಹಕ್ಕುಗಳ ಜೊತೆ ದೇಶಸೇವೆಗಾಗಿ ಹಾಗೂ ಸಮಾಜದ ಉನ್ನತಿಗಾಗಿ ಮಹಿಳೆಯರ ಸಂಘಟನೆ ನಡೆಸಿ ಕಷ್ಟನಿಷ್ಠುರದ ಬದುಕು ನಿರ್ವಹಿಸಿದರು. ಇಂಥವರು ದೇಶದಿಂದ ತಮಗಾಗಿ ಏನನ್ನು ಬಯಸದೆ ದೇಶದ ಹಿತವೇ ತಮ್ಮ ಹಿತವೆಂದು ದೇಶದ

ಸರ್ವಸಾಮಾನ್ಯರಲ್ಲಿ ತಮ್ಮನ್ನು ಗುರುತಿಸಿಕೊಂಡರು. ಇಂಥ ಮಹಿಳೆಯರು ಪ್ರಾತಃಸ್ಮರಣೀಯರು. ಇವರ ದಿವ್ಯಚೇತನ ಇಂದು ಭಾರತೀಯರನ್ನು ಮುನ್ನಡೆಸಬೇಕಿದೆ.

**ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕ ಮಹಿಳೆಯರ ಪಾತ್ರ: (೧೯೮೬) :**

ಗಾಂಧೀಜಿಯವರ ನಾಯಕತ್ವದಲ್ಲಿ ಪ್ರಾರಂಭವಾದ ಭಾರತದ ಸ್ವಾತಂತ್ರ್ಯಹೋರಾಟದಲ್ಲಿ ಅನೇಕ ಮಹಿಳೆಯರು ಸಕ್ರಿಯವಾಗಿ ಪಾಲ್ಗೊಂಡರೆನ್ನುವುದು ಚಾರಿತ್ರಿಕ ಸಂಗತಿ. ಆದರೆ ಪುರುಷನಿರ್ಮಿತ ಇತಿಹಾಸದಲ್ಲಿ ದಾಖಲಾಗದೇ ಹಿನ್ನೆಲೆಯಲ್ಲಿ ಉಳಿದಿದ್ದ ಮಹಿಳೆಯರ ಶೌರ್ಯ–ಸಾಹಸ–ದೇಶ ಪ್ರೇಮದ ಚರಿತ್ರೆಯನ್ನು ಪರಿಚಯಿಸಿಕೊಡುವ ಪ್ರಸ್ತುತ ಪುಸ್ತಕಕ್ಕೆ ಚಾರಿತ್ರಿಕ ಮಹತ್ವವಿದೆ. ಮಹಿಳೆಯನ್ನು ಬುದ್ಧಿಹೀನೆ–ನಿರುಪಯುಕ್ತ–ಹೊರೆ ಎಂದು ಭಾವಿಸಿದ್ದ ಸಮಾಜಕ್ಕೆ ಮಹಿಳೆಯ ಪ್ರತಿಭೆ–ಸಾಮರ್ಥ್ಯ–ಬುದ್ಧಿ ಧೈರ್ಯ–ಕಾರ್ಯ ಕ್ಷಮತೆಯನ್ನು ಪರಿಚಯಿಸಿದ ಸರೋಜನಿನಾಯ್ಡು, ಕಸ್ತೂರಿಬಾ, ಕಮಲಾದೇವಿ ಚಟ್ಟೋಪಾಧ್ಯಾಯ, ಮುಂತಾದವರು ಸ್ವತಂತ್ರ ಭಾರತದಲ್ಲಿ ಮಹಿಳೆಯ ಸ್ಥಾನಮಾನಗಳ ಉನ್ನತಿಗೆ ವೇದಿಕೆ ಸಿದ್ಧ ಮಾಡಿದರು. ಇದೇ ಪರಂಪರೆಯಲ್ಲಿ ನೆನೆಯಬೇಕಾದ ಸಾವಿರಾರು ಮಹಿಳೆಯರ ಸೇವೆ–ತ್ಯಾಗ–ಬಲಿದಾನಗಳು ಬೆಳಕಿಗೆ ಬರಬೇಕಾಗಿದೆ ಎನ್ನುವ ಆಶಯದಿಂದ ರಚನೆಗೊಂಡಿರುವ ಈ ಚಿಕ್ಕ ಪುಸ್ತಕದಲ್ಲಿ ಸ್ವಾತಂತ್ರ್ಯಹೋರಾಟದಲ್ಲಿ ಪ್ರತ್ಯಕ್ಷವಾಗಿ–ಹಿನ್ನೆಲೆಯಾಗಿ ಪಾಲುಗೊಂಡಿರುವ ಕನ್ನಡತಿಯರ ಸಾಹಸ–ದೇಶಪ್ರೇಮದ ರೋಮಾಂಚನಕಾರಿ ಘಟನೆಗಳನ್ನು ನಿರೂಪಿಸಲಾಗಿದೆ. ಭಾರತದ ದಾಸ್ಯ ವಿಮೋಚನೆಯಾಗಿ ಸ್ವತಂತ್ರ್ಯ ಭಾರತ ನಿರ್ಮಾಣವಾಗುವಲ್ಲಿ ಸಾವಿರಾರು ಮಹಿಳೆಯರ ತನು–ಮನ–ಧನಗಳ ಸೇವೆ ತಂದಿದೆಯೆನ್ನುವುದನ್ನು ದಾಖಲಿಸುವ ಪ್ರಯತ್ನವಿಲ್ಲದೆ. ಟಿ. ಸುನಂದಮ್ಮ, ಉಮಾಬಾಯಿ ಕುಂದಾಪುರ, ಶಕುಂತಲಾ ಕುರ್ತಕೋಟಿ, ನಾಗಮ್ಮಾ ಪಾಟೀಲ, ಜಯದೇವಿ ತಾಯಿ ಲಿಗಾಡೆ, ಲೀಲಾವತಿ ಮಾಗಡಿ, ಸುಬ್ಬಮ್ಮ ಚೊಯಿಸ, ಯಶೋಧಮ್ಮ ದಾಸಪ್ಪ, ಬಳ್ಳಾರಿ ಸಿದ್ಧಮ್ಮ ಸಿದ್ಧಾಪುರದ ಭಾಗೀರಥಿಬಾಯಿ ಇತ್ಯಾದಿ ಮಹಿಳೆಯರ ದೇಶನಿಷ್ಠೆಯನ್ನು ಅತ್ಯಂತ ರೋಚಕ ಘಟನೆಗಳ ಮೂಲಕ ವಿವರಿಸಿದ್ದಾರೆ.

## ಅಧ್ಯಾಯ-ನಾಲ್ಕು

## ರಾಷ್ಟ್ರೀಯತೆ ಮತ್ತು ಸ್ವಾತಂತ್ರ್ಯದ ಪರಿಕಲ್ಪನೆ

"ನವೋದಯದ ಅಂದಿನ ಕಾಲ ರಾಷ್ಟ್ರೀಯ ಪುನರುತ್ಥಾನದ ಚಳುವಳಿಯ ಕಾಲ ಹಾಗೂ ಸ್ವಾತಂತ್ರ್ಯ ಸಂಗ್ರಾಮದ ಕಾಲವೂ ಆಗಿದ್ದಿತು. ಜೊತೆಗೆ ಒಡೆದುಹೋದ ಕನ್ನಡ ನಾಡನ್ನು ಒಂದುಗೂಡಿಸುವ ಏಕೀಕರಣ ಚಳುವಳಿಯ ಆರಂಭವೂ ಆಗಿದ್ದಿತು. ಹೀಗಾಗಿ ರಾಷ್ಟ್ರೀಯತೆ, ಸ್ವಾತಂತ್ರ್ಯದ ಬಗೆಗೆ ಒಲವು, ನಾಡು-ನುಡಿಯ ಮೇಲಿನ ಪ್ರೀತಿ, ತ್ಯಾಗ, ಆದರ್ಶಗಳು ಅಂದಿನ ಪ್ರೇರಣೆಗಳಾದವು.

ಹೊಸಗನ್ನಡದ ನವೋದಯ ಕಾಲಘಟ್ಟದಲ್ಲಿ ನವೋದಯ ಸಾಹಿತಿಗಳು ತಮ್ಮ ಕಾವ್ಯಗಳಲ್ಲಿ ದೇಶಾಭಿಮಾನ, ರಾಷ್ಟ್ರದ ಹಿತಾಸಕ್ತಿ, ಕಾಳಜಿಯನ್ನು ಇಟ್ಟುಕೊಂಡು ಅಪ್ಪಟ್ಟ ರಾಷ್ಟ್ರೀಯತೆಯನ್ನು ತೋರ್ಪಡಿಸಿದಂತೆಯೇ, ಕನ್ನಡ ನಾಡು ನುಡಿಯ ಅಭಿಮಾನಗಳ ಬಗೆಗ ಹೆಮ್ಮೆಯ ಮಾತುಗಳನ್ನೇ ಆಡಿರುವರು. ಕರ್ನಾಟಕ ಏಕೀಕರಣ ಚಳುವಳಿಗೆ ಸಾಹಿತ್ಯದ ಮೂಲಕ ಜನತೆಗೆ ಕರೆಕೊಟ್ಟಿರುವುದಲ್ಲದೆ, ನೇರವಾಗಿ ಹೋರಾಟವನ್ನು ಮಾಡಿರುವರು. ಸಾಹಿತ್ಯವು ಜನತೆಗೆ ಸ್ಫೂರ್ತಿಯಾದಂತೆ, ಹೋರಾಟಗಳು ಸಾಹಿತಿಗಳಿಗೆ ಪ್ರೇರಣೆಯಾದವು. ಕವಿಗಳು ನಾಡು-ನುಡಿಯ ಬಗೆಗೆ ಅಪಾರ ಕಾಳಜಿ, ಹಿತಾಸಕ್ತಿಯ ಶ್ರೇಯೋಭಿವೃದ್ಧಿಗಾಗಿ ಹೋರಾಡಿರುವವರು. ಹೋರಾಟದ ಮೂಲಕ ಜನರನ್ನು ಪ್ರಚೋದಿಸಿರುವರು. ಕನಸುಕಾಣುವುದು, ಅದನ್ನು ನನಸು ಮಾಡಲು ಶ್ರಮಿಸುವಂತೆ ಜನತೆಗೆ ತಮ್ಮ ಸಾಹಿತ್ಯದ ಮೂಲಕ ಕರೆ ಕೊಟ್ಟಿರುವರು. ಕನ್ನಡಿಗರ ಭಾರತೀಯತ್ವಕ್ಕೆ ಕರ್ನಾಟಕತ್ವ ಪೂರಕವು, ಪ್ರೇರಕವೂ ಆಗಿದೆ.

ಇಂದಿನ ಭಾರತೀಯ ಪರಿಸರದಲ್ಲಿ ರಾಷ್ಟ್ರೀಯತೆ, ರಾಷ್ಟ್ರಪ್ರೇಮ, ನಾಡಭಕ್ತಿಯಲ್ಲಿ ರಾಷ್ಟ್ರಭಾಷೆ ಮತ್ತು ಮಾತೃಭಾಷೆಯ ಅಭಿಮಾನಗಳಲ್ಲಿ ವ್ಯಕ್ತವಾಗಿದೆ. "ಭಾರತೀಯ ಸಂಸ್ಕೃತಿ, ಧರ್ಮಗಳ ಪುನರುಜ್ಜೀವನ, ವಿದೇಶಿಯ ಹಾಗೂ ವೈಜ್ಞಾನಿಕ ಪ್ರಭಾವಗಳ ಘರ್ಷಣೆ, ಸಮನ್ವಯ ಜೀವನ ದರ್ಶನದ ಅರಿವು, ಆಚಾರಗಳ ಪ್ರೇರಣೆಯಲ್ಲಿ ಕಾಣಬರುತ್ತದೆ."(ಶಿವರುದ್ರಪ್ಪ ಜಿ.ಎಸ್. ೧೯೮೧, ಪುಟ-೧೨)ರಾಷ್ಟ್ರೀಯತೆ' ಮಾತ್ರವಲ್ಲದೆ ಈ ದೇಶದ ಮುಂದಾಳುತನ ಹಾಗೂ ಸ್ವಾತಂತ್ರ್ಯದ ಉತ್ಕಟ ಬಯಕೆ ಜನರಲ್ಲಿ ಹೊಸತನ ತಂದಿತು. ಗಾಂಧೀಜಿಯಂತವರ ಮುಂದಾಳುತನ ಮತ್ತು ಉಜ್ವಲ ವ್ಯಕ್ತಿತ್ವ ಈ ದೇಶದ ಜನತೆಯ ಹೃದಯದಲ್ಲಿ ಸ್ವಾತಂತ್ರ್ಯದ ಕಿಡಿಯನ್ನು ಹೊತ್ತಿಸಿತು. ಈ ಹೋರಾಟದ ಕಾಲದಲ್ಲಿ ಜನತೆಯನ್ನು ಪ್ರೇರೆಪಿಸಿದ ಸಾಹಿತಿಗಳ ಪಾತ್ರವೂ, ಹೋರಾಟದಿಂದ ಸ್ಫೂರ್ತಿಗೊಂಡ ಸಾಹಿತ್ಯಾಭಿವ್ಯಕ್ತಿಯೂ ಮಹತ್ವದ್ದಾಗಿದೆ.

೧೯೨೦ರ ಸುಮಾರಿಗೆ ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಭಾವ ಪ್ರವಾಹದ ಒಂದು ರಾಷ್ಟ್ರೀಯ ಆಯಾಮ ಪ್ರಾಪ್ತವಾಗಿತ್ತು. ದೇಶಾಭಿಮಾನವೇ ಆಗಿನ ಭಾವೋತ್ಕಷ. ತಮ್ಮ ನಾಡಿಗಾಗಿ ತನು, ಮನ, ಧನವನ್ನೆಲ್ಲ ಅರ್ಪಿಸಿದ ರಾಷ್ಟ್ರಾಭಿಮಾನಿ ಭಾರತೀಯರ ಸ್ವಾತಂತ್ರ್ಯ ಪಡೆಯೇ ನಿರ್ಮಾಣವಾಯಿತು.

ಅಂದಿನ ಸಂದರ್ಭದಲ್ಲಿ ಸ್ಪಂದಿಸಿದ ಕನ್ನಡ ಕವಿಗಳ ಸಂಖ್ಯೆಯೂ ಅಗಣಿತವೇ. ಒಂದು ಕಡೆ ನವೋದಯದ ನೂತನ ಸಾಹಿತ್ಯಿಕ ಚಳುವಳಿ, ಅದಕ್ಕೆ ಪೂರಕವಾದದ್ದು ಸ್ವಾತಂತ್ರ್ಯಾಂದೋಲನ. ಸಾಹಿತ್ಯದಲ್ಲಿ ಹೊಸ ಮಾರ್ಗ, ದೇಶದಲ್ಲಿ ನೆಲೆಯೂರಿದ ಆಂಗ್ಲರನ್ನು ಹೊಡೆದೋಡಿಸಿ ಸ್ವಾತಂತ್ರ್ಯ ಹೋರಾಟದ ಸತ್ಯಾಗ್ರಹದ ನೂತನ ಮಾರ್ಗ, ಇವೆರಡು ಜೊತೆ ಜೊತೆಗೆ ಸಾಗಿದ ಒಂದಕ್ಕೊಂದು ಭಾವಪೂರಕವಾದ ಕಾಲವಾಗಿತ್ತು. ಹೋರಾಟಕ್ಕೆ ಭಾರತೀಯರನ್ನು ಪ್ರೇರೇಪಿಸುವುದು ಆಗಿನ ಕವಿಗಳ ಕಾವ್ಯದ ಮೂಲ ಉದ್ದೇಶವಾಗಿತ್ತು. ನಮ್ಮ ನವೋದಯ ಕವಿಗಳಲ್ಲಿ ಪ್ರಮುಖರಾದವರು ಈ ಪ್ರಭಾವಿಕ ಕಾರ್ಯವನ್ನು ಮಾಡಿದ ಉಜ್ವಲ ರಾಷ್ಟ್ರಾಭಿಮಾನಿಗಳು. ಅಂದಿನ ಲೇಖಕರು ಸ್ವಾತಂತ್ರ್ಯದ ಅದಮ್ಯ ಅಭೀಪ್ಸೆಯನ್ನು, ದೇಶಪ್ರೇಮವನ್ನು ಮೂಲ ವಸ್ತುವನ್ನಾಗಿ ಮಾಡಿಕೊಂಡು ಅನನ್ಯವಾದ ಪದ್ಯಗಳನ್ನು ಬರೆದಿದ್ದಾರೆ. ಅವುಗಳಿಗೆ ಈಗಲೂ ಚಾರಿತ್ರಿಕ ಮಹತ್ವ ಇದ್ದೇ ಇದೆ. ಎಷ್ಟೋ ಮಂದಿ ಭಾರತೀಯರು ತಾಯ್ನೆಲದ ಸ್ವಾತಂತ್ರ್ಯಕ್ಕಾಗಿ ತಮ್ಮ ಪ್ರಾಣವನ್ನೇ ಬಲಿದಾನ ಮಾಡಿದರು. ನಮ್ಮ ಕರ್ನಾಟಕದ ವಿಧುರಾಶ್ವದಲ್ಲೂ ಗೋಲಿಬಾರ್ ಆಗಿ ಅನೇಕ ಜನರು ಪ್ರಾಣವನ್ನು ಕಳೆದುಕೊಳ್ಳುವಂತಾಯಿತು. ಭಾರತೀಯರ ಕಣ್ಣೀರು ಧಾರಾಕಾರವಾಗಿ ಹರಿದಾಗ ನಮ್ಮ ಕವಿಗಳು ಸುಮ್ಮನೆ ಕೂಡಲಿಲ್ಲ. ಆ ಸ್ವಾತಂತ್ರ್ಯ ವೀರರ ಚರಿತೆಗಳನ್ನು ಕಾವ್ಯದಲ್ಲಿ ಅಜರಾಮರಗೊಳಿಸಿದ್ದಾರೆ.

ಹೊಸಗನ್ನಡದ ನವೋದಯ ಕಾಲಘಟ್ಟದಲ್ಲಿ ನವೋದಯ ಸಾಹಿತಿಗಳು ತಮ್ಮ ಕಾವ್ಯಗಳಲ್ಲಿ ದೇಶಾಭಿಮಾನ, ರಾಷ್ಟ್ರದ ಹಿತಾಸಕ್ತಿ, ಕಾಳಜಿಯನ್ನು ಇಟ್ಟುಕೊಂಡು ಅಪ್ಪಟ ರಾಷ್ಟ್ರೀಯತೆಯನ್ನು ತೋರ್ಪಡಿಸಿದ್ದಾರೆ. ಇಂದಿನ ಭಾರತೀಯ ಪರಿಸರದಲ್ಲಿ ರಾಷ್ಟ್ರೀಯತೆ, ರಾಷ್ಟ್ರಪ್ರೇಮ, ನಾಡಭಕ್ತಿಯಲ್ಲಿ ರಾಷ್ಟ್ರಭಾಷೆಯ ಮತ್ತು ಮಾತೃಭಾಷೆಯ ಅಭಿಮಾನ ವ್ಯಕ್ತವಾಗಿದೆ. "ಭಾರತೀಯ ಸಂಸ್ಕೃತಿ ಧರ್ಮಗಳ ಪುನರುಜ್ಜಿವನ, ವಿದೇಶಿಯ ಹಾಗೂ ವೈಜ್ಞಾನಿಕ ಪ್ರಭಾವಗಳ ಘರ್ಷಣೆ, ಸಮನ್ವಯ ಜೀವನ ದರ್ಶನದ ಅರಿವು, ಆಚಾರ ಪ್ರೇರಣೆಯಲ್ಲಿ ಕಾಣಬರುತ್ತದೆ' 'ರಾಷ್ಟ್ರೀಯತೆ' ಮಾತ್ರವಲ್ಲದೆ ಈ ದೇಶದ ಮುಂದಾಳುತನ ಹಾಗೂ ಸ್ವಾತಂತ್ರ್ಯದ ಉತ್ಕಟ ಬಯಕೆ ಜನರಲ್ಲಿ ಹೊಸತನ ತಂದಿತು.ಗಾಂಧೀಜಿಯವರ ಮುಂದಾಳುತನ ಮತ್ತು ಉಜ್ವಲ ವ್ಯಕ್ತಿತ್ವ ಈ ದೇಶದ ಜನತೆಯ ಹೃದಯದಲ್ಲಿ ಸ್ವಾತಂತ್ರ್ಯ ಕಿಡಿಯನ್ನು ಹೊತ್ತಿಸಿತು. ಈ ಹೋರಾಟದ ಕಾಲದಲ್ಲಿ ಜನತೆಯನ್ನು ಪ್ರೇರೆಪಿಸಿದ ಸಾಹಿತಿಗಳ ಪಾತ್ರವೂ, ಹೋರಾಟದಿಂದ ಸ್ಫೂರ್ತಿಗೊಂಡ ಸಾಹಿತ್ಯಾಭಿವ್ಯಕ್ತಿಯೂ ಮಹತ್ವದ್ದಾಗಿದೆ.

'ರಾಷ್ಟ್ರ' ಎಂಬ ಪದ ಅತ್ಯಂತ ಪ್ರಾಚೀನವಾದುದಾದರೂ, ರಾಷ್ಟ್ರೀಯತೆಯ ಕಲ್ಪನೆ ಮಾತ್ರ ಆಧುನಿಕವಾದದು. ಸ್ವಾತಂತ್ರ್ಯ ಪೂರ್ವದಲ್ಲಿ 'ರಾಷ್ಟ್ರೀಯತೆ' ಎಂಬ ಹೆಸರು ರಾಜಭಕ್ತಿಯ ಹೆಸರಿನಲ್ಲಿ ಪರಿಚಯವಾಗಿದೆ. ಸ್ವಾತಂತ್ರ್ಯ ಸಂಪಾದನೆಯೊಂದಿಗೆ ಪರಿಚಿತವಾದ "ರಾಜಭಕ್ತಿ" ರಾಷ್ಟ್ರೀಯತೆಯಾಗಿ ರೂಪಾಂತರ ಹೊಂದಿತು. ವಾಸ್ತವವಾಗಿ ರಾಷ್ಟ್ರವು "ರಾಷ್ಟ್ರೀಯತೆ" ಎಂಬ ವಿಶಿಷ್ಟ ಅರ್ಥ ಪಡೆದುಕೊಂಡಿದ್ದು, "ರಾಷ್ಟ್ರೀಯ ಚಳುವಳಿ" ಎಂದು ಕರೆಯಿಸಿಕೊಂಡ ಸ್ವಾತಂತ್ರ್ಯ ಸಂಗ್ರಾಮಕಾಲದಲ್ಲಿ "ರಾಷ್ಟ್ರೀಯತೆ" ಎಂದಾಗ ಸಂದರ್ಭದ ಮಹಿಮೆಯಿಂದ ದೇಶಭಕ್ತಿ ಮೂಲವಾದ ಆವೇಶ ಆದರ್ಶಗಳನ್ನು ಕುರಿತೆಂದು ಭಾವಿಸಿದರೂ ವಿಶಾಲವಾದ ಅರ್ಥದಲ್ಲಿ ಅದನ್ನು ನೋಡುವುದಾದರೆ ರಾಷ್ಟ್ರವನ್ನು ಕುರಿತು ದೇಶಪ್ರೇಮ ಮೂಲವಾದ ಆರಾಧನೆ ಎನ್ನಬಹುದು.

ಬಂಕೀಮಚಂದ್ರ ಚಟರ್ಜಿಯವರ 'ವಂದೇ ಮಾತರಂ' ಮತ್ತು ರವೀಂದ್ರನಾಥ ಠಾಗೋರರ "ಜನಗಣಮನ" ನಮ್ಮ ರಾಷ್ಟ್ರಗೀತೆಗಳೆಂದು ಭಾರತದೇಶ ಸರ್ವಾನುಮತದಿಂದ ಒಪ್ಪಿಕೊಂಡುದುದು ದೇಶಪ್ರೇಮದ ಆಳ ಅಗಲಕ್ಕೆ ಸೂಚನೆಯೆನಿಸಿದೆ. ರಾಷ್ಟ್ರಪ್ರಜ್ಞೆ ಇಂದು ನಮ್ಮೆಲ್ಲರ ಸ್ವಪ್ರಜ್ಞೆಯ ಅಂಶವೆನಿಸಿದ್ದು ಚಿರಂತನ ಸತ್ಯ "ಮರಿದುಂಬಿಯಾಗಿ ಮೇಣ್ ಕೋಗಿಲೆಚಿಯಾಗಿ ಹುಟ್ಟುವುದು ನಂದನದೊಳ್ ಬನವಾಸಿ ದೇಶದೊಳ್" ಕವಿ ಪಂಪನ ಅಂತರಂಗದ ನಲ್ನುಡಿ ನಮ್ಮ ಅಂತಃಕರಣದ ಎಳೆಯೆನಿಸಿದೆ. 'ಪಂಜಾಬ ಸಿಂಧ ಗುಜರಾತ ಮರಾಠಾ ದ್ರಾವಿಡ ಉತ್ಕಲವಂಗ" ಒಂದೊಂದು ಪದಗಳೂ ಮೈಜುಂವೆನಿಸುವ ತಾರಕಮಂತ್ರಗಳಾಗಿವೆ. 'ಕದಂಬಾರಿ ಸಂಪೂಚಿತ ಚರಣೆ । ಗಂಗಾರಾಧಿಪ ಪದನಖ ಸರಣೆ: ಎಂಬ ಶಾಂತಕವಿಗಳ ಕರ್ನಾಟಕ ದೇಶಪ್ರೇಮದ ಅರಿವು ಪ್ರತಿಯೋರ್ವರ ಮನದಾಳದಲ್ಲಿ ನೆಲೆಹಿತ ಉತ್ಕಟವಾದ ಪ್ರಜ್ಞೆ, ದೇಶಪ್ರೇಮದ ಭಾವನೆಯನ್ನು ಇನ್ನಷ್ಟು ಆಳವಾಗಿಸುವಲ್ಲಿ ಸಹಾಯ ಮಾಡಿದೆ.

ನವೋದಯ ಸಾಹಿತ್ಯ ಸಂದರ್ಭದಲ್ಲಿ ಯಾವಾಗ ಮಹಾತ್ಮಾಗಾಂಧೀಜಿಯವರ ಉಜ್ವಲವ್ಯಕ್ತಿತ್ವ ಈ ರಾಷ್ಟ್ರದ ಜನತೆಯ ಹೃದಯದಲ್ಲಿ ಸ್ವಾತಂತ್ರ್ಯದ ಕಿಚ್ಚನ್ನು ಹೊತ್ತಿಸಿತೊ; ಆಗ ಆಯಾ ರಾಜ್ಯದ ಜನತೆಯ ರಾಜಭಕ್ತಿ ಮೊಟ್ಟ ಮೊದಲಿಗೆ ನಿಜವಾದ ಅರ್ಥದಲ್ಲಿ "ರಾಷ್ಟ್ರಪ್ರೇಮ"ವಾಗಿ ಪರಿವರ್ತನೆಯಾಯಿತು. ಮಹಾತ್ಮಾ ಗಾಂಧೀಜಿಯವರ ಮುಂದಾಳುತನದಲ್ಲಿ ಈ ಮಣ್ಣಿನ ಕಣಗಳು ಸಿಡಿಲಾಗಿ ಸಿಡಿದವು. ಹುಲ್ಲುಕಡ್ಡಿಯೂ ಬ್ರಹ್ಮಾಸ್ತ್ರವಾಗಿ ನಿಂತಂತೆ ಪರಕೀಯ ಪ್ರಭುತ್ವದ ವಿರುದ್ಧವಾಗಿ ಸುಮಾರು ಮೂರು ದಶಕಗಳ ಕಾಲ ನಡೆಯಿಸಿದ ಆ ರೋಮಾಂಚನಕಾರಿಯಾದ ಸಾಹಸ ಇಂದು ನಮ್ಮ ಪಾಲಿಗೆ ಕೇವಲ ಒಂದು ನೆನಪಾಗಿದೆ. ಮಕ್ಕಳ ಪಾಲಿಗೆ ಕಥೆಯಾಗಿದೆ.

ವ್ಯಾಪಾರಕ್ಕೆಂದು ಭಾರತಕ್ಕೆ ಬಂದ ಬ್ರಿಟೀಷರು ಹಂತ-ಹಂತವಾಗಿ ಭಾರತದ ರಾಜಕೀಯ ಚುಕ್ಕಾಣಿಯನ್ನೇ ಹಿಡಿದುಕೊಂಡರು. ಈ ಪರಕೀಯ ಆಳ್ವಿಕೆಯನ್ನು ಕೊನೆಗಾಣಿಸಲು ಭಾರತೀಯರು

ಹಲವಾರು ವಿಧವಾದ ಹೋರಾಟಗಳನ್ನು ಹಮ್ಮಿಕೊಂಡರು. ಈ ಹೋರಾಟ ಕುರಿತು ಬಿಪಿನ್‌ಚಂದ್ರರು– "ಭಾರತೀಯ ರಾಷ್ಟ್ರೀಯ ಹೋರಾಟ ನಿಸ್ಸಂದೇಹವಾಗಿ ಆಧುನಿಕ ಸಮಾಜ ಕಂಡಿರುವ ಅತ್ಯಂತ ಮಹತ್ವದ ಚಳುವಳಿಗಳಲ್ಲಿ ಒಂದಾಗಿತ್ತು. ಎಲ್ಲ ವರ್ಗಗಳ ಹಾಗೂ ವಿಚಾರಧಾರೆಗಳ ಜನರನ್ನು ರಾಜಕೀಯ ಕ್ರಿಯೆಗಿಳಿಸಿ ಒಂದು ಶಕ್ತಿಶಾಲಿ ವಸಾಹತುಶಾಹಿ ಸಾಮ್ರಾಜ್ಯವನ್ನು ಮಣ್ಣು ಮುಕ್ಕಿಸಿದ ಚಳುವಳಿ ಅದಾಗಿತ್ತು"(ಚಂದ್ರ ಬಿಪಿನ್, ೧೮೫೭,೧೯೪೭, ಪುಟ–೧೩) ಎಂದು ಅಭಿಪ್ರಾಯಪಡುತ್ತಾರೆ.

**೪.೧. ರಾಷ್ಟ್ರೀಯತೆಯ ಪರಿಕಲ್ಪನೆ ಮತ್ತು ವ್ಯಾಖ್ಯೆಗಳು:**

*** ರಾಷ್ಟ್ರೀಯತೆ ಪದದ ಅರ್ಥ:**

'Nation' ಎಂಬುದಕ್ಕೆ ಸಂವಾದಿಯಾಗಿ 'ರಾಷ್ಟ್ರ'–ಎಂಬ ಪದವನ್ನು ರೂಪಿಸಿಕೊಂಡಂತೆ 'Nationality' ಎಂಬುದಕ್ಕೆ ಸಂವಾದಿಯಾಗಿ 'ರಾಷ್ಟ್ರೀಯತೆ' ಎಂಬ ಪದವನ್ನು ರೂಪಿಸಿಕೊಳ್ಳಲಾಗಿದೆ. ಈ Nationality' ಎಂಬುದಕ್ಕೆ ಮೂಲ 'ನೇಟಸ್' ಎಂಬ ಲ್ಯಾಟಿನ್ ಪದ, ನೇಟಸ್–ಎಂದರೆ ಹುಟ್ಟು ಅಥವಾ ಬುಡಕಟ್ಟು ಎಂದು ಅರ್ಥ. ಅಂದರೆ ಒಂದೇ ಜನಾಂಗಕ್ಕೆ ಸೇರಿದವರೆಲ್ಲಾ ಒಂದೇ ರಾಷ್ಟ್ರೀಯತೆಯನ್ನು ಹೊಂದಿರುತ್ತಾರೆ ಎಂದು ಅರ್ಥ Nationality' ಅಥವಾ ರಾಷ್ಟ್ರೀಯತೆ' ಪದಗಳನ್ನು ಹಲವಾರು ಶಬ್ದಕೋಶಗಳು ಹೀಗೆ ಅರ್ಥಸಿವೆ.

"A Standard Dictionary of English Language" ನಲ್ಲಿ Nationality" ಎಂಬುದಕ್ಕೆ ಹಲವಾರು ಅರ್ಥಗಳನ್ನು ಹೇಳಲಾಗಿದ್ದು ಅದರಲ್ಲಿ ಪ್ರಮುಖವಾದವುಗಳು ಹೀಗಿವೆ"(Funk & wag (ಸಂ)೧೯೪೯,ಪುಟ–೧೬೫೨)

೧. Attatchment on Patriotic Devotion to one's own nation: Patriotism: Nationalism: as Zionism is the expression of Jewish nationality.

(ಸ್ವರಾಷ್ಟ್ರದ ಬಗ್ಗೆ ಅಕ್ಕರೆ, ಪ್ರೀತಿ, ಮೋಹ, ಪ್ರೇಮ, ಅಥವಾ ಸ್ವದೇಶಾಭಿಮಾನ, ದೇಶಭಕ್ತಿ, ದೇಶಪ್ರೇಮ, ರಾಷ್ಟ್ರೀಯವಾದ ಪ್ಯಾಲಿಸ್ತೇನ ರಾಷ್ಟ್ರ ನಿರ್ಮಾಣದಲ್ಲಿ ಯಹೂದಿಯರು ಅಭಿವ್ಯಕ್ತಪಡಿಸಿದ ರಾಷ್ಟ್ರೀಯತೆಯ ಹಾಗೆ).

೨. A People Possessing national independence and unity nation: race, also a people united by a Common religion tradition's Language, or Political aspirations.

(ಜನ ರಾಷ್ಟ್ರದ ಸ್ವಾತಂತ್ರ್ಯ ಮತ್ತು ರಾಷ್ಟ್ರದ ಐಕ್ಯತೆಯನ್ನು ಬಯಸುವುದು, ಹೊಂದುವುದು, ಅನುಭೋಗಿಸುವುದು. ಒಂದು ಜನಾಂಗ ಹಾಗೂ ಒಂದು ಜನಾಂಗ ಪರಂಪರೆ, ಭಾಷೆ, ಧರ್ಮಗಳಿಂದ ಏಕತೆ ಹೊಂದುವ ರಾಜಕೀಯ ಹೆಬ್ಬಯಕೆ)

ಕಿಟಲ್ ಡಿಕ್ಷನರಿಯಲ್ಲಿ 'ರಾಷ್ಟ್ರೀಯ' (Rastreeya) ಎಂಬುದಕ್ಕೆ Belonging on relating to a Kingdom (ರಾಜ್ಯಕ್ಕೆ ಸಂಬಂಧಿಸಿರುವಿಕೆ)" (Rev. F. Kittle, ೧೯೮೪,ಪುಟ-೧೩೪೧)ಎಂದು ಅರ್ಥ ಹೇಳಲಾಗಿದೆ.

-ಹೀಗೆ ಹಲವಾರು ಶಬ್ದಕೋಶಗಳು ಹಲವಾರು ರೀತಿಯಲ್ಲಿ ಅರ್ಥೈಸಿದ್ದರೂ ಅದರ ತಿರುಳು ಮಾತ್ರ ಒಂದೇಯಾಗಿದ್ದು, Nationality' ಅಥವಾ 'ರಾಷ್ಟ್ರೀಯತೆ' ಎಂದರೆ ರಾಷ್ಟ್ರಕ್ಕೆ ಸಂಬಂಧಿಸಿದುದಾಗಿದೆ.

**ರಾಷ್ಟ್ರೀಯತೆಯ ವ್ಯಾಖ್ಯೆಗಳು:**

ರಾಷ್ಟ್ರೀಯತೆಯನ್ನು ಕುರಿತು ಹಲವಾರು ರಾಜ್ಯಶಾಸ್ತ್ರಜ್ಞರು ವಿದ್ವಾಂಸರು, ದಾರ್ಶನಿಕರು, ತಮ್ಮದೇ ಆದ ಅಭಿಪ್ರಾಯದಲ್ಲಿ ವ್ಯಾಖ್ಯಾನಿಸಿದ್ದಾರೆ.ಅವುಗಳಲ್ಲಿ ಪ್ರಮುಖವಾದವುಗಳನ್ನು ನೋಡಬಹುದಾಗಿದೆ.

೧. **ಹ್ಯಾನ್ಸ ಕೊಹನ್ನರ:** ರಾಷ್ಟ್ರೀಯತೆಯು ಪ್ರಾಥಮಿಕವಾಗಿ ಒಂದು ಮನೋಸ್ಥಿತಿ ಒಂದು ಪ್ರಜ್ಞಾಪೂರ್ವಕ ಕ್ರೀಯೆ."(ಎ.ಟಿ. ಪಾಟೀಲ, (ಸಂ): ೨೦೦೦, ಪುಟ-೭೮.)

೨. **ಪಾಮರ ಮತ್ತು ಪರ್ಕಿನ್ಸ:** "ರಾಷ್ಟ್ರದರ್ಶನವೆಂಬುದು ಲಾಭ-ನಷ್ಟಗಳ ಭಾವನೆಯಿಂದ ಸ್ವಲ್ಪಮಟ್ಟಿಗೆ ಪ್ರೇರಿತವಾಗಿದ್ದರೂ ಒಂದು ರಾಜ್ಯದ ಜನವನ್ನು ಸಂಘಟಿಸಿ ಅವರನ್ನು ರಾಷ್ಟ್ರೀಯ ಹಿತಾಸಕ್ತಿಗಳೆಂದು ಪರಿಗಣಿಸುವ ವಿಷಯಗಳಿಗಾಗಿ ಪಣತೊಟ್ಟು ಹೋರಾಡುವಂತ ಇಚ್ಚೆಯನ್ನುಂಟು ಮಾಡುವ ಒಂದು ಮನೋಬಲ ಅಥವಾ ಆತ್ಮಬಲ"(ಎ.ಟಿ. ಪಾಟೀಲ, (ಸಂ): ದಿಕ್ಸೂಚಿ ಮಾಸಪತ್ರಿಕೆ ೨೦೦೦, ಪುಟ-೭೮.)

೩. **ಅರವಿಂದರು:** "ದೇಶವೇ ರಾಷ್ಟ್ರೀಯತ್ವದ ಪ್ರತಿಷ್ಠಾನ ಭೂಮಿ, ತಮ್ಮ ದೇಶದ ಗೌರವದಲ್ಲಿ ತಮ್ಮ ಗೌರವವಿದೆ, ತಮ್ಮ ದೇಶಬಾಂಧವರ ಉನ್ನತಿಯಲ್ಲಿ ತಮ್ಮ ಉನ್ನತಿಯಿದೆ-ಎಂಬ ಕರ್ತವ್ಯ ಬುದ್ಧಿಯು ರಾಷ್ಟ್ರೀಯತೆಯ ಕುರುಹು:"(ಶಿವಾನಂದ ಗುಬ್ಬಣ್ಣವರ, ೧೯೯೧, ಪುಟ-೨೬) ಎಂದು ಅಭಿಪ್ರಾಯಪಟ್ಟಿದ್ದಾರೆ.

೪. **ಎ.ಎಸ್. ನಂಜುಂಡಸ್ವಾಮಿ:"** ತಮಗೂ ಒಂದು ರಾಷ್ಟ್ರೀಯತ್ವವಿದೆ. ತಾವು ಒಂದು ರಾಷ್ಟ್ರಕ್ಕೆ ಸೇರಿದವರು-ಎಂಬ ಭಾವನೆ ಜನರಲ್ಲಿ ಎಂದು ಮೊಳೆಯುವುದೋ? ಅಂದೇ ರಾಷ್ಟ್ರೀಯತೆ ಅಂಕುರಿಸುವದು"(ಶಿವಾನಂದ ಗುಬ್ಬಣ್ಣವರ, ೧೯೯೧, ಪುಟ-೨೫)

೫. **ನೆಹರೂರವರು:** ರಾಷ್ಟ್ರೀಯ ಭಾವನೆಯು ಸಾಮೂಹಿಕವಾಗಿ ನಮ್ಮ ಸಾಧನೆ, ಸಂಪ್ರದಾಯ, ಸಂಸ್ಕೃತಿ, ಅನುಭವಗಳ ಗತಕಾಲದ ನೆನಪಿನ ಸಂಕೇತವಾಗಿದ್ದು, ಐಕ್ಯತೆಯ ದ್ಯೋತಕವಾಗಿವೆ" ಎಂದು ಹೇಳಿದ್ದಾರೆ.

**ನೆಹರೂರವರು ಹೇಳಿದ ರಾಷ್ಟ್ರೀಯತೆಯ ಮುಖ್ಯಲಕ್ಷಣಗಳು ಹೀಗಿವೆ:**

೧) ಧಾರ್ಮಿಕ ಸಂಕುಚಿತ ದೃಷ್ಟಿಯಿಂದ ಮುಕ್ತವಾದುದು.

೨) ವಿದೇಶಿಯರ ಪ್ರಭುತ್ವಕ್ಕೆ ವಿರೋಧವಾದುದು.

೩) ಗತಕಾಲದ ಸಾಧನೆ, ಸಂಪ್ರದಾಯ, ಅನುಭವ ರೂಢಿ, ಸಂಪ್ರದಾಯಗಳ ಜ್ಞಾಪಕ ಶಕ್ತಿಯಾಗಿದೆ.

೪) ರಾಷ್ಟ್ರೀಯತ್ವವು ರಾಷ್ಟ್ರದ ಏಕತೆ. ಸಮಗ್ರತೆ, ಭದ್ರತೆಯ ಪ್ರತಿಕವಾದುದು.

೫) ಹಿಂದೂ ರಾಷ್ಟ್ರೀಯವಾದ ಅಥವಾ ಮುಸ್ಲಿಂ ರಾಷ್ಟ್ರೀಯವಾದ ಎಂಬುದಕ್ಕೆ ಬದಲಾಗಿ ಭಾರತೀಯ ರಾಷ್ಟ್ರೀಯವಾದವನ್ನು ಪ್ರತಿಪಾದಿಸಿದ್ದರು. ಹಾಗೂ ಭಾರತೀಯ ರಾಷ್ಟ್ರೀಯ ವಾದವಿರಬೇಕು-ಎಂದಿದ್ದಾರೆ.

ಒಟ್ಟಿನಲ್ಲಿ ರಾಷ್ಟ್ರದ ಹಿತ, ರಾಷ್ಟ್ರದ ಒಗ್ಗಟ್ಟು ಮತ್ತು ರಾಷ್ಟ್ರದ ಸ್ವಾತಂತ್ರ್ಯದ ಬಗ್ಗೆ ಆಸಕ್ತಿಯನ್ನು ಹೊಂದಿರುವುದೇ ರಾಷ್ಟ್ರೀಯತೆ.ಲೆನಿನ್ನರು 'ಪಾಶ್ಚಾತ್ಯ ನಾಡುಗಳಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆ ಎಂಬ ಕೃತಿಯಲ್ಲಿ 'ರಾಷ್ಟ್ರೀಯತೆ' ಎನ್ನುವರು. "ಬಂಡವಾಳಶಾಹಿಯ ಚಾರಿತ್ರಿಕ ಘಟ್ಟದ ಸೃಷ್ಟಿ" ಎಂದು ವಿವರಿಸಿದ್ದಾರೆ ಗಾಂಧೀಜಿ ಚಿಂತಿಸಿದ, ಕಲ್ಪಿಸಿದ, ಭಾರತದ ಸತ್ವ ಮತ್ತು ರೂಪ ಬೇರೆ. ಹಿಂದೂ ರಾಷ್ಟ್ರೀಯವಾದಿಗಳು ಕಲ್ಪಿಸಿದ ರಾಷ್ಟ್ರದ ಸತ್ವ ಮತ್ತು ರೂಪ ಬೇರೆ ಹಿಂದೂ ರಾಷ್ಟ್ರೀಯವಾದಿ ವಿವೇಕಾನಂದ, ತಿಲಕ್-ಮುಂತಾದ ರಾಷ್ಟ್ರೀಯ ನಾಯಕರು ಕಂಡದ್ದು ವೀರವತ್ತಾದ ಭಾರತವನ್ನು ಆಗ ಪಾಶ್ಚಾತ್ಯರು ತಿಳಿದುಕೊಂಡದ್ದು ವೀರವತ್ತಾದ ಶೌರ್ಯಾಧಾರಿತ ರಾಜಕಾರಣದ ಪರಿಭಾಷೆಯ ರಾಷ್ಟ್ರ ಆದರೆ ಗಾಂಧೀಜಿಯವರ ರಾಷ್ಟ್ರ ಕಲ್ಪನೆಯಂತೆ, ಅಹಿಂಸೆ ಭಾರತೀಯ ಸಂಸ್ಕೃತಿಯ ಪರಮಮೌಲ್ಯ, ಅಹಿಂಸೆ ಎನ್ನುವುದು ಇಲ್ಲಿ ಶ್ರೇಷ್ಠ ಮೌಲ್ಯ, ತಿಲಕರು ವಿವೇಕಾನಂದರು ನಮ್ಮ ರಾಷ್ಟ್ರದ ಸ್ವರೂಪದ ಬಗ್ಗೆ ಕನಸು ಕಂಡವರು, ವಿವರಿಸಿದವರು. ಆದರೆ ಅವರೆಲ್ಲರೂ ಕಂಡದ್ದು, ಆಲೋಚಿಸಿದ್ದು, ಕ್ಷಾತ್ರ ತೇಜಸ್ಸಿನ ಭಾರತವನ್ನು ಶ್ರೀರಾಮಕೃಷ್ಣ ಪರಮಹಂಸರು ಕಂಡಿದ್ದು ಅನುಭಾವಿಯ ಭಾರತವನ್ನು ಡಾ॥ ಅಂಬೇಡ್ಕರವರ ಭಾರತವನ್ನು ಸಮಾಜವೆಂದು ಬಗೆದರು; ಮೇಲ್ವರ್ಗದವರು ಕೆಳವರ್ಗದವರರನ್ನು ಆಳುವುದೇ ರಾಷ್ಟ್ರೀಯತೆಯ ಹೊಂಚು" ಎಂದರು.

ಹೊಸಗನ್ನಡ ಕಾವ್ಯವು ಕಳೆದ ಅರ್ಧ ಶತಕದಲ್ಲಿ ಜಗತ್ತನ್ನೇ ಅಲುಗಿಸಿ ಅಲ್ಲೋಲ ಕಲ್ಲೋಲ ಮಾಡಿದ ಹೊಸ ಜೀವನದ ವಾಣಿಯಾಗಿದೆ. ಭಾರತದಲ್ಲೆಲ್ಲ ಅಭೂತಪೂರ್ವವಾದ ಒಂದು ರಾಷ್ಟ್ರೀಯ ಭಾವನೆ ಈಗ ನೆಲೆಗೊಳ್ಳುತ್ತಲಿದೆ. ಕರ್ನಾಟಕದಲ್ಲಿ ಅದಕ್ಕೊಂದು ವೈಶಿಷ್ಟ್ಯವು ಪೋಷಕವಾಗಿ ರೂಪ ಹೊಂದುತ್ತಲಿದೆ ಭಾರತದ ಪುನರುದ್ಧಾರ ಕರ್ನಾಟಕದ ಪುನರುಜ್ಜಿವನ ಎಂಬೆರೆಡು ಭಾವನೆಗಳು ಬೆರೆತೊಂದು ಮಹಾಭಾವನೆಯ ಸ್ಫೂರ್ತಿ ಇಂದಿನ ಕವಿಗಳಲ್ಲಿ ನಾಟ್ಯವಾಡುತ್ತಿದೆ. ಇದು ಕನ್ನಡ ನಾಡು ನುಡಿಗಳ ಇತಿಹಾಸದಲ್ಲಿಯೇ ಹೊಚ್ಚ ಹೊಸ ಸಂಗತಿ. ಇಂದು ರಾಷ್ಟ್ರಪ್ರೇಮವೂ ರಾಜಭಕ್ತಿಯೂ ನಿಯತವಾಗಿ ಕೂಡಿ ಇಲ್ಲ ರಾಷ್ಟ್ರವೇ ಇಂದಿನ ರಾಜ. ಜನವೇ ಜನಾರ್ಧನ ಇಂಥ ಭಾವನೆಯ ಪ್ರಸಾರಕ್ಕೆ ಭರತಭೂಮಿಯ ಮುಕ್ತಿಗಾಗಿ ನಡೆದ ಆಂದೋಲನವೂ ಪ್ರೇರಕವಾಯಿತು.

'ರಾಷ್ಟ್ರೀಯತೆ' ಪದವನ್ನು ನಿಖರವಾಗಿ ಅರ್ಥೈಸುವುದು ಮತ್ತು ವ್ಯಾಖ್ಯಾನಿಸುವುದು ಇಂದಿಗೂ ತೀರ ಕಷ್ಟದ ಕೆಲಸವಾಗಿ ಉಳಿದಿದೆ. ಅಷ್ಟೇ ಅಲ್ಲದೆ, ಆಧುನಿಕ ಸಮಾಜ ವಿಜ್ಞಾನಿಗಳ ಮುಂದೆ ಸವಾಲಾಗಿಯೇ ನಿಂತಿದೆ.

ಒಟ್ಟಿನಲ್ಲಿ ರಾಷ್ಟ್ರೀಯತೆ ಬೆಳವಣಿಗೆಗೆ ಪ್ರೇರಕವಾದ ಮೂಲಭೂತ ಅಂಶಗಳಾದ ಪ್ರಾಂತ, ಭಾಷೆ, ಜನಾಂಗ ಮುಂತಾದ ಯಾವುದೇ ಅಂಶಗಳು ಏಕಪ್ರಕಾರವಾಗಿ ಭಾರತದಲ್ಲಿ ಇಲ್ಲದಿದ್ದರೂ, ಭಾರತೀಯರಲ್ಲಿ ರಾಷ್ಟ್ರೀಯತೆ ಹೊರ ಹೊಮ್ಮಿತು. ರಾಷ್ಟ್ರೀಯತೆಯೆಂಬುದು ಈ ಹಿಂದೆ ಚರ್ಚಿಸಿದಂತೆ 'ಮನಃಸ್ಥಿತಿಯಾಗಿದೆ ಎಂಬುದು ಭಾರತದಲ್ಲಿ ಅಕ್ಷರಶಃ ಒಪ್ಪುವ ಮಾತು.

ಠಾಕೂರ್‌ವರು ದಾರ್ಶನಿಕವಾಗಿ ಏನನ್ನು ಹುಡುಕುತ್ತಿದ್ದರೋ ಅದು ಅವರಿಗೆ ಸಿಗಲಿಲ್ಲ. ಅದು ಗಾಂಧೀಜೀಯವರಿಗೆ ಅವರ ಆಚಾರ ವಿಧಾನದಲ್ಲಿಯೇ ಸಿಕ್ಕುಬಿಟ್ಟಿತು. ಗಾಂಧೀಜಿಯವರು ಏಕಕಾಲದಲ್ಲಿಯೇ ಭಾರತವನ್ನು ರಾಷ್ಟ್ರವಾಗಿಯೂ ಸಮಾಜವಾಗಿಯೂ ಕಂಡರು. ರಾಷ್ಟ್ರೀಯತೆಯ ಭಾವೈಕ್ಯತೆಯ ನೆಲೆಯಾಗಿ ಜನರೆಲ್ಲರನ್ನು ಒಟ್ಟು ಮಾಡಿದರು. ತಿಲಕರು ಕಂಡ ಕ್ಷಾತ್ರ ತೇಜಸ್ಸಿನ ಭಾರತದ ಇತಿಹಾಸ ಪ್ರಾರಂಭವಾಗುವುದು ಛತ್ರಪತಿ ಶಿವಾಜಿಯಿಂದ ಆದರೆ ಗಾಂಧೀಜಿಯವರಿಗೆ 'ಭಾರತ'ಎಂದರೆ ಸಾವಿರಾರು ವರ್ಷಗಳ ಇತಿಹಾಸವಿರುವ ಹಲವಾರು ವೈಶಿಷ್ಟ್ಯಗಳ ಸಂಘರ್ಷಗಳ ಕ್ಷಾತ್ರ, ವರ್ಗ-ವರ್ಗಗಳ ನಡುವಿನ ಸಂಘರ್ಷನೆಯ ಪ್ರದೇಶ. ಗಾಂಧೀಜಿಯವರ ನಂತರ ನೆಹರು ಯುಗದಲ್ಲಿ ರೂಪುಗೊಂಡಿದ್ದು ತಿಲಕರಕ್ಷಾತ್ರ ತೇಜಸ್ಸಿನ ರಾಷ್ಟ್ರವೇ ಹೊರತು, ಗಾಂಧೀಜಿಯವರು ಕಂಡುಕೊಂಡ ಸ್ವರೂಪದ್ದಲ್ಲ. ಆದರೆ ಇಂದು ನಮಗೆ ತಿಲಕರು ಕಂಡ ಕ್ಷಾತ್ರ ತೇಜಸ್ಸಿನ ಭಾರತಕ್ಕಿಂತಲೂ ಗಾಂಧೀಜಿಯವರು ಕಂಡ ಧರ್ಮನಿಷ್ಠ ಭಾರತವೇ ಅವಶ್ಯವಾಗಿದೆ.

ಧರ್ಮಶ್ರದ್ಧೆ ಇಲ್ಲದೆಯೇ ರಾಷ್ಟ್ರೀಯ ಮನೋಭಾವ ಮೂಡಲು ಸಾಧ್ಯವಿಲ್ಲ. ಭಾರತದ ಪ್ರಾಚೀನ ಮತ್ತು ಮಧ್ಯಕಾಲೀನ ಧಾರ್ಮಿಕ ಚಳುವಳಿಯ ಮುಖಂಡರಾದ ಶಂಕರಾಚಾರ್ಯ,

ಮಧ್ವಾಚಾರ್ಯ, ರಾಮಾನುಜಾಚಾರ್ಯ, ಬಸವಣ್ಣ, ಅಕ್ಕಮಹಾದೇವಿ, ಅಲ್ಲಮ ತುಕಾರಾಂ, ಕಬೀರ, ಗುರುನಾನಕ್ ಮುಂತಾದವರೆಲ್ಲರೂ ಭಕ್ತಿಯ ಮೂಲಕ, ಧರ್ಮಶ್ರದ್ಧೆಯ ಮೂಲಕ ವ್ಯಕ್ತಿಯ ನೈತಿಕತೆ ಹೆಚ್ಚುವ ಭಾರತೀಯತೆಗೆ ಒತ್ತು ಕೊಟ್ಟರು. ಭಾರತದ ರಾಷ್ಟ್ರವಾದಿಗಳ, ಸಮಾಜ ಸುಧಾರಕರ, ಧಾರ್ಮಿಕ ವ್ಯಕ್ತಿಗಳ ಹಾಗೂ ಸಾಹಿತಿಗಳ ವಿಚಾರ ಧಾರೆಗಳು. ಕೂಡಿದಾಗ ಒಂದು ಬಗೆಯ ಸಾಂಸ್ಕೃತಿಕ ರಾಷ್ಟ್ರೀಯತೆ ರೂಪುಗೊಳ್ಳುತ್ತದೆ.

ಸಾಮಾನ್ಯವಾಗಿ ಸಾಹಿತ್ಯದ ಹಿನ್ನೆಲ್ಲೆಯಲ್ಲಿ 'ರಾಷ್ಟ್ರೀಯತೆ' ಎಂದರೆ 'ದೇಶಭಕ್ತಿ' ಮೂಲವಾದ ಆದರ್ಶ, ಆವೇಶ–ಎಂಬ ಅರ್ಥ ಬರಲು ಕಾರಣವೆಂದರೆ, ಸ್ವಾತಂತ್ರ್ಯ ಚಳುವಳಿಯ ಸಂದರ್ಭದಮಹಿಮೆಯಿಂದ ಬಂದಿದೆ. ಇನ್ನು ಮುಂದುವರೆದು ಇದನ್ನು ಎರಡು ರೀತಿಯಿಂದ ಅರ್ಥೈಸಬಹುದು. ಒಂದು: ರಾಷ್ಟ್ರವನ್ನು ಕುರಿತ ದೇಶಪ್ರೇಮ ಮೂಲವಾದ ಆರಾಧನೆಯ ಆವೇಶದ, ಭಾವೈಕ್ಯತೆ ಇತ್ಯಾದಿ. ಎರಡು: ಸಮಗ್ರ ರಾಷ್ಟ್ರದ ಆಶೋತ್ತರಗಳು, ಸಂಸ್ಕೃತಿಮೌಲ್ಯಗಳನ್ನು ಕುರಿತು.

ಒಟ್ಟಿನಲ್ಲಿ ಸಾಹಿತ್ಯದಲ್ಲಿ "ರಾಷ್ಟ್ರೀಯತೆ"–ಎಂದರೆ, ನಾಡು ನುಡಿ, ದೇಶ, ಧರ್ಮ, ಸಂಸ್ಕೃತಿ, ಚರಿತ್ರೆ, ರಾಷ್ಟ್ರನಿರ್ಮಾಣದಲ್ಲಿ ಪ್ರಮುಖಪಾತ್ರವಹಿಸಿದ ನಾಯಕರ ಬಗೆಗೆ ಅನನ್ಯವಾದ ಅಭಿಮಾನವನ್ನು ಸಾಹಿತ್ಯದಲ್ಲಿ ಅಭಿವ್ಯಕ್ತಪಡಿಸುವದಾಗಿದೆ. ಈ ರೀತಿಯ ಆಧುನಿಕ ಪರಿಭಾಷೆಯ ರಾಷ್ಟ್ರೀಯತೆಯು ಆಧುನಿಕ ಭಾರತೀಯ ಸಾಹಿತ್ಯದಲ್ಲಿ ಮೂಡಿ ಬಂದಿದೆ. ಬಂಗಾಲಿ, ಮರಾಠಿ, ಗುಜರಾತಿ, ಹಿಂದಿ–ಮುಂತಾದ ಉತ್ತರ ಭಾರತದ ಭಾಷಾ ಸಾಹಿತ್ಯಗಳಲ್ಲಿ ಅಭಿವ್ಯಕ್ತವಾಗಿದೆ. ರವೀಂದ್ರನಾಥ ಠ್ಯಾಗೋರ, ಬಂಕಿಮಚಂದ್ರ ಚಟರ್ಜಿ, ರಾಜಾರಾಮ ಮೋಹನರಾಯ, ಗೋಖಲೆ, ಬಾಲಗಂಗಾಧರ ಟಿಳಕ, ಬಾಬಾ ಆಮ್ಟೆ, ಅರವಿಂದ ಘೋಷ, ವಿವೇಕಾನಂದ, ಗಾಂಧೀಜಿ, ನೆಹರು–ಮೊದಲಾದವರು ತಮ್ಮ ಪತ್ರಿಕೆ, ಲೇಖನ, ಕೃತಿಗಳ ಮೂಲಕ ಅಭಿವ್ಯಕ್ತಪಡಿಸಿ ಪರಂಪರೆಯನ್ನು ಹಾಕಿ ಕೊಟ್ಟರು. ಭಾರತದ ಇತರ ಪ್ರದೇಶಗಳ, ಭಾಷೆಗಳ, ಸಾಹಿತಿಗಳಿಗೆ ಇದು ಪ್ರೇರಣೆಯಾಯಿತು.

ರವೀಂದ್ರನಾಥ ಠಾಕೂರರ ರಾಷ್ಟ್ರಗೀತೆಯಾದ, "ಜನಗಣಮನ' ಮತ್ತು ಬಂಕೀಂ ಚಂದ್ರರ–"ವಂದೇ ಮಾತರಂ"–ಗೀತೆಗಳು ಸಮಸ್ತ ಭಾರತೀಯರ ನರನಾಡಿಗಳಲ್ಲಿ ವಿದ್ಯುತ್ ಸಂಚಾರವಾಗುವಂತಹ ಉದ್ಘೋಷ ಮಂತ್ರಗಳಾಗಿದ್ದವು. ಉತ್ತರ ಭಾರತದಲ್ಲಿ ನಡೆದ ಬೌದ್ಧಿಕ ಮತ್ತು ಸಾಹಿತ್ಯಿಕ ಚಟುವಟಿಕೆಗಳಲ್ಲಿ ವ್ಯಕ್ತವಾದ ರಾಷ್ಟ್ರೀಯತೆ ಪ್ರಜ್ಞೆಯು ದಕ್ಷಿಣ ಭಾರತದ ಕನ್ನಡ–ಮುಂತಾದ ಸಾಹಿತ್ಯಗಳಲ್ಲಿಯೂ ವ್ಯಕ್ತವಾಗಿದೆ. ಸಮಕಾಲೀನ ಕನ್ನಡ ಸಾಹಿತ್ಯವೂ ಇದಕ್ಕೆ ಹೊರತಾಗಿದ್ದಿರಲಿಲ್ಲ. ಇದೇ ಕಾಲವು ಕನ್ನಡ ನವೋದಯ ಸಾಹಿತ್ಯದ ಸಂಭ್ರಮದ, ಸುಗ್ಗಿಯ ಕಾಲವೂ ಹೌದು.

ಈ ಹಿಂದೆ ವ್ಯಾಖ್ಯಾನಿಸಿದ, ಅರ್ಥೈಸಿದ ರೀತಿಯಲ್ಲಿ ರಾಷ್ಟ್ರೀಯತೆ ಅಂಶಗಳನ್ನು ಒಳಗೊಂಡ ನವೋದಯದ ಕಾವ್ಯಗಳನ್ನು ಅಧ್ಯಯನಕ್ಕೆ ಅಳವಡಿಸಿಕೊಳ್ಳುತ್ತಾ, ರಾಷ್ಟ್ರೀಯತೆಯ

ಅಂಶಗಳನ್ನೊಳಗೊಂಡ ನವೋದಯ ಕಾವ್ಯವು ವಿಫುಲವೂ, ವೈವಿಧ್ಯವೂ ಆಗಿರುವದರಿಂದ ಅಧ್ಯಯನದ ಅನುಕೂಲಕ್ಕಾಗಿ ವಸ್ತು, ವಿಷಯ, ಮನೋಧರ್ಮಕ್ಕನುಗುಣವಾಗಿ ಈ ರೀತಿ ವಿಂಗಡಿಸಿಕೊಳ್ಳಲಾಗಿದೆ:

೧) ಬಂಧ ಮುಕ್ತ ಭಾರತದ ಹಂಬಲ

೨) ಸ್ವಾತಂತ್ರ್ಯ ಹೋರಾಟಕ್ಕೆ ಕರೆ

೩) ಸಂಭ್ರಮದ ಸ್ವಾತಂತ್ರ್ಯೋತ್ಸವ

೪) ಸ್ವಾತಂತ್ರ್ಯೋತ್ತರ ಭಾರತದ ಆಶೋತ್ತರಗಳು

ಹೀಗೆ ವಿಭಾಗಿಸಿಕೊಂಡು ನವೋದಯದ ಪ್ರಮುಖ ಕವಿಗಳ ಕಾವ್ಯಗಳ ವ್ಯಾಖ್ಯಾನ – ವಿಶ್ಲೇಷಣೆ ಮಾಡಲಾಗಿದೆ.

**೪.೩.ಸ್ವಾತಂತ್ರ್ಯ :**

ತಂತ್ರಿವಾದ್ಯವು ಲೇಸು/ಮಂತ್ರಿಯ ಕೆಳೆ ಲೇಸು
ಯಂತ್ರವಾಹಕನ ದಯೆ ಲೇಸು/ಜಗದಿ ಸ್ವಾ–
ತಂತ್ರ್ಯವೇ ಲೇಸು ಸರ್ವಜ್ಞ॥

'ಜಗದಿ ಸ್ವಾತಂತ್ರ್ಯವೇ ಲೇಸು'. ಮಾನವನ ಸಾರ್ವತ್ರಿಕ ಸ್ವಾತಂತ್ರ್ಯದ ಪ್ರಮುಖ ಸಂದೇಶದೊಡನೆ ಬಾಯಿಂದ ಬಾಯಿಗೆ ಹರಿಯುವ ಈ ಮಾದರಿಯ ಸರ್ವಜ್ಞನ ಸ್ವತಂತ್ರ ಪ್ರಜ್ಞೆಯ ವಚನಗಳು ಅವನ ದೂರದರ್ಶಕ ಜೀವನದೃಷ್ಟಿಗೂ ಪಾರದರ್ಶಕ ಕಾವ್ಯ ಸೃಷ್ಟಿಗೂ ಚಿರಂತನ ಸಾಕ್ಷಿಯಾಗಿ ನಿಲ್ಲುತ್ತವೆ. ಸಮಸ್ತ ಲೋಕಕ್ಕೆ ಅಂಥ ಸ್ವಯಂ ಪೂರ್ಣ ಸ್ವಾತಂತ್ರ್ಯವಿರಬೇಕೆಂದೇ ಹಾರೈಸುತ್ತಾರೆ. ಅಂಥ ಸ್ವಾತಂತ್ರ್ಯಪ್ರಿಯರ ಹೃದಯಯಾಂತರಾಳದ ಕಾವ್ಯಗಳು ಮನೆಮನೆಗೂ ಮಟ್ಟಿ, ಮನಮನವನ್ನೂ ತಟ್ಟಿ ಜಾಗರದ ಗಂಟೆ ಬಾರಿಸುತ್ತವೆ. ಮಲಗಿದವರನ್ನು ಎಚ್ಚರಿಸುತ್ತವೆ. ಎಚ್ಚೆತ್ತವರನ್ನು ಕ್ರಿಯಾಶೀಲಗೊಳಿಸುತ್ತವೆ. ಅಂತೆಯೇ ಸುತ್ತಲಿನ ಸಮಾಜದಲ್ಲಿ ಸಂದರ್ಭಾನುಸಾರ ಹರಿಯತೊಡಗಿದ ಜಾಗೃತ ಪ್ರಜ್ಞಾಪ್ರವಾಹಕ್ಕೆ ಹೆಚ್ಚಿನ ತೀಕ್ಷತೆಯನ್ನೊದಗಿಸುತ್ತವೆ. ಮುಖ್ಯವಾಗಿ ಯಾವುದೊಂದು ದೇಶ ಪರಕೀಯ ಆಡಳಿತದ ಕಟ್ಟುನಿಟ್ಟಿನ ಬಿಕ್ಕಟ್ಟಿನಲ್ಲಿ ಸಿಲುಕಿ ಉಸಿರುಗಟ್ಟುವ ಪ್ರಸಂಗ ಬಂದಾಗ ಇಲ್ಲಿಯ ಸ್ವಾತಂತ್ರ್ಯಪ್ರಿಯ ಕವಿಗಳಕಾವ್ಯಗಳು ಹೊರಹೊಮ್ಮಿವೆ. ಅಡಿಗರು ಒಂದು ಸಂದರ್ಭದಲ್ಲಿ ನಡೆದುಬಂದ ದಾರಿ ಕಡೆಗೆ ತಿರುಗಿಸಬೇಡ ಕಣ್ಣು ಹೊರಳಿಸಬೇಡ ಎಂದರೂ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹುತಾತ್ಮರಾದವರನ್ನು ಸ್ಮರಿಸುತ್ತಾ 'ನೆನೆ ನೆನೆ ಆದಿನವಾ ಎಂದೂ ಸೂಚಿಸುತ್ತಾರೆ. ಬೇಂದ್ರೆಯವರು ವೀರರನ್ನು ನೆನೆದು ನೆನೆದು ವೀರರಾಗಿ ಉಳಿಯುವಾ' ಎಂದು ಸಮರದಲ್ಲಿ ಅಮರರಾದ

ವೀರಸೇನಾನಿಗಳ ಚಿತ್ರಗಳನ್ನು ನಮ್ಮ ಕಣ್ಣೆದುರು ನಿಲ್ಲಿಸುತ್ತಾರೆ. ನಮ್ಮ ದೇಶದ ಆ ದಿನಗಳನ್ನು ನೆನೆಪಿಸಿಕೊಡುತ್ತಾ ದೇಶದ ಮುಂದಿನ ದಿನಗಳಿಗೆ ಕವಿಗಳು ಶುಭಕೋರಿದ್ದಾರೆ.

**೪.೪.ಬಂಧ ಮುಕ್ತ ಭಾರತದ ಹಂಬಲ:**

ಭಾರತದ ಸನಾತನ ಸಂಸ್ಕೃತಿಯಲ್ಲಿ ತಾಯಿಗೆ ದೇವರಿಗಿಂತ ಮಿಗಿಲಾದ ಸ್ಥಾನವಿದೆ. ಮುಂದುವರೆದು 'ತಾಯಿಯೇ ದೇವರು' ಎಂಬ ಕಲ್ಪನೆಯಿದೆ. ಸ್ವಾಮಿ ವಿವೇಕಾನಂದರು: ತಾಯಿಯನ್ನು ಪೂಜಿಸದ ಪಾಪಿಯೊಬ್ಬನೂ ಕೀರ್ತಿವಂತನಾಗಿಲ್ಲ" (ಕುವೆಂಪು, ೧೯೮೯, ಪುಟ–೨೪) ಎಂದು ಹೇಳಿದ್ದಾರೆ.–"ತಾಯಿ ಮಕ್ಕಳ ಸಂಬಂಧವು ಅತ್ಯಂತ ನಿಕಟವಾದ ಮಾನವೀಯ ಸಂಬಂಧವೂ, ಅತ್ಯಂತ ನಿಕಟತಮವಾದ ದೈವಿಕ ಚಿರಸಂಬಂಧವೂ ಆಗಿರುತ್ತದೆ. ಪ್ರೇಮವನ್ನು ನೋಡಬೇಕಾದರೆ ಮಾತೆಯನ್ನು ನೋಡಿ. ಅಸ್ವಾರ್ಥತೆಯನ್ನು ನೋಡಬೇಕಾದರೆ ಜನನಿಯನ್ನು ನೋಡಿ. ತಾಯಿ ಭೂಮಿಯ ದೇವರು!"(ಕುವೆಂಪು, ೧೯೮೯, ಪುಟ–೨೫)ಎಂದು ಕುವೆಂಪುರವರು ವ್ಯಾಖ್ಯಾನಿಸಿರುವರು. ಜನನಿ ಮತ್ತು ಜನ್ಮಭೂಮಿ ಸ್ವರ್ಗಕ್ಕಿಂತಲೂ ಮಿಗಿಲೆಂದು ಸನಾತನಾವಾದ ಹಿಂದೂ ಧರ್ಮದಲ್ಲಿ ಕಂಡುಕೊಳ್ಳಲಾಗಿದೆ. ನವೋದಯ ಕವಿಗಳು ತಮ್ಮ ಕಾವ್ಯಗಳಲ್ಲಿ ಭಾರತ ದೇಶವನ್ನು ತಾಯಿ, ಮಾತೆ, ಮಾತೃ, ಜನನಿ, ಜಗದಂಬೆ–ಎಂದು ಬಗೆ ಬಗೆಯಾಗಿ ಸಂಬೋಧಿಸಿ ದೇಶವನ್ನು ಮಾತೃ ಸ್ವರೂಪವಾಗಿ ಕಂಡಿರುವರು. ದೇಶದ ಪಾರತಂತ್ರ್ಯ–ಪರದಾಸ್ಯವನ್ನು ತಾಯಿಯ ಬಂಧನದ ದುಸ್ಥಿಃತಿಯೆಂದುವ್ಯಥೆಪಟ್ಟಿದ್ದಾರೆ; ಬಿಡುಗಡೆಗಾಗಿ ಹಂಬಲಿಸಿರುವರು. ಬಿಡುಗಡೆಗೊಳಿಸಲು ನಿನ್ನ ಮಕ್ಕಳಲ್ಲಿ ಚೈತನ್ಯ ತುಂಬಬೇಕೆಂದೂ, ಬಿಡುಗಡೆಗಾಗಿ ಹೋರಾಡುವ ನಿನ್ನ ಮಕ್ಕಳನ್ನು ಹರಸಬೇಕೆಂದೂ, ಎಚ್ಚರಿಸಬೇಕೆಂದೂ, ಬಗೆಬಗೆಯಾಗಿ ಪರಿ–ಪರಿಯಾಗಿ ಪ್ರಾರ್ಥಿಸಿಕೊಂಡು ಭಾರತ ಮಾತೆಯಲ್ಲಿ ಮೊರೆಹೋಗಿರುವದನ್ನು ಕನ್ನಡ ನವೋದಯದ ಪ್ರಮುಖ ಕವಿಗಳ ಕಾವ್ಯಗಳಲ್ಲಿ ಕಾಣಬಹುದಾಗಿದೆ.

ನವೋದಯದ ಮೊದಲ ತಲೆಮಾರಿನ ಕವಿಯಾದ ಪಂಜೆ ಮಂಗೇಶರಾಯರು– 'ತೂಕಡಿಕೆಯನು ಕಳೆಯದೇಕೆ ಕುಳುತಿಹೆ ಗೆಳೆಯ'–ಕವನದಲ್ಲಿ ಭಾರತ ಮಾತೆಯ ಬಂಧನದ ದುಸ್ಥಿತಿಯನು ಅವಳ ಹಂಬಲವನ್ನು ಈ ರೀತಿ ಚಿತ್ರಿಸಿದ್ದಾರೆ.

"ಚಿತ್ತ ವ್ಯಸನಾಕುಲೆಯು ಕುತ್ತಿಗೆಯ ಸಂಕುಲೆಯ
ಕತ್ತರಿಸಿ ತನ್ನ ಸೆರೆಬಿಡಿಸಬೇಕೆಂದು
ನೆತ್ತಿಯಲಿ ಬೊಟ್ಟಿಡದೆ ಬಿರುದು ಬಾವಲಿ ತೊಡದೆ
ಅತ್ತತ್ತು ಹಲಬುತಿರೆ ಭೂಮಾತೆ ನೊಂದು!

(ಪಂಜೆರಾಮರಾಯ (ಸಂ); ೧೯೭೩, ಪುಟ–೭೮)

ಭಾರತ ಮಾತೆ ಬಂಧನದಲ್ಲಿರುವದರಿಂದ ಮುತ್ತೈದೆಯ ಸಂಕೇತವಾದ ಹಣೆಯಲ್ಲಿ ತಿಲಕ (ಕುಂಕುಮ) ಇಡದೆ, ಯಾವುದೇ ಆಭರಣ ತೊಡದೆ, ಯಮಪಾಶದಂತೆ ತನ್ನ ಕುತ್ತಿಗೆಗೆ ಬಿಗಿದಿರುವ ಬಂಧನದ ಸಂಕೋಲೆಯನ್ನು ಕತ್ತರಿಸಿ ಬಿಡಬೇಕೆಂದು ನೊಂದು ಹಲಬುತ್ತಿದ್ದಾಳೆಂದು ಚಿತ್ರಿಸಿದ್ದಾರೆ.

ಗೋವಿಂದ ಪೈ ಅವರು "ಜಯ ಜಯಾ!" ಕವನದಲ್ಲಿ–
"ಮೂಡುವನೆಂದೀ ಭಾರತ
ಭಾಗ್ಯ ಬಾಸ್ಕರಂ?
ಮರಳುವುದೆಂದೆ ಮಗಗಲಿದ
ಸ್ವತಂತ್ರ ಮತಿಯಶಸ್ಕರಂ"
(ಗೋವಿಂದಪೈ, ೧೯೬೨, ಪುಟ–೧೧೯)

ಎಂದು ಹಂಬಲಿಸಿದ್ದಾರೆ.

ಹುಯಿಲಗೋಳ ನಾರಾಯಣರಾಯರು "ಗೆಲು ಬರಲಿ ಭಾರತದ ರಾಷ್ಟ್ರೀಯ ಮಾಸಭೆಗೆ"– ಎಂಬ ಸ್ವಾಗತಗೀತೆಯನ್ನು– ೧೯೩೫ ರಲ್ಲಿ ಸುವರ್ಣ ಮಹೋತ್ಸವ ಆಚರಿಸಲು ಸೇರಿದ 'ಇಂಡಿಯನ್ ನ್ಯಾಶನಲ್ ಕಾಂಗ್ರೆಸ್'ನ ಅಧಿವೇಶನಕ್ಕಾಗಿ ರಚಿಸಿದ್ದರು. ಇದರಲ್ಲಿ–"ಸಿರಿಸೌಖ್ಯ, ಸ್ವಾತಂತ್ರ್ಯ, ಒಕ್ಕಟ್ಟು, ಒಪ್ಪಂದ ಭಾರತ ದೇಶದಿ ಬಿಡದೆ ತರಲು ಜನುಮಕೆ ಬಂದ"–ಎಂದು ಇವುಗಳನ್ನು ಸಾಧಿಸಲು ಹಾರೈಸಿದ್ದಾರೆ. "ಭಾರತ ಮಾತೆ ಜಯ ಜಯ ಸನ್ನುತೆ ಚಾರು ಪದಕೆ ನಮಿಸುವೆ ತಲೆಬಾಗುತ"– ಎಂದು ಆರಂಭವಾಗುವ 'ವಂದೇ ಮಾತರಂ' ಕವನದಲ್ಲಿ, ಭಾರತ ಮಾತೆಯ ಗುಣಗಾನ ಮಾಡಿದ್ದಾರೆ. ಭಾರತ ಮಾತೆ ಶೃತಿ, ಸ್ಮೃತಿ, ಶಾಸ್ತ್ರಪುರಾಣಗಳಿಂದ ಸುಸಂಸ್ಕೃತಳಾದವಳು. ಪವಿತ್ರ ನದಿಗಳ ನೀರಿನಿಂದ ಸ್ನಾನ ಮಾಡಿದವಳು. ಕನಕ, ರತ್ನ, ಮಣಿ, ವಜ್ರಗಳಿಂದ ವಿಭೂಷಿತಳಾದವಳು; ಫಲ–ಧಾನ್ಯ, ಹಾಲು–ಹೈನುಗಳಿಂದ ನೈವೇದ್ಯ ಪಡೆದವಳು; ಧೀರರಿಂದ, ಜ್ಞಾನಿಗಳಿಂದ, ಮುನಿಗಳಿಂದ ಪೂಜಿತಳು. ರಾಮಕೃಷ್ಣ, ಅರ್ಜುನರಿಂದ ವಂದಿತಳು: ಸೀತೆ, ದ್ರೌಪದಿಯರಿಂದ ಹೊಗಳಲ್ಪಟ್ಟವಳು. ಮಾರುತಿ, ಗರುಡ–ಮೊದಲಾದವರಿಂದ ಸೇವೆ ಪಡೆದ ಈ ಭಾರತ ಮಾತೆ, ಮೂವತ್ತು ಕೋಟಿ ಭಾರತೀಯರಿಗೆ ಅಧಿದೇವತೆ. 'ಭಾರತ ಭೂವನ' (ನಾಡ ತೋಟ) ಪದ್ಯದಲ್ಲಿ ಬ್ರಿಟೀಷರ ಕುಟಿಲ ನೀತಿ, ಭಾರತವನ್ನು ವಶಪಡಿಸಿಕೊಂಡ ಬಗೆಯನ್ನು ಚಿತ್ರಿಸಿದ್ದಾರೆ.

"ತಾಯೆ ನೀನಿಂತೇಕೆ ತೋಟದೆ
ಕಾಯ ಕಷ್ಟದೆ ದುಡಿದು ದಣಿಯುವೆ
ಶ್ರೇಯದಲಿ ನೀಂ ಗ್ರಹದಿ ಕುಳ್ಳಿರು ನಾನು ಶ್ರಮಪಟ್ಟು
ಕಾಯ ಕಷ್ಟವ ಮಾಡಿ ಬೆಳೆಗಳ–
ನಾಯತದಿ ತಂದಿರುವೆ ನೀಂ ಕಂಡು
ವಾಯದಿಂ ನಾಂ ತೃಪ್ತನಾಗುವೆ ಸಾಕು ದಯಮಾಡು॥"
(ಜ್ಯೋಶಿ ಜಿ.ಡಿ. (ಸಂ), ೨೦೦೮, ಪುಟ– ೮೪)

ಎಂದು ಹಂಬಲಿಸಿದ್ದಾರೆ.

–ಎಂದು ಬ್ರಿಟೀಷೆಂಬ ಪರದೇಶಿ ತೋಟಿಗನು ವಿನಯದಿಂದ ಭಾರತ ಮಾತೆಯನ್ನು ಕೇಳಿಕೊಳ್ಳಲು ಭಾರತ ಮಾತೆಯು ತೋಟವನ್ನು ಕೊಟ್ಟು ಬಿಡುತ್ತಾಳೆ. ಪರದೇಶಿಯ ಗುಟ್ಟು ರಟ್ಟಾಗುವಾಗ ಬೆಳೆಗಳು ಅವನಿಗೆ ವಿರೋಧ ವ್ಯಕ್ತಪಡಿಸುತ್ತವೆ. ಭಾರತಮಾತೆ ಪರದೇಶಿ ತೋಟಿಗನನ್ನು ಕರೆಸಿ ವಿಚಾರಿಸಲು ಅವನು ಬೆಳೆಗಳನ್ನು ಕುರಿತು ಹೇಳಿದ ದೂರು ಹೀಗಿದೆ:

"ಒಡನೆ ತೋಟಿಗ ಕರೆದು ಮಾತೆಗೆ
ನುಡಿದನಾಗಳು ನೋಡು ನಿನ್ನಯ
ಗಿಡಗಳಿವು ನೀರ್ಕುಡಿಯದಾದವು ಫಲಗಳನ್ನೆಂತೂ॥
ಪಡೆವೆವೈ ಕಿತ್ತಿಡಲೆ ಹೇಗೆಂ–
ದೊಡನೆ ಮಾತಿಗೆ ತಿರುಗಿ ಹೇಳಿದ
ನುಡಿಯು ಗದುಗಿನ ವೀರನಾರಾಯಣಗೆ ಗೊತ್ತುಂಟು॥
(ಜ್ಯೋಶಿ ಜಿ.ಡಿ. (ಸಂ), ೨೦೦೮, ಪುಟ– ೮೪)

–ಈ ರೀತಿಯಾಗಿ ಬ್ರಿಟೀಷರು ಭಾರತವನ್ನು ವಶಪಡಿಸಿಕೊಂಡಿರುವದನ್ನು ಭಾರತೀಯರ ಸ್ವಾತಂತ್ರ್ಯ ಚಳುವಳಿಯನ್ನು ಬಣ್ಣಿಸಿರುವರು.

ನವೋದಯದ ಆಚಾರ್ಯಪುರುಷರಾದ ಬಿ.ಎಂ. ಶ್ರೀಕಂಠಯ್ಯನವರು "ಭರತಮಾತೆ" ಕವನದಲ್ಲಿ, "ಭರತ ಮಾತೆಯೆ, ಭರತ ಮಾತೆಯೆ ಎಂದು ನೀತಲೆಯೆತ್ತುವೆ? ಎಂದು ಲೋಕದ ಜನರ ಹೃದಯದಿ ನಿನ್ನ ಮಹಿಮೆ ಬಿತ್ತುವೆ?"–ಎಂದು ಭಾರತ ಮಾತೆಯನ್ನು ಸ್ವಾತಂತ್ರ್ಯಕ್ಕಾಗಿ ಹಂಬಲಿಸಿ ಪ್ರಶ್ನಿಸಿದ್ದಾರೆ. ಭಾರತಕ್ಕೆ ಸ್ವಾತಂತ್ರ್ಯವೆಂಬ "ಹುಣ್ಣಿಮೆ" ಯಾವಾಗ ಎಂದು ಬರುತ್ತದೆ–ಎಂಬ ತವಕವನ್ನು ರಂ.ಶ್ರೀ ಮುಗಳಿಯವರು "ಭಾರತ ಹುಣ್ಣಿಮೆ"–ಕವನದಲ್ಲಿ ಹೀಗೆ ವ್ಯಕ್ತಪಡಿಸಿದ್ದಾರೆ:

"ತೇಜದ ನಿಜಸ್ವಾತಂತ್ರ್ಯದ ಕ್ಷಾತ್ರದ
ತೇಜಿಯನೇರಿದ ಭಾರತ ರಾಜರ
ಮೊಗಮೊಗದಲಿ ಬಿಳಿ–ಹೊಳೆಯಲು ಮಿರುಗಿದ
ಭಾರತ ಹುಣ್ಣಿಮೆ ಎಂದಿಗೆ ಬಹುದೋ!"
(ಮುಗಳಿ ರಂ.ಶ್ರೀ. ೧೯೪೦, ಪುಟ–೪೮)

ತಿಳಿನಗೆ ಸೂಸುವ, ಬಂಗಾರದ ಕಳೆ ಹೊಂದಿರುವ, ಪೈರು ಬೆಳೆದು ನಿಂತ ಭೂಮಿಯಂತಿರುವ, ಎಲ್ಲರ ಜೀವನಕ್ಕೆ ಪೂರ್ಣ ಚಂದ್ರನಾದ ಸ್ವಾತಂತ್ರ್ಯ, ಕಾಲ ಮರೆತರೂ ಮರೆಯದ, ಭಾರತ ಹುಣ್ಣಿಮೆಯು ಯಾವಾಗ ಬರುವದು–ಎಂದು ಕವಿ ಕೇಳಿರುವನು. "ಭಾರತ! ನಿನ್ನಯ ಭಾರವನಿಳುಹುವ ಭಾರತ ಹುಣ್ಣಿಮೆಯೆಂದರೆ ಬಹುದೋ!"(ಮುಗುಳಿ ರಂ.ಶ್ರೀ. ೧೯೪೦,

ಪುಟ-೪೮) -ಎಂದು: ಭಾರತ ಹುಣ್ಣಿವೆ"-ಯನ್ನು ದೇಶದ ಸ್ವಾತಂತ್ರ್ಯಕ್ಕೆ ಸಮೀಕರಿಸಿ ದ್ವಂದ್ವಾರ್ಥವನ್ನು ವ್ಯಕ್ತಪಡಿಸಿದ್ದಾರೆ.

'ಸೆರೆಮನೆ'-ಕವನದಲ್ಲಿ ಸ್ವಾತಂತ್ರ ಯೋಧನು ಯಾವುದೇ ಭಯ-ಅಂಜಿಕೆ ಇಲ್ಲದೆ "ಸೆರೆ ಮನೆಗೆ ಬಂದೆ ಅರಮನೆಗೆ ಬಂದ ಹಾಗೆ"-ಎಂಬ ಭಾವನೆಯನ್ನು ವ್ಯಕ್ತಪಡಿಸಿರುವನು. ಸ್ವಾತಂತ್ರ ಯೋಧನು ಸ್ವಾತಂತ್ರ ಚಳುವಳಿ ಎಂಬ ಮಹಾಯಜ್ಞದಲ್ಲಿ ಎಲ್ಲವನ್ನೂ ತ್ಯಾಗಮಾಡಿ ನಿಂತಿದ್ದೇವೆ. ಅದಕ್ಕಾಗಿ ಭಾರತ ಮಾತೆಯಲ್ಲಿ-

"ಭಾರತದ ತಾಯೆ! ಬಿಡುಗಡೆಯ ಹೋಮದಲ್ಲಿ
ಎಲ್ಲವನು ನೀಡಿ ನಿಂದಿಹೆವು ಪ್ರೇಮದಲ್ಲಿ
ಹೋಮದುರಿಯಿಂದ ನೀನೆದ್ದು ಮೊಗವ ತೋರಿ
ಹರಸೇಳು ತಾಯೆ ನಮ್ಮಲ್ಲಿ ನೋಟವೂರಿ"
(ಮುಗಳಿ ರಂ.ಶ್ರೀ. ೧೯೫೧, ಪುಟ-೫೯)

-ಎಂದು ಪ್ರಾರ್ಥಿಸಿಕೊಂಡಿರುವನು.

ಕಡೆಂಗೋಡ್ಲು ಶಂಕರ ಭಟ್ಟರ 'ವಸ್ತ್ರಾಪಹರಣ'-ಕೃತಿಯು ಮಹಾಭಾರತದ ದ್ರೌಪದಿಯ ವಸ್ತ್ರಾಪಹರಣದ ವಸ್ತುವನ್ನೊಳಗೊಂಡಿದ್ದರೂ ಇದರಲ್ಲಿ ದೇಶದ ರಾಷ್ಟ್ರೀಯ ಚಳುವಳಿಗೆ ಸಂಬಂಧಿಸಿದ ವಿಷಯವನ್ನು ಸಮೀಕರಿಸಿರುವದನ್ನು ಕಾಣಬಹುದಾಗಿದೆ. ಇಲ್ಲಿ ದ್ರೌಪದಿಯ ಸೀರೆ ಸೆಳೆಯುವ ದುಶ್ಯಾಸನ, ದುರ್ಯೋಧನರನ್ನು ಬ್ರಿಟೀಷರಿಗೂ, ಅಂದಿನ ಭಾರತ ಮಾತೆಯ ಪರದಾಸ್ಯದ, ಬಂಧನದ ಶೋಚನೀಯ ಸ್ಥಿತಿಯನ್ನು ವಸ್ತ್ರಾಪಹರಣಕ್ಕೊಳಗಾದ ದ್ರೌಪದಿಗೂ ಹೋಲಿಸಿದ್ದಾರೆ. ಬ್ರಿಟೀಷರ ವಶವಾದ ಭಾರತದ ಸ್ಥಿತಿಯನ್ನು ಹೀಗೆ ಬಣ್ಣಿಸಿದ್ದಾರೆ:

"ಭರತ ಭೂಪನ ಸಕಲ ಸುಗುಣಾ-
ಭರಣಯಕ್ತನ ಕಾಲದಲಿ ತಾ
ಮೆರೆದ ಭಾರತ ಭೂಮಿಯಧಿಕಾರಿಗಳ ವಶವಾಯ್ತೇ?
ಸಿರಿ ಸೊಬಗು ಬಿನ್ನಾಣಗಳ ಬಾ
ಸುರ ನಿವಾಸವಿದೆಂಬ ಹೆಸರನು
ಧರಿಸಿತೊಪ್ಪಗಿದ ನಾಡು ದುಶ್ಯಾಸನನ ವಶವಾಯ್ತೇ?"
(ರಾಜಮ್ಮ ನಾಯಕ, ೧೯೯೨, ಪುಟ-೨೪೧)

-ಎಂದು ಮರುಗಿದ್ದಾರೆ. ದುರ್ಯೋಧನನು ಕುಟಿಲ ಜೂಜಾಟದಿಂದ ರಾಜ್ಯವನ್ನು ಕಸಿದುಕೊಂಡಂತೆ ಬ್ರಿಟೀಷರು ತಮ್ಮ ಕುಟಿಲ ವ್ಯಾಪಾರ ತಂತ್ರಗಳಿಂದ ಭಾರತವನ್ನು ವಶಪಡಿಸಿಕೊಂಡರು. ಅಲ್ಲದೆ ದುಶ್ಯಾಸನನು ದ್ರೌಪದಿಯ ವಸ್ತ್ರಾಪಹರಣ ಮಾಡಿದಂತೆ ಬ್ರಿಟೀಷರು ಭಾರತದ ಸಿರಿ-ಸಂಪತ್ತು- ಸೌಭಾಗ್ಯವನ್ನು ಅಪಹರಿಸಿ ಇಂಗ್ಲೆಂಡಿಗೆ ಸಾಗಿಸಿದರೆಂದು ಧ್ವನಿಸಿದ್ದಾರೆ.

ಜಿ.ಪಿ. ರಾಜರತ್ನಂ ಅವರು 'ಶಾಂತಿ' ಕವನ ಸಂಕಲನದ 'ಬಿಡುಗಡೆ'-ಎಂಬ ದೀರ್ಘಕವನದ ಮೊದಲನೆ ಭಾಗದಲ್ಲಿ ಭಾರತ ಮಾತೆಯ ಬಂಧನದ ಕಥೆಯ ವ್ಯಥೆಯಿದೆ. ವ್ಯಾಪಾರಕ್ಕಾಗಿ ಬಂದಬ್ರಿಟೀಷರು ಕುಟೀಲೋಪಾಯದಿಂದ ಭಾರತವನ್ನು ವಶಪಡಿಸಿಕೊಂಡ ಬಗೆಯನ್ನು ರಾಜರತ್ನಂ ಅವರು ಬ್ರಿಟನ್ ರಾಣಿಯರು ಭಾರತಮಾತೆಯನ್ನು ಬಂಧಿಸಿ ತನ್ನ ದಾಸಿಯನ್ನಾಗಿ ಮಾಡಿಕೊಂಡುದನ್ನು ಕಾವ್ಯಾತ್ಮಕವಾಗಿ ನಿರೂಪಿಸಿದ್ದಾರೆ.

ಬ್ರಿಟನ್ ರಾಣಿ, ಭಾರತ ಮಾತೆಯನ್ನು ಬಂಧಿಸುವಾಗ ದೇಶದ, ಜನತೆಯ ಸ್ಥಿತಿಯನ್ನು- "ತಮಸಿನ ಗುಡ್ಡೆಯ ತಲದಲಿ ಭಾರತ ಬೂವಿಯೂ ಬಾನು ಬಿದ್ದಿರಲು-ಜನರು ನಿದ್ದೆಯ ಹೊದಿಕೆಯ ಹೊದ್ದಿರಲು-" ಎಂದು ವಿಡಂಬಿಸಿದ್ದಾರೆ. ಇಂಥಹ ಸಮಯದಲ್ಲಿ ಭಾರತಮಾತೆ ಬ್ರಿಟನ್ ರಾಣಿಯಿಂದ ಬಂಧಿಯಾದಾಗ ಬಿಡಿಸಲು, ರಕ್ಷಿಸಲು ಕಿರುಚಿಕೊಳ್ಳುತ್ತಾಳೆ, ಕೂಗಿಕೊಳ್ಳುತ್ತಾಳೆ. ನಿದ್ದೆಯಲ್ಲಿದ್ದ ಜನರೆಲ್ಲ ತಮ್ಮ ಮನೆಗೆ ಬೆಂಕಿಬಿದ್ದಾಗ ಮನೆಬಿಟ್ಟು ಹೊರಗೆ ಓಡುವಂತೆ ಓಡಿಬಂದು ಜನಜಂಗುಳಿ ಸೇರುತ್ತದೆ. ಹಾಗೆ ಸೇರಿದ ಜನ ಸಮೂಹದಲ್ಲಿ ರಜಪೂತರು, ಗುಜರಾತರು, ಘೋರಕರು, ಪಂಜಾಬಿಯರು, ಮರಾಠರು, ಬಂಗಾಳಿ, ಕನ್ನಡಿಗರು, ಆಂಧ್ರರು ಹಾಗೂ ವಿವಿಧ ಜಾತಿ-ಮತ-ಧರ್ಮದವರು ಇದ್ದರೆಂಬುದು, ರಾಷ್ಟ್ರೀಯ ಆಂದೋಲನದಲ್ಲಿದ್ದ ದೇಶದ ಆಯಾ ಪ್ರಾಂತದ ಎಲ್ಲ ಜನರು ಇದ್ದದನ್ನು ಸೂಚಿಸುತ್ತದೆ. ಹೀಗೆ ಸೇರಿದವರೆಲ್ಲಾ ಕೋಟಲೆಗೊಳಗಾಗಿ ಕಿರುಚಿಕೊಂಡವರು, ಕೂಗಿಕೊಂಡವರಾರೆಂದು ಸುತ್ತಲೂ ನೋಡುತ್ತಾರೆ. ಆಗ ಅವರಿಗೆ ಕಾಣುವಳು ಬಂಧಿಯಾದ ಭಾರತ ಮಾತೆ. ಆಗ ಅವಳ ಸ್ಥಿತಿಯು-

"ಮುಖವನು ಮರೆಯಿಸಿ ನಿಂತಿದೆ ಮೂರುತಿ, ಪಾಂಸುಲಪಸದನವೆಸೆಯುತಿದೆ
ಧೂಳು ತುಂಬಿ ಕುರುಳೋಳಿಯು ಕೆದರಿದೆ, ದೀನತೆ ತನುಮನ ಕುಗ್ಗಿಸಿದೆ.
ಕೈಗಳು ಕಾಲ್ಗಳು ಬಂಧಿಸಲಾಗಿದೆ, ಕಟ್ಟಿಂ ನೆತ್ತರು ಬಸಿಯುತಿದೆ.
ತಲೆಯ ಕಿರೀಟ ಹುಡಿಯಲಿ ಕೆಡೆದಿದೆ. ಮುಖದಿಂ ನಿಟ್ಟುಸಿರಿಳಿಯುತಿದೆ"

(ರಾಜರತ್ನಂ.ಜಿ.ಪಿ. ೧೯೬೯, ಪುಟ-೧೨೪)

-ಹೀಗೆ ಬಂಧನದಲ್ಲಿದ್ದ ಭಾರತಮಾತೆಯ ಪಕ್ಕದಲ್ಲೆ ಅವಳಿಗೆ ಕೀಟಲೆ ಕೊಡುತ್ತಿರುವ, ಮೂದಲಿಸುತ್ತಿರುವವಳು ಇನ್ನೊಬ್ಬಳಿದ್ದಾಳೆ. ಇವಳು ಇಂಗ್ಲೀಷ್ ರಾಣಿ, ಇವಳು 'ಬಂದಿಯ ಕಣ್ಣಿಂದುಕ್ಕುವುದಸದಿಂದಲಿ ದೃಗುಜಲಕಾಲುವೆಯು, ಕಾಲುವೆಯಲಿ ತನ್ನ ಕಾಲು ತೊಳೆವಳು'- ಎನ್ನುವದು ಬ್ರಿಟೀಷ್‌ರಿಂದ ಶೋಷಣೆಗೊಳಗಾದ ಭಾರತದ ಚಿತ್ರಣವಾಗಿದೆ. ಸೇರಿದ ಜನತೆ ದೈನ್ಯದಿಂದ ಬಂಧಿಯಾದವಳನ್ನು ಬಿಟ್ಟುಬಿಡು ಎಂದಾಗ-'ಛೀಬಿಡು'-ಎಂದರೆ ಏನೆಂಟು? ಬ್ರಿಟನ್ನಿನ ರಾಣಿಯು ನಾನು. ದಾಸಿಯು ನನಗೀ ಭಾರತಿ! ಗೊತ್ತುಂಟು?-ಎಂದು ನಿರಾಕರಿಸುವಳು. ಅಲ್ಲದೆ ಸೇರಿದ ಜನ ಸಮೂಹಕ್ಕೆ "ಇವಳೇ ಭಾರತಿ! ಕಡಲ ರಾಣಿ ನಾ ಭಾರತೀಯ ಒಡೆಯರು ನಾವುಗಳು. ಭಾರತೀಯನುಪಮ ಗರ್ಭದೊಳೆದಾ ತೊತ್ತಿನ ಮಕ್ಕಳು ನೀವುಗಳು"(ರಾಜರತ್ನಂಜಿ.ಪಿ. ೧೯೬೯,

ಪುಟ-೧೨೪)ಎಂದು ಹೀಯಾಳಿಸುತ್ತಾಳೆ. ಭಾರತ ಮಾತೆಯನ್ನು ಒಮ್ಮೆ ಸೋದರಿಯೆಂದೂ ಮತ್ತೊಮ್ಮೆ ದಾಸಿಯೆಂದೂ ಮಾತು ಮಾತಿಗೂ ಬದಲಾಯಿಸುತ್ತಾಳೆ.

"ಮತ್ತೆಯು ನುಡಿದಳು ಕಡಲಿನ ರಾಣಿ, ಸೋದರಿಯೆನಗೀ ಭಾರತಿಯು
ಸತ್ಯವ ನುಡಿವೆನು, ಭಯವೆನಗಿಲ್ಲ, ನಿಮ್ಮ ಮುಖಕೆ ಮಂಗಳಾರತಿಯು
ಸೋದರಿಗೀದರಿಯೆಂಬುದ ಕಾಣಿ ಸೋದರಿಗಿಂತಲು ಹೆಚ್ಚಾಗಿ
ತೊತ್ತಾಗಿರಲೆನಗತಿ ನೆರವುಂಟು, ನಿಂತೇಗೈವಿರಿ ಪೆಚ್ಚಾಗಿ?"

(ರಾಜರತ್ನಂ. ಜಿ.ಪಿ. ೧೯೬೯, ಪುಟ-೧೨೪)

-ಎಂದು ನಿಂತ ಜನ ಸಮೂಹಕ್ಕೆ ಗದರಿಸುವಳು. ಇವರು ನಾಚಿ ತಲೆ ತಗ್ಗಿಸಿ ಹೋಗುವರು. ಇದು ೧೮೫೭ ರಲ್ಲಿ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ವಿಫಲತೆಯನ್ನು ಸೂಚಿಸುವಂತಿದೆ. ಇವರು ಪರಸ್ಥಿತಿ ಕೈಮೀರಿ ಹೋಗಿರುವುದರಿಂದ ತಿಳಿಯದೆ ಗತಿಸಿದ ತಪ್ಪಿನಿಂದಾಗಿ 'ತಮ್ಮನು ತಾವೇ ಹಳಿಯಲು ತೊಡಗಿದರೇತಕು ಬಾರದ ಕೋಪದಲಿ'-ಎನ್ನುವಲ್ಲಿ ದೇಶದ ಅಂದಿನ ಜನತೆಯ ಮನೋಧರ್ಮವು ತಿಳಿಯುತ್ತದೆ. ಇವರು ತಮ್ಮ ತಮ್ಮ ಮನೆ ಸೇರುವಾಗ-

"ಗರುಡನ ತಾಯಿಯ ಬಿಡುಗಡೆ ನೆನೆದರು. ನಿರಾಶೆಯೆಂಬುದ ನೀಗಿದರು.
ಪೂಣ್ದರು ಮಾತೆಯ ದಾಸ್ಯವ ಹರಿಯಲು, ಗೆಯ್ಯಲು ಎಲ್ಲಾ ಯತ್ನಗಳ
ಮಂತಣಗೆಯ್ಯಲು ಮನೆಗಳ ಸೇರಿದರೆದೆಯಲಿ ಬೆಳೆಸಿದರಾಸೆಗಳ"

(ರಾಜರತ್ನಂ.ಜಿ.ಪಿ. ೧೯೬೯, ಪುಟ-೧೨೫)

-ಎನ್ನುವಲ್ಲಿ ಅಂದು ದೇಶದ ಬಿಡುಗಡೆಯ ಹೋರಾಟಕ್ಕೆ ನಡೆದ ಪೂರ್ವತಯಾರಿಯನ್ನು, ತಂತ್ರೋಪಾಯ, ಮಾರ್ಗಗಳನ್ನು ಇದು ಸಂಕೇತಿಸುತ್ತದೆ. ಮಾಸ್ತಿಯವರು-"ಭಾರತ ವರ್ಷವನ್ನು ಕುರಿತು "ಕವನದಲ್ಲಿ ಗತಕಾಲದ ವೈಭವ, ಐಶ್ವರ್ಯವನ್ನು ನೆನೆದು, ಅದನ್ನು ಪುನಃ ಮರಳಿ ಪಡೆಯುವದು ಯಾವಾಗ ಎಂದು ಭಾರತ ಮಾತೆಯನ್ನು-"ಏನಾಯಿತು? ಎತ್ತ ಹೋಯ್ತು ಕೀರ್ತಿಯ ಜೊನ್ನ? ಮರಳಿ ಪಡೆಯುವದು ಎಂದು ತಾಯೆ ಆ ಸಿತಪಕ್ಷಿ?"(ಮಾಸ್ತಿ ವೆಂಕಟೇಶ ಅಯ್ಯಂಗಾರ್, ೧೯೩೫, ಪುಟ-೭೪) ಎಂದು ಕೇಳಿದ್ದಾರೆ. ಆನಂದಕಂದರು ಜಯ ದೊರಕಿಸಬೇಕೆಂದು-'ರಣಚಂಡಿ'-ಯಲ್ಲಿ ಪ್ರಾರ್ಥಿಸಿಕೊಂಡಿದ್ದಾರೆ. ಸಮರದ ಭೀಕರತೆ, ರೌದ್ರತೆಯನ್ನು ಚಂಡಿವರ್ಣನೆಯಲ್ಲಿ ಕಾಣಬಹುದು. ನಿನ್ನಿಂದಲೇ ರಾಜ್ಯ-ಸಾಮ್ರಾಜ್ಯಗಳು ನೆಲಸುವವು. ತ್ರಿಮೂರ್ತಿಗಳನ್ನು ಭೂಮಿಗಿಳಿಸಿ ಅವರ ಅಸ್ತ್ರ-ಶಸ್ತ್ರಗಳಲ್ಲಿ ಚೈತನ್ಯ ತುಂಬಿ ಸತ್ಯ-ಧರ್ಮ ರಕ್ಷಿಸುವವಳು ನೀನು. ನಿನ್ನ ಒಲವನ್ನು ನಂಬಿ, ಹುಮ್ಮಸ್ಸಿನಿಂದ ರಣದ ಕಣಕ್ಕೆ ಹೊರಟಿದ್ದೇವೆ. ಜಯ ದೊರಕಿಸಿ ಕೊಡಲು-"ನಿನಗಾವ ಪೂಜೆ, ಬೇಕದನು ಹೇಳು ಏನೆಂಬೆ? ನಾವಳಿಯಬೇಕೋ? ಗೆಲ್ದಾಳಬೇಕೋ?"(ಬೆಟಗೇರಿ ಕೃಷ್ಣಶರ್ಮ, ೧೯೭೨, ಪುಟ-೬೪) ಎಂದು ಧೈರ್ಯವಾಗಿ ಜಯ ದೊರಕಿಸಿ ಕೊಡಲು ಚಂಡಿ ಯಾವ ಕಾಣಿಕೆ,

ಮೂಜೆ ಕೇಳುವಳೋ ಅದನ್ನು ನೇರವೇರಿಸಲು ಸಿದ್ಧವಿರುವುದಾಗಿ ಹೇಳಿರುವರು. ಸೋಲು-ಗೆಲವುಗಳನ್ನು ನಿರ್ಧರಿಸುವಳು ನೀನೇ. ನಾವು ನಿನ್ನಾಜ್ಞೆಗೆ ಬದ್ಧರಾಗಿರುತ್ತೇವೆಂದು ಕವಿ ಪ್ರಾರ್ಥಿಸಿಕೊಂಡಿದ್ದಾನೆ.

ಬೇಂದ್ರೆಯವರು ಬಿಡುಗಡೆಯ ಕನಸು ನನಸಾಗಲು ಪ್ರಾರ್ಥಿಸಿಕೊಂಡಿರುವರು. "ಅಹಹ! ಸ್ವತಂತ್ರ್ಯದೇವಿ"-ಕವನದಲ್ಲಿ ಸ್ವಾತಂತ್ರ್ಯ ದೇವಿಯನ್ನು ಹೀಗೆ ಆಹ್ವಾನಿಸಿರುವರು:

"ದೇವ ಮಾನವರೆಲ್ಲ ಕಂಡ ಕನಸೇ
ಬಾರೆ, ಮನಸಿನೊಳು ನೆಲಸು ನನಸೇ!
ನೆನಸುತಿಹೆ ಹಸಿದ ಚೇತನೆಯ ತಿನಿಸೇ
ಬಾರೆ,ನನ್ನ ಎದೆಯೊಳಗೆ ಜನಿಸೇ !"

(ಬೇಂದ್ರೆ ದ.ರಾ., ೧೯೫೧, ಪುಟ-೨೪)

-ಸ್ವಾತಂತ್ರ್ಯದ ಆಸೆ, ಅದಕ್ಕೆ ಸ್ಫೂರ್ತಿ, ಚೇತನವು ಕವಿಯು ತನ್ನ ಮನಸ್ಸು-ಹೃದಯದಲ್ಲಿ ಬಂದು ನೆಲಸುವಂತೆ ಪ್ರಾರ್ಥಿಸಿಕೊಂಡಿರುವರು.

ಬೇಂದ್ರೆಯವರು ಬಂಧನವನ್ನು ಹಾವಿಗೂ, ಸ್ವಾತಂತ್ರ್ಯ ಹೋರಾಟವನ್ನು ಹದ್ದಿಗೂ-ಹೋಲಿಸಿದ್ದಾರೆ. ಅಲ್ಲದೆ ಸ್ವಾತಂತ್ರ್ಯವನ್ನು ಬೆಳಕು, ಪರಮ ಕೊಟ್ಟ ಮುದ್ದು, ಪ್ರೀತಿಯುಗದ ಸದ್ದು-ಎಂದೆಲ್ಲಾ ರೂಪಕ-ಪ್ರತಿಮೆ-ಸಂಕೇತಗಳ ಮೂಲಕ ಚಿತ್ರಿಸಿದ್ದಾರೆ. ಅವುಗಳಿಗೆ ಸ್ವಾಗತ ಕೋರಿದ್ದಾರೆ.

"ಸೆರೆಯೆಂಬ ಹಿರಿಹಾವ ಹಿಡಿದ ಹದ್ದೇ
ಬಾರೆ, ಬೆಳಕು ಕತ್ತಲೆಯ ಜಿದ್ದೇ!
ಪರಮ-ಪುರುಷನು ಜಗಕೆ ಕೊಟ್ಟ ಮುದ್ದೇ
ಬಾರೆ, ಪ್ರೀತಿಯುಗ ಬರುವ ಸದ್ದೇ!"

(ಬೇಂದ್ರೆ ದ.ರಾ., ೧೯೫೧, ಪುಟ-೨೪)

ಈ ರೀತಿ ಮೂರ್ತ ಕಲ್ಪನೆಯನ್ನೇ ಕಟ್ಟಿಕೊಟ್ಟ ಕವಿ ಸ್ವಾತಂತ್ರ್ಯವು ಭವಿಷ್ಯದ ಪ್ರತಿಪಲಾಪೇಕ್ಷೆಗಳನ್ನು ಹೊತ್ತು ತರುವುದು. ಅಂದರೆ ಸ್ವಾತಂತ್ರ್ಯೋತ್ತರದಲ್ಲಿ ಏನೇನು ನಡೆಯುತ್ತದೆಂಬ ಶುಭಾಶುಭ ಪ್ರತಿಫಲಾಪೇಕ್ಷೆಗಳನ್ನು ಅದು ಕಂಡುಕೊಂಡಿರುತ್ತದೆ. ಅಂತೆಯೆ ಕವಿ ಅದಕ್ಕೆ 'ಕಣಿ' ಹೇಳಲು ಕೇಳಿಕೊಂಡಿದ್ದಾನೆ.

" 'ಶಿಲೆ' ಯೊಳಗೆ ಸೆಲೆಯಾಗಿ ಹರಿದ ನೀರೇ
ಬಾರೇ, ಕಂಡ ಕಣಿಯನ್ನು ಸಾರೇ
ಕೃತಯುಗದ ಸಾಮ್ರಾಜ್ಯ ನೆಲಸಿ ತೋರೇ
ಕಣ ಕಟ್ಟಿರುವ ಧ್ರುವನ ತಾರೇ"

(ಬೇಂದ್ರೆ, ದ.ರಾ., ೧೯೫೧, ಪುಟ-೨೪)

ಇಲ್ಲಿ " 'ಶಲೆ'ಯೊಳಗೆ ಸೆಲೆಯಾಗಿ"-ಎಂಬುದು ಇಂಗ್ಲೀಷ್ ಕವಿ ಶೆಲ್ಲಿಯ ಕೃತಿಯಲ್ಲಿ 'ಸ್ವಾತಂತ್ರ್ಯದ ವಿಚಾರ ವಿಷಯವು ಸುದೀರ್ಘವಾಗಿ, ಸತ್ವಯುತವಾಗಿ ಹರಿದು ಬಂದಂತೆ ತನ್ನ ಕೃತಿಗಳಲ್ಲಿಯೂ ಬರಲೆಂದೂ, ದೇಶಕ್ಕೂ ಸ್ವಾತಂತ್ರ್ಯ ಬರಲೆಂದೂ, ಬಂದು ಮುಂದೆ ಭವಿಷ್ಯದ ಕಣಿ ಹೇಳಿ ಗತಕಾಲದ ವೈಭವವನ್ನು ಮರಳಿ ಮೆರೆಯಲೆಂದೂ ಕವಿ ಆಶಿಸಿದ್ದಾರೆ.

ಬೇಂದ್ರೆಯವರು ಸ್ವಾತಂತ್ರ್ಯ ಚಳುವಳಿಯ ಪ್ರಭಾತ ಫೇರಿಗಾಗಿ ರಚಿಸಿದ ಕವನ "ಬಿಡುಗಡೆ"-ಯಲ್ಲಿ ಅಂದು ನಮಗಿದ್ದ ಪಾರತಂತ್ರ್ಯದ ನಿರ್ಬಂಧನಗಳನ್ನು ಕುರಿತು ಹೀಗೆ ಬಣ್ಣಿಸಿದ್ದಾರೆ.

"ಮುಗಿಲೊಳಗೂ ಹಕ್ಕಿಗೆ ಹಾದಿ
ಕಡಲೊಳಗೂ ಮೀನಕೆ ಬೀದಿ
ಮಲೆಗಳೊಳು ಹೊಳೆಗೂ ಕೋಡಿ
ನಮಗಷ್ಟೇ ಏಕೀ ಬೇಡಿ"

(ಬೇಂದ್ರೆ, ದ.ರಾ., ೧೯೫೫, ಪುಟ-೮೯)

-ಹಕ್ಕಿಗೆ ಮುಗಿಲಲ್ಲಿ, ಮೀನಿಗೆ ಕಡಲಲ್ಲಿ, ನದಿಗೆ ಗುಡ್ಡಗಳಲ್ಲಿ-ಯಾವುದೇ ನಿರ್ಬಂಧವಿಲ್ಲದೆ ಸುಗಮವಾಗಿ ಸಾಗಲು ಪ್ರಕೃತಿದತ್ತವಾದ ಸ್ವಾತಂತ್ರ್ಯವಿದೆ. ಆದರೆ ನಮಗೇಕೆ ಈ ಬಂಧನವೆಂದು ಕವಿಗಳು ಪ್ರಶ್ನಿಸಿರುವರು. ಕವಿಜೀವ ಸ್ವಾತಂತ್ರ್ಯಕ್ಕಾಗಿ ಹಂಬಲಿಸಿ ದೈವದ ಬೆಂಬಲಕ್ಕೆ ಮೊರೆ ಹೋಗಿರುವರು.

"ತಳಮಳನೇ ಕುದಿವುದು ಜೀವ
ಈ ಎದೆಯೊಳು ಹುಟ್ಟಿದೆ ಹೇವ
ನೀ ಪರಕಿಸಿ ನಮ್ಮೀ ಭಾವ
ಬೆಂಬಲಕಿರು ನಮಗೆಲೆದೇವ"

(ಬೇಂದ್ರೆ, ದ.ರಾ., ೧೯೫೫, ಪುಟ-೮೯)

-ಬೇಂದ್ರೆಯವರ ಮಿತ್ರರಾದ ದಿ. ಜೋಗ ಶೀನಪ್ಪ ಹಾಗೂ ಇತರರು ೧೯೨೨-೨೩ ರಲ್ಲಿ ನಾಗಪುರದಲ್ಲಿ ನಡೆಯುತ್ತಿದ್ದ ಕಾಂಗ್ರೆಸ್ ತ್ರಿವರ್ಣ ಧ್ವಜ ಸತ್ಯಾಗ್ರಹದಲ್ಲಿ ಪಾಲ್ಗೊಳ್ಳಲು ಧಾರವಾಡದಿಂದ ಹೊರಟಿದ್ದರು. ರೈಲು ನಿಲ್ದಾಣದಲ್ಲಿ ಇವರನ್ನು ಬೀಳ್ಕೊಡಲು ಹೋದಾಗ ಅವರಿಗಾಗಿ 'ನಾಡ ಗುಡಿ'-ಎಂಬ ಕವನ ರಚಿಸಿ ಅರ್ಪಿಸಿದರು. ಈ ಕವನದಲ್ಲಿ ತ್ರಿವರ್ಣ ಧ್ವಜವನ್ನು ಮೂಬಣ್ಣದ ಗುಡಿಯೆಂದೂ,ಭಾವೈಕ್ಯತೆಯ ಸಂಕೇತವಾಗಿಯೂ ರೂಪಕಾಲಂಕಾರದಲ್ಲಿ ವರ್ಣಿಸಿರುವರು. ಅಂದು ರಾಷ್ಟ್ರೀಯಚಳುವಳಿಯೆಂಬ ಮಹಾಪೂರದ ಪ್ರವಾಹವು ಯಾರನ್ನೂ ಬಿಟ್ಟಿಲ್ಲ; ಕವಿಯೂ ಇದರ ಸೆಳೆವಿಗೆ ಸಿಕ್ಕಿರುವನು.

"ಜಯನಾದ ನಾಲಿಗೆಯ ತುದಿಯಲ್ಲಿ ಮೊಳಗುತಿದೆ
ಭಯವಿಲ್ಲ ಎದೆಯ ಬದಿಯೊಳ್।

ಜಯವೆಂದು ಮುಳುಗಿದೆನು ದೇಶಭಕ್ತಿಯಪೂರ
ಬಂದಿರಲು ರಾಷ್ಟ್ರನದಿಯೋಳ್।"

(ಬೇಂದ್ರೆ, ದ.ರಾ., ೧೯೫೫, ಪುಟ-೯೦)

-ಎಂದು ಬೇಂದ್ರೆಯವರು, ಅಂದು ಸತ್ಯಾಗ್ರಹಿಗಳು ಜಯವು ಸಿಕ್ಕೇಸಿಗುತ್ತೆಂಬ ದೃಢ ವಿಶ್ವಾಸವನ್ನು ಹೊಂದಿ ಧೈರ್ಯದಿಂದ ಜಯಮಂತ್ರ ಘೋಷಿಸುತ್ತಾ ಸತ್ಯಾಗ್ರಹದಲ್ಲಿ ಧುಮುಕುತ್ತಿರುವ ಮನೋಧರ್ಮವನ್ನು ವ್ಯಕ್ತಪಡಿಸಿದ್ದಾರೆ.

೧೯೨೨ರಲ್ಲಿ ಧಾರವಾಡದಲ್ಲಿ ನಡೆದ ಗೋಲಿಬಾರಿನ ಘಟನೆಗೆ ಸಂಬಂಧಿಸಿದ ಖಟ್ಲೆಯಲ್ಲಿ ಅನೇಕ ನಿರಪರಾಧಿಗಳು ಸೆರೆಮನೆ ಸೇರಿದ್ದರು. ಬೇಂದ್ರೆಯವರು ಈ ಸೆರೆಮನೆವಾಸಿಗಳನ್ನು ಕುರಿತು 'ತರುಣ ತಪಸ್ವಿ(ಗರಿ ಸಂಕಲನ) ಕವನ ರಚಿಸಿದ್ದಾರೆ. ಇದರಲ್ಲಿ ತರುಣ ತಪಸ್ವಿಗೆ ಸ್ವಪ್ನದಲ್ಲಿ ಭಾರತಮಾತೆ ದರ್ಶನವಿತ್ತು-'ವಿಜಯ ನಿನಗಹುದು'-ಎಂದು ಹಾರೈಸುತ್ತಾಳೆ. ಎಚ್ಚೆತ್ತ ತರುಣನು ತನ್ನಷ್ಟಕ್ಕೆ ತಾನೇ-

"ಬಂಧನದೊಳಿರುವವರು ಬದ್ಧರಲ್ಲ
ಬಂಧನಕೆ ಒಳಗಾಗೆ ಬದ್ಧರೆಲ್ಲಾ!
ಬಂಧನವ ಮೀರಿರುವದೇ ಮುಕ್ತಿ ನಿಜವು"

(ಬೇಂದ್ರೆ, ದ.ರಾ., ೧೯೫೧, ಪುಟ-೪೬)

-ಎಂಬ ನಿಲುವನ್ನು ತಾಳುತ್ತಾನೆ. ಆದರೆ ತನ್ನಂತೆ ಸೆರೆಮನೆಯಲ್ಲಿರುವವರ ಕಟ್ಟು-ಕಟ್ಟಳೆ-ನಿಬಂಧನೆಗೆ ಒಳಗಾದವರಲ್ಲ, ಅಂತೆಲೆ ಅವರನ್ನು ಬಂಧಿಸಿರುತ್ತಾರೆ. ಕಟ್ಟು-ಕಟ್ಟಳೆ ನಿಬಂಧನೆಗೊಳಗಾಗಿರುವವರೆಲ್ಲರೂ ಬಂಧನಕ್ಕೆ ಒಳಗಾಗಿಲ್ಲ. ಈ ಬಂಧನವನ್ನು ಮೀರುವುದೇ ನಿಜವಾದ ಸ್ವಾತಂತ್ರ್ಯವೆಂದು ಭಾರತ ಜಗದಂಬೆಯ ಜಯಗಾನ, ಮಂತ್ರಘೋಷಣೆ ಮಾಡುತ್ತಾನೆ. ಅಷ್ಟರಲ್ಲಿ ಅನಿರೀಕ್ಷಿತವಾಗಿ ಬಾಗಿಲು ತೆರೆದ ತರುಣ ತಪಸ್ವಿ ಬಿಡುಗಡೆಯಾಗುತ್ತಾನೆ. ಇದು ಅಂದು ಬಂಧಿತರಾದವರಲ್ಲಿ ಪ್ರಮುಖರಾದ ಶ್ರೀ ದಿವಾಕರರು ಆರೋಪ ಸಾಬೀತಾಗದೆ ಬಿಡುಗಡೆಯಾದುದನ್ನೂ, ಈ ಕವನವು ಇವರನ್ನೇ ಕುರಿತು ರಚಿಸಿದ್ದಾರೆಂಬುದು ತಿಳಿಯುತ್ತದೆ.

ಸ್ವಾತಂತ್ರ್ಯ ಚಳುವಳಿಗೆ ಸಂಬಧಿಸಿದ ಬೇಂದ್ರೆಯವರ ಪ್ರಸಿದ್ಧ ಕವನ" ೩೩ ಕೋಟಿ"- ಈ ಕವನದ ಪ್ರಸ್ತಾವಿಕ ವಿವರಣೆಯಲ್ಲಿ ಭಾರತದ ಅಂದಿನ ದಾಸ್ಯದ ಸ್ಥಿತಿಯನ್ನು-'ಭೂಮಿ ತಾಯಿ ತನ್ನ ಪಾಡನ್ನು ತೋಡಿಕೊಳ್ಳುತ್ತಿದ್ದಳೆಂದೂ, ಅವಳ ಬಳಿ ಕೋಟ್ಯಾವಧಿ ಪ್ರಾಣಿಗಳು ಅಸ್ತವ್ಯಸ್ತವಾಗಿ ಬಿದ್ದಿವೆ'-ಯೆಂದೂ ತಿಳಿಸಿರುವುದು,-ಈ ಕವನದ ಅರ್ಥಪ್ರತೀತತೆಯನ್ನು ಹೆಚ್ಚಿಸಿದೆ.

ಭಾರತ ಮಾತೆ ತನಗೆ ಮೂವತ್ತು ಮೂರು ಕೋಟಿ (ಅಂದಿನ ಭಾರತದ ಜನಸಂಖ್ಯೆ ಅಷ್ಟಿತ್ತು)ಮಕ್ಕಳಿದ್ದರೂ, ಇವರಲ್ಲಿ ಕೋಟಿಗಟ್ಲೆ ಜನ ಬ್ರಿಟೀಷರ ದಾಸ್ಯದಲ್ಲಿ ಅಡಿಯಾಳಾಗಿರುವದನ್ನು ಕಂಡು–

"ಹಂಗಿನರಮನೆಯ ನರಕಾ ತಂಗುವಿರಿ–ಇಹುದೆ ಮರುಕಾ?
ಹಿಡಿ ಬೆರಳ ಹಿಡಿಯಲ್ಲಿ ಅಡಿಯರಡರಡಿಯಲ್ಲಿ
ಹೊರಳಿ ಒರಲುವಿರಿ ಅಕಟಾ!
ಅಕಟಾ ಕಟಾ!
ಮೂವತ್ತು ಮೂರು ಕೋಟಿ"
(ಬೇಂದ್ರೆ, ದ.ರಾ., ೧೯೫೧, ಪುಟ–೭೨)

–ಎಂದು ಕೋಪೋದ್ರೇಕದಿಂದ ಹಂಗಿಸಿ ಆಶ್ಚರ್ಯ ವ್ಯಕ್ತಪಡಿಸಿದ್ದಾಳೆ. ಅಲ್ಲದೆ ಭಾರತಮಾತೆ ತನ್ನ ಮಕ್ಕಳ ದುಸ್ಥಿತಿಯನ್ನು ಕಂಡು ಅಸಹ್ಯಪಟ್ಟುಕೊಂಡು ತಿರಸ್ಕಾರದಿಂದ–

"ಮಕ್ಕಳಿವರೇನಮ್ಮ? ಮಕ್ಕಳಿವರೇನಮ್ಮ
ಮೂವತ್ತು ಮೂರು ಕೋಟಿ?
ನಾ ಹಡೆದ ಮೂವತ್ತು ಮೂರು ಕೋಟಿ"
(ಬೇಂದ್ರೆ, ದ.ರಾ., ೧೯೫೧, ಪುಟ–೭೦)

ಎಂದು ನೊಂದುಕೊಂಡಿರುವಳು. ಲೆಕ್ಕಕ್ಕೆ ಮೂವತ್ತು ಮೂರು ಕೋಟಿ ಆದರೆ ಅವರೆಲ್ಲಾ ನಿರುಪಯುಕ್ತರು. "ಗಂಡಸುತನಕೇಸೊ ಸೊನ್ನಿ"–ಎಂದು ನಿಸ್ತೇಜರಾದ ಮಕ್ಕಳ 'ಗಂಡಸುತನ', ವೀರತನವನ್ನು ಕೆಣಕಿದ್ದಾಳೆ. ಈ ಪದ್ಯದಲ್ಲಿ "೩ಕೋಟಿ" ಮಕ್ಕಳು ಎನ್ನುವದು ಭಾರತದ ಅಂದಿನ ಜನಸಂಖ್ಯೆಯನ್ನು ಸೂಚಿಸುತ್ತದೆ. ಬೇಂದ್ರೆಯವರು ಜನತೆಯಲ್ಲಿ ದೇಶದ ದಾಸ್ಯತನವನ್ನು ತೊಲಗಿಸಲು ಭಾರಮಾತೆಯ ಮೂಲಕ ಈ ಪದ್ಯದಲ್ಲಿ ಜಾಗೃತಿ ಮೂಡಿಸಿದ್ದಾರೆ: ಸ್ಫೂರ್ತಿ ತುಂಬಿಸಿದ್ದಾರೆ.

ಕುವೆಂಪುರವರು ದೇಶದ ದಾಸ್ಯತ್ವವನ್ನು ಹೋಗಲಾಡಿಸುವಂತಹ ಮಹತ್ಕಾರ್ಯಕ್ಕಿಂತ ಮಿಗಿಲಾದುದು ಯಾವುದೂ ಇಲ್ಲ. ದೇವಗಿರಿಂತ ದೇಶವೇ ಮೊದಲು; ಅಲ್ಲದೆ ಇನ್ನೂ ಮುಂದುವರೆದು, ಅದೇ ದೇವರು; ಅದನ್ನು ಬಿಟ್ಟು ಇನ್ನಾವ ದೇವರಿಲ್ಲ, ಅದರ ದಾಸ್ಯತ್ವವನ್ನು ಪರಿಹರಿಸುವುದೇ ಅದಕ್ಕೆ ಸಲ್ಲಿಸುವ ಪೂಜೆಯೆಂದು 'ಇಂದಿನ ದೇವರು' ಕವನದಲ್ಲಿ–"ನೂರು ದೇವರನೆಲ್ಲ ನೂಕಾಚೆ ದೂರ ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ! (ಕುವೆಂಪು,೧೯೬೩, ಪುಟ–೩೯) ಎಂದು ದೇಶವನ್ನು ದೈವತ್ವಕ್ಕೇರಿಸಿದ್ದಾರೆ. ಶತ–ಶತಮಾನಗಳಿಂದ ಪೂಜಿಸಿಕೊಳ್ಳುತ್ತಿರುವ, ಗುಡಿಯೊಳಗೆ ಬೆಚ್ಚಗೆ ಕಣ್ಮುಚ್ಚಿ ಕುಳಿತಿರುವ, ಭಕ್ತರನ್ನು ಶೋಷಣೆಮಾಡುತ್ತಿರುವ ಜಡ ದೇವರುಗಳನ್ನು ಗಂಟೆ ಜಾಗಟೆಗಳಿಂದ ಬಡಿದು ಸಮುದ್ರಕ್ಕೆ ತಳ್ಳಬೇಕೆಂದು ಆಕ್ರೋಶ ವ್ಯಕ್ತಪಡಿಸಿದ್ದಾರೆ.

ಕುವೆಂಪುರವರು 'ಭಾರತ ತಪಸ್ವಿನಿ'-ಕವನದಲ್ಲಿ ಸ್ವಾತಂತ್ರ್ಯಕ್ಕಾಗಿ, ಬಿಡುಗಡೆಯ ಮೋಕ್ಷಕ್ಕಾಗಿ ಭಾರತಮಾತೆಯು ತಪಸ್ಸಾಚರಿಸುತ್ತಿದ್ದಾಳೆಂದು ವರ್ಣಿಸಿರುವರು. ವೇದ ಋಷಿಗಳ ಈ ಭೂಮಿಸ್ವರ್ಗವಾಗಿತ್ತು. ಬ್ರಿಟೀಷರ ದಬ್ಬಾಳಿಕೆಯಿಂದ ನರಕವಾಗಿದೆ. ಸ್ವಾತಂತ್ರ್ಯ ಹೋರಾಟವೆಂಬುದು ಸ್ವರ್ಗ-ನರಕಗಳ, ಸಾವು-ಬದುಕಿನ ಹೋರಾಟವಾಗಿದೆ. ಬ್ರಿಟೀಷರ ಆಧುನಿಕ ನಾಗರಿಕತೆ ಎಂಬ ವಿಷಸರ್ಪವು ಪ್ರಗತಿ ಎಂಬ ಹೆಸರಿನಲ್ಲಿ ನಮ್ಮನ್ನು ಕೊಲ್ಲಲು ಯತ್ನಿಸುತ್ತಿದೆ. ಹಿಂದಿನ ಪುಣ್ಯ ಮುಗಿದಿದೆ, ಆದ್ದರಿಂದ ನರಕಸದೃಶವಾಗಿದೆ; ಅದಕ್ಕಾಗಿ ಭಾರತಾಂಬೆ ಬಿಡುಗಡೆಗಾಗಿ ತಪಸ್ಸನ್ನಾಚರಿಸುತ್ತಿದ್ದಾಳೆ.

"...... ಇಂದಿನ ಮಹಾತಪಸ್ಸಿನ ಚಿತೆಯ
ರಕ್ತಿಮ ವಿಭೂತಿಯೊಳೆ ಮುಂದಿನ ನವೋದಯದ
ಧವಳಿಯ ಪಿನಾಕಧರನೈತಹನು; ಮತ್ತೊಮ್ಮೆ
ಭಾರತಾಂಬೆಯು ಜಗದ ಬೆಳಕಾಗುವಳು,"
(ಶ್ರೀಕಂಠಯ್ಯ ಬಿ.ಎಂ. (ಸಂ), ೧೯೫೫, ಪುಟ-೧೫೨)

ಈ ತಪಸ್ಸಿನ ಫಲದಿಂದ ಸ್ವತಂತ್ರಗೊಂಡು ಚಕ್ರವರ್ತಿನಿಯಾಗಿ ಹಿಂದಿನಂತೆ ವೈಭವ-ಗೌರವಾದರಗಳನ್ನು ಹೊಂದಿ ಜಗದ ಬೆಳಕಾಗುವಳು. ಹೀಗೆ ರಾಷ್ಟ್ರೀಯ ಚಳುವಳಿಯನ್ನು ಪುರಾತನ ಋಷಿಸದೃಶವಾದ ಭವ್ಯ ಪರಂಪರೆಯ ಕಲ್ಪನೆಯಲ್ಲಿ ಪ್ರತಿಮಿಸಿದ್ದಾರೆ.

"ದೇಶ ಭಕ್ತನ ಬಯಕೆ'-ಕವನದಲ್ಲಿ ದೇಶಕ್ಕೆ ಸ್ವಾತಂತ್ರ್ಯ ತಮ್ಮ ಜೀವಿತಾವಧಿಯಲ್ಲಿ ಬರುತ್ತದೆಯೋ ಇಲ್ಲವೋ ಎಂಬ ಶಂಕೆ ಕವಿಗೆ: ಈ ಜನ್ಮದಲ್ಲಿಯೇ ಭಾರತ ಮಾತೆ ಸ್ವತಂತ್ರ ಎಂಬ ಹೆಮ್ಮೆಲಭಿಸದಿದ್ದರೆ-

"..........................................ಮತ್ತೆನ್ನ
ಮರುವುಟ್ಟಿಸಲ್ಲಾ ದೊಡಂ ಪೆತ್ತು ಈ ನಿನ್ನ
ಕಂದನ ಬಯಕೆಯಂ ಸಲಿಸಿ, ದೇವಿ, ಕೃಪೆದೋರು!
ಹುಟ್ಟಿಸೆನ್ನಂ ಮರಳಿ ಮರಳಿ ಬಂಧನ ನೂರು
ಚೂರಾಗಿ ನಿನಗೆ ಮೋಕ್ಷಂ ಪೂರ್ಣ ದೊರೆವನ್ನ!"
(ಕುವೆಂಪು,೧೯೬೩, ಪುಟ-೬೧)

-ನಿನಗೆ ಸ್ವತಂತ್ರ ಬರುವವರೆಗೂ ಮರಳಿ ಮರಳಿ ತನಗೆ ಜನ್ಮ ಕೊಡಬೇಕೆಂದೂ, ಅದನ್ನು ನೋಡುವ ನಿನ್ನ ಕಂದನ ಬಯಕೆಯನ್ನು ಈಡೇರಿಸಬೇಕೆಂದೂ ಭಾರತ ಮಾತೆಯಲ್ಲಿ ಪ್ರಾರ್ಥಿಸಿಕೊಂಡಿದ್ದಾರೆ.

'ಸತ್ತನೆ ಸೈನ್ಯಪತಿ'-ಕವನದಲ್ಲಿ ಭಾರತದ ರಾಷ್ಟ್ರೀಯ ಚಳುವಳಿಯ ನೇತೃತ್ವ ವಹಿಸಿದ್ದ ಮಹಾತ್ಮನು ಹುತಾತ್ಮನಾದಾಗ ಸ್ವಾತಂತ್ರ್ಯ ದೇವಿಯು 'ಮುಂದೇನು ಗತಿ?, ತಾಯ್ನಾಡಿಗೆ ಇನ್ನಾರು

ಗತಿ?, ಈ ಮಹಾತ್ಮನನ್ನೇ ಎಲ್ಲರೂ ನೆಚ್ಚಿದ್ದರು. ಇನ್ನು ಜನತೆ ಮುಂದೆ ನಡೆಯದೆ, ಹಿಂಜರಿದರೆ ಗತಿ ಏನು?'-ಎಂದು ಬಗೆಬಗೆಯಾಗಿ ಪರಿತಪಿಸುವ ಚಿತ್ರಣವನ್ನು ಕೊಟ್ಟಿರುವರು.

"ಭಾರತದ ರಾಷ್ಟ್ರೀಯ ರಣ ಹೋಮ ಕುಂಡದಲಿ
ಮತ್ತೊಂದು ಯಜ್ಞಪಶು ಬಲಿಯಾಯ್ತು!
..............................................................
........ಸ್ವಾತಂತ್ರ್ಯ ದೇವಿ ರೋದಿಪಳು, ಬಳಿ
ನಿಂತು, ಕಂಬನಿ ಹೊನಲ ಸೂಸಿ- ಮುಂದೇನು ಗತಿ?"
(ಕುವೆಂಪು,೧೯೬೩, ಪುಟ-೭೨)

ಎಂದು ದುಃಖಿತಳಾಗಿದ್ದಾಳೆ.

ಪು.ತಿ.ನರಸಿಂಹಾಚಾರ್ಯರು 'ಮುನಿದ ಭಾರತ' ಕವನದಲ್ಲಿ ಭಾರತೀಯರ ಪರದಾಸ್ಯ-ಪರಕೀಯರಿಂದ ಶೋಷಣೆಯ ಹೀನ ಸ್ಥಿತಿಯು, ಭಾರತಾಂಬೆಯು ನಮ್ಮ ಮೇಲೆ ಮುನಿದು ಕೊಟ್ಟ ಶಾಪವೆಂದು ಬಗೆದಿರುವರು. ಇದಕ್ಕೆ ಗ್ರೀಕ್ ಪೌರಾಣಿಕ ಪ್ರಸಂಗದ ಹೋಲಿಕೆಯನ್ನು ಕೊಟ್ಟಿರುವರು. ಗ್ರೀಕ್ ಪುರಾಣದಲ್ಲಿ ಜ್ಯುಪಿಟರ್‌ನೆಂಬ ದೇವರು ತನ್ನ ಮಗನಿಗೆ ಕೊಟ್ಟ ಶಾಪದಿಂದ ಇವನಿಗೆ ಅನ್ನ-ನೀರು-ಸಂಪತ್ತು ಎಲ್ಲಾ ಇದ್ದೂ ಆತನ ಹಸಿವು-ನೀರಡಿಕೆ-ತೃಷೆಗಳು ತೀರದೆ ಪ್ರಾಣವನ್ನೇ ಹಿಂಡುತ್ತಿರುತ್ತವೆ.

"ಅಂದಿನೀ ಕತೆ ಪಾಡೆ ದಿಟಮಾಗೆ, ಭಾರತವೇ
ಆವ ಪಾತಕಕಾಗಿ ನಿನ್ನ ಮಕ್ಕಳನಿಂತು
ಹೇವವಿಲ್ಲದ ಹೀನ ದೀನತೆಯ ಶಾಪದೊಳು
ಬಂಧಿಸಿಹೆ, ನಿನ್ನ ವಿಪುಳೈಶ್ವರ್ಯವೆರವಾಗೆ"
(ನರಸಿಂಹಚಾರ್ಯ ಪು.ತಿ, ೧೯೯೮, ಪುಟ-೧೬೭)

ಗ್ರೀಕ್ ಪುರಾಣದಲ್ಲಿ ಜ್ಯೂಪಿಟರ್‌ನು ತನ್ನ ಮಗನಿಗೆ ಶಾಪ ಕೊಟ್ಟಂತೆ ನೀನು ಮನಗೆ ಯಾವ ಪಾಪಕ್ಕಾಗಿ ವೈರತ್ವವಿಲ್ಲದ ಬಡತನದ ಶಾಪ ಕೊಟ್ಟಿರುವೆ ಎಂದು ಕೇಳಿರುವನು. ಇಲ್ಲಿ ಆಧ್ಯಾತ್ಮಿಕ-ಸಾಂಸ್ಕೃತಿಕ ಸಮೃದ್ಧಿ-ಸಂಪತ್ತಿದೆ. ಆದರೂ ಇದು ನಿನ್ನ ಮಕ್ಕಳಿಗೆ ದಕ್ಕುತ್ತಿಲ್ಲ. ನಿನ್ನ ಮಕ್ಕಳಾದರೋ ಇವರನಾಲಗೆ ಯಾವುದೋ ಪರಕೀಯ ಸಂಸ್ಕೃತಿಯ ರುಚಿಗೆ ಚಾಚುತ್ತಿದೆ. "ಶುಷ್ಕಾತ್ಮರಾರ್ತಾಂತರಂಗರಾವೆಮ್ಮ ನೋಡು ಕಾರ್ಪಣ್ಯ ಶಾಪವನು ತೆಗೆದು ಋದ್ಧಿಯನು ನೀಡು"(ನರಸಿಂಹಾಚಾರ್ಯ ಪು.ತಿ, ೧೯೯೮, ಪುಟ-೧೬೭)ಎನ್ನುವಲ್ಲಿ ಭಾರತೀಯರ ಆತ್ಮ ಒಣಗಿ ಹೋಗಿದೆ, ಅಂತರಂಗ ದೀನವಾಗಿದೆ; ಬದುಕು ಕೃಪಣವಾಗಿದೆ. ಆದ್ದರಿಂದ ನಿನ್ನ ಜಿಪುಣತನ, ಬಡತನದ ಶಾಪವನು ತೆಗೆದು ಹಾಕಿ ಅಭಿವೃದ್ಧಿ, ಯಶಸ್ಸನ್ನು ನೀಡಬೇಕೆಂದು ಕವಿ ಪ್ರಾರ್ಥಿಸಿಕೊಂಡಿರುವನು. 'ತಾಯಿ ನಾಡಿನ ಕೋರಿಕೆ'-ಕವನದಲ್ಲಿ ಭಾರತ ಮಾತೆ ಬೇಡುವ 'ಬಿಡುಗಡೆಯ ಕಾಣಿಕೆ'ಯನ್ನು ಕೊಡಲು ವೀರರಿಗೆ ಹೇಳಿದ್ದಾರೆ.

"ಕೊಡು ವೀರ ನಿಮ್ಮೀತಾಯಿ ನೆಲಕೆ
ಬಿಡುಗಡೆ ಬೇಡುವ ಕಾಣಿಕೆ
..........................................................
..........................................................
ಶತೃ ದಮನ ಧೃತಿದಕ್ಷತೆ?
ಮಿತ್ರಂಕರ ಶಮಪಕ್ಷತೆ?"

(ನರಸಿಂಹಾಚಾರ್ಯ ಪು.ತಿ, ೧೯೯೮, ಪುಟ-೫೫೭)

ಸತ್ಯ ಧರ್ಮದಿಂದ, ಧೈರ್ಯ ದಕ್ಷತೆಯಿಂದ ಶತೃದಮನ ಮಾಡಿ, ನೆಮ್ಮದಿಯಿಂದ ಮಿತ್ರರೊಂದಿಗೆ, ಹೊಸ ಹುಟ್ಟನ್ನು ಬಾಳಲು ಬಿಡುಗಡೆ ಮಾಡಬೇಕು.

'ನಾಡಿನಕ್ಕರೆ'-ಕವನದ ಇತಿಹಾಸವಲೋಕನ ಭಾಗದಲ್ಲಿ ಸಾವಿರಾರು ವರ್ಷ ಪರಕೀಯರು ಈ ನಾಡಿಗೆ ಬಂದು ಆಳಿದುದನ್ನು ಮತ್ತು ಆಳುತ್ತಿರುವದನ್ನು ಪರಶಿವನ ತಪಸ್ಸು ಮತ್ತು ಹರಿಯ ಯೋಗ ನಿದ್ದೆಯಂತೆ-"ಭಾರತಾತ್ಮವೆ ನಿನಗೂ ಆಂತರ್ಮುಖತೆಯಾಯಿತೇ ಸಹಜದಿ?"-ಎಂದು ಪ್ರಶ್ನಿಸಿರುವನು. ಇತಿಹಾಸ ಕಾಲದಲ್ಲಿ ಬಂದ ವಿದೇಶಿ ಆಕ್ರಮಣಕಾರರಾದ ಶಕರು, ಹೂಣರು, ತುರ್ಕರು, ಮೊಘಲರು-ಮೊದಲಾದವರು ಈ ಮಣ್ಣಿನಲ್ಲಿ ಬೆರೆತು ನಮ್ಮವರೇ ಆದರು. ಆದರೆ ಈಗಿನ ಬ್ರಿಟೀಷರು ಸಂಪತ್ತನ್ನು ದೋಚಿಕೊಂಡು ಹೋಗಲು ಬಂದವರು. ಬ್ರಿಟೀಷರು ಬಂದ ಬಗೆಯನ್ನು ಕವಿ ಹೀಗೆ ಹೇಳಿದ್ದಾನೆ:

"ಬೇಸಾಯ ಬೆಳೆಯಪ್ಪ ಕಾಲಕೆ ಕಳೆಗಳೇಳ್ವವು ಹುಳುಗಳೂ
ಹಾಲು ತೇನೆಗೂಡುತಿರೆ ಪೈರೊಳು ಬೆಳ್ಳಕ್ಕಿ ಸಾಲಿಡುವುವು
ಇಂತೇ ಆಯಿತೋ ಆನೋ ನಮ್ಮಿ ನಾಡಿನ್ಯೆಸಿರಿ ಸುಗ್ಗಿಗೆ
ಈ ನೆಲದಿ ಹುಳು ಹುಪ್ಪಳೆ ಹೆಚ್ಚಿತು, ಬಿಳಿಯ ಜನ ಕಾಲೂರಿತು"

(ವೇಣುಗೋಪಾಲ.ಎ.ಎಸ್, ೧೯೯೧, ಪುಟ-೨೭೬)

ಪೈರು ಬೆಳೆಯುವಾಗ ಕಳೆ, ಕಸ, ಹುಲ್ಲು, ಹುಳು-ಹುಪ್ಪಡಿಗಳು ತೊಡಗಾಗುತ್ತವೆ. ಪೈರು ಬೆಳೆದು ಹಾಲ್ದೆನೆಯಾದಾಗ ಬೆಳ್ಳಕ್ಕಿಗಳು ಬರುತ್ತವೆ. ಈ ಬೆಳ್ಳಕ್ಕಿಗಳು ಬಂದಂತೆ ಬ್ರಿಟೀಷರು ನಮ್ಮ ನಾಡಿಗೆ ಬಂದರು. ಬ್ರಿಟೀಷರು ಹಿರಣ್ಯಾಕ್ಷದಂತೆ ಭಾರತದ ಆತ್ಮವನ್ನೇ ಆಕ್ರಮಿಸಿದರು. ನಯ, ವಂಚನೆ, ವೈಜ್ಞಾನಿಕತೆ, ಆಧುನಿಕತೆ-ಮೊದಲಾದ ಪಾಶಗಳಿಂದ-"ಬಂಧಿಸುತ ಕೊಂಡೊಯ್ದರು ಸಪ್ತಸಾಗರದಾಚೆ ತಮ್ಮಯ ನಾಡ ಮಂಚಕೆ ಬಿಗಿದರು"-ಎಂದು ದೇಶವು ಪಾರತಂತ್ರ್ಯಕೊಳ್ಳಗಾದುದನ್ನು ಬಣ್ಣಿಸಿದ್ದಾರೆ. ಇದೇ ಕವನದ ಮುಂದಿನ ಭಾಗ-"ಮುಂಜಾನೆಯ ಮುನ್ನೀರು"-ವಿನಲ್ಲಿ ಭಾರತದ ಬಿಡುಗಡೆಗಾಗಿ ಅವತಾರ ಪುರುಷನ. ಆಗಮನ ಕುರಿತು ಇಂತಿದೆ. "ದೇವನಿಲ್ಲಿಗೆ ಬರುವ ಮುನ್ನವೆ ದೇವದೂತರು ಬರುವರು"-ಅದರಂತೆ ದೇವತಾ ಪುರುಷನ (ಗಾಂಧೀಜಿಯ)ಆಗಮನಕ್ಕೆ ಮುನ್ನ ಶುಚಿಗೊಳಿಸಲು ರಾಜರಾಮ ಮೋಹನರಾಯ, ಗೋಖಲೆ, ರಾನಡೆ, ರಾಮಕೃಷ್ಣ ಪರಮಹಂಸ, ವಿವೇಕಾನಂದ ಇವರೆಲ್ಲರೂ ದೇವದೂತರಂತೆ ಬಂದು ಹೋದರು. ಇವರು ಬ್ರಿಟೀಷರ ಭೀತಿ-ವ್ಯಾಮೋಹದ

ಪಾಶಕ್ಕೊಳಗಾಗಲಿಲ್ಲ. ಇವರನ್ನು ಕವಿ "ಬುದ್ಧಿಯುಪ್ಪರಿಗೆಯಲ್ಲಿ ನೆಲಸಿದ ವಿಧಿ ವಿಲಕ್ಷಣ ಚತುರರು"– ಎಂದು ಬಣ್ಣಿಸಿರುವರು. ಹಾಗಾದರೆ "ರುದ್ರಜಟೆಯೊಳು ಸಿಲುಕಿದೀಹರಿಪದೆಗೆ ಬಿಡುಗಡೆಯೆಂದಿಗೆ?"– ಎಂದು ಕವಿ ತವಕಪಡುವರು. ಭಾರತವನ್ನು ಬಿಡುಗಡೆ ಮಾಡುವ ದೇವತಾ ಪುರುಷನು ಪೋರಬಂದರಿನಲ್ಲಿ ಅವತರಿಸುತ್ತಾನೆ. ಇದನ್ನು "ಕೃಷ್ಣನು ನಿರ್ಯಾಣವನು ಕಂಡಾನಾಡು" ಎಂದು ಗಾಂಧೀಜಿಯವರನ್ನು ಕೃಷ್ಣನ ಅವತಾರವೆಂದು ಕಂಡಿರುವರು. ಪು.ತಿ.ನ. ಅವರು ಈ ಕವನದಲ್ಲಿ ಭಾರತದ ಬಂಧನ–ಬಿಡುಗಡೆಯ ವಿಷಯ ವಸ್ತುವನ್ನು ತಮ್ಮ ಆಸಾಧಾರಣವಾದ ವೈಷ್ಣವದರ್ಶನದ ಹಿನ್ನೆಲೆಯಲ್ಲಿ ಪೌರಾಣಿಕ ವಸ್ತುವಿನೊಂದಿಗೆ ಸಮಕಾಲೀನ ವಸ್ತುವನ್ನು ಸಮೀಕರಿಸಿರುವರು.

'ಎಚ್ಚರು ಭಾರತ"–ಕವನದಲ್ಲಿ ಭಾರತವು ತನ್ನತನವನ್ನು ಕಾಯ್ದುಕೊಳ್ಳಬೇಕೆಂದು ಹಂಬಲಿಸಿದ್ದಾರೆ. ಪರಕೀಯರ ದಾಸ್ಯದಿಂದಾಗಿ ಅವರ ಮೋಹಕ್ಕೆ ಒಳಗಾಗಿ ತನ್ನ ವಿಶಿಷ್ಟ ಸಂಸ್ಕೃತಿ ಪರಂಪರೆಯನ್ನು ಬಿಟ್ಟು ಕೊಡದೆ ಅವುಗಳನ್ನು ಉಳಿಸಿಕೊಂಡೇ ಉನ್ನತಿ ಪಡೆಯಲು "ನಿನ್ನಿಂ ನಿನ್ನೇಳಿಗೆಗಳಿಸುತ ನೀ ನೀನಾಗಿರು ತಾಯ್ನೆಲವೇ"(ವೇಣುಗೋಪಾಲಎ.ಎಸ್, ೧೯೯೧, ಪುಟ–೨೮೭)ಎಂದು ಎಚ್ಚರಿಕೆ ಕೊಟ್ಟಿದ್ದಾರೆ. ಹೀಗೆ ಈ ಕವನದಲ್ಲಿ ಭಾರತೀಯತೆ, ರಾಷ್ಟ್ರೀಯತೆ ಪ್ರಜ್ಞೆಯನ್ನು ಜಾಗೃತಗೊಳಿಸಿದ್ದಾರೆ.

ವಿ.ಸೀತಾರಾಮಯ್ಯನವರು–"ತಾಯಿ ದೇವಿಗೆ" ಕವನದಲ್ಲಿ ಭಾರತ–ಮಾತೆಯ ಬಂಧನದ ಹೀನ ಸ್ಥಿತಿಯನ್ನು ಕಂಡು ಮರುಗಿದ್ದಾರೆ. ನಿನ್ನ ಮೂವತ್ತು ಕೋಟಿ ಮಕ್ಕಳು ಇವತ್ತಿಲ್ಲವಾದರೂ ಮುಂದೊಂದು ದಿನ ನಿನ್ನ ಬಂಧನ ಬಿಡಿಸುವರೆಂದು ನೀನು ನಂಬಿರುವೆ. ಆದರೆ ಅವರು–

"ತಾಯಿಳಲಲೀ ಕೀಳು ಜೀವಗಳ ಬೆಳೆಸುತ್ತ
ಅವಳ ಸ್ವಾತಂತ್ರ್ಯಗಳ ಮಾರಿ ಮೆರೆಯುತ್ತ
ತಮ್ಮಲ್ಲೆ ನಾಯ್ಗಳೊಲು ಕಾದಾಡಿ ಕರುಳನ್ನು
ಕುಯ್ಯುತಿಹ ಕುವರರಿದೊ ಬಾಳ್ವೆವಮ್ಮ!"
(ಸೀತಾರಾಮಯ್ಯವಿ. ೧೯೯೦, ಪುಟ–೮೨)

–ಎಂದು ಅಂದಿನ ರಾಷ್ಟ್ರೀಯ ನಾಯಕರಲ್ಲಿಯ, ಭಾರತೀಯರಲ್ಲಿಯ ಅನೈಕ್ಯತೆಯನ್ನು ಚಿತ್ರಿಸಿದ್ದಾರೆ.

"ಭಾರತ ಜಗದಂಬಾ"–ಕವನದಲ್ಲಿ ನಿನ್ನ ಕಂದರನ್ನು ಹರಸಿ ಸ್ವಾತಂತ್ರ್ಯ ಹೋರಾಟದ ರಣ ರಂಗಕ್ಕೆ ಕಳಿಸಬೇಕೆಂದು ಭಾರತ ಜಗದಂಬೆಗೆ ಪ್ರಾರ್ಥಿಸಿಕೊಳ್ಳಲಾಗಿದೆ.

"ಜಯ ಜಯ ಭಾರತ ಜಗದಂಬಾ
ನಮಿಪೆವು ಕುವರರು ಹರಸಮ್ಮಾ
ಹರಸುತೆ ರಂಗಕೆ ಕಳುಹಮ್ಮಾ
ಧರೆಯೇ ನೋಡಲಿ ಅಚ್ಚರಿಯ"

(ಸೀತಾರಾಮಯ್ಯವಿ. ೧೯೯೦, ಪುಟ-೩೪)

ವಿ.ಸೀ.ಯವರು-"ಪ್ರಾರ್ಥನೆ" ಕವನದಲ್ಲಿ ದಿಗ್ವಿಜಯಕೆ ಹರಸಬೇಕೆಂದು ಪ್ರಾರ್ಥಿಸಿಕೊಂಡಿದ್ದಾರೆ. ಭಾರತದಲ್ಲಿ ಪರಕೀಯರು ಕಡೆದಿಹ ವಿಷವನ್ನು ನೀನೇ ಕುಡಿದು ಮುಕ್ಕಣ್ಣನ ರೌದ್ರತೆಯನ್ನು ನಿನ್ನ ಮಕ್ಕಳ ಅಂತರಂಗಗಳಲ್ಲಿ ಹೋಗಿಸಬೇಕೆಂದೂ, ನಮ್ಮ ನಮ್ಮಲ್ಲಿಯ ಅನೈಕ್ಯತೆಗಳನ್ನು ನಿನ್ನ ಹಣೆಗಣ್ಣಿನಿಂದ ಸುಟ್ಟು ಬೂದಿಮಾಡಬೇಕೆಂದು ಭಾರತ-ಮಾತೆಯನ್ನು ಕೇಳಿಕೊಂಡಿರುತ್ತಾರೆ. ಅಲ್ಲದೆ-

"ನಿನ್ನ ಡಮರುಗ ರವವು ದಿಕ್ಕುಗಳ ನಡುಗಿಸಲಿ
ನಿನ್ನ ಮೊನೆ ಕೈಶೂಲವಿರಿವಿರಿಯಲಿ
ನಿನ್ನ ನಗೆ ಮಕ್ಕಳಿಗೆ ಗೆಲ್ವದಟನೀಯಲೈ
ನಿನ್ನ ಕೋಪವು ಅರಿಯ ಮದವುರಿಸಲಿ"

(ಸೀತಾರಾಮಯ್ಯವಿ. ೧೯೯೦, ಪುಟ-೭೯)

-ನಿನ್ನ ಡಮರದ ಗಂಭೀರ ನಾದವು ದಿಕ್ಕುಗಳನ್ನೇ ನಡುಗಿಸಲಿ, ನಿನ್ನ ನಗೆ ಮಕ್ಕಳಿಗೆ ಗೆಲುವಿನ ಭರವಸೆ ನೀಡಲಿ-ಎಂದು ಬಗೆ ಬಗೆಯಾಗಿ ಕವಿ ಪ್ರಾರ್ಥಿಸಿಕೊಂಡಿದ್ದಾರೆ.

ಹೀಗೆ ನವೋದಯದ ಹಲವಾರು ಪ್ರಮುಖ ಕವಿಗಳು ಭಾರತದ ಬಂಧನ ಬಗೆಗೆ ವ್ಯಥೆ-ಮರುಕ ಪಟ್ಟಿದ್ದಾರೆ. ಓದುಗರಿಗೆ ಅಂದಿನ ವಾಸ್ತವದ ಕಹಿಯನ್ನು. ಅರುಹಿಸಿದ್ದಾರೆ. ಬಿಡುಗಡೆಗಾಗಿ ಹಂಬಲಿಸಿದ್ದಾರೆ; ಜನತೆಯು ಹಂಬಲಿಸುವಂತೆ ಮನ ಮಿಡಿದಿದ್ದಾರೆ. ಬಿಡುಗಡೆಗಾಗಿ ಭಾರತಾಂಬೆಯನ್ನೇ ದೈನ್ಯತೆಯಿಂದಲೋ, ಧ್ಯಾನ ಪ್ರಧಾನವಾಗಿಯೋ ಪ್ರಾರ್ಥಿಸಿಕೊಂಡಿದ್ದಾರೆ. ಇದಕ್ಕಾಗಿ ಹರಸಬೇಕೆಂದೂ ಭಿನ್ನವಿಸಿಕೊಂಡಿರುವರು.

**೪.೫. ಸ್ವಾತಂತ್ರ್ಯ ಹೋರಾಟಕ್ಕೆ ಕರೆ:**

ಕನ್ನಡ ನವೋದಯ ಕವಿಗಳು, ಹುಲ್ಲುಕಡ್ಡಿಯೂ ಬ್ರಹ್ಮಾಸ್ತ್ರವಾಗಿ ವಿದೇಶಿ ಪ್ರಭುತ್ವವನ್ನು ವಿರೋಧಿಸುವಂತಹ ಸನ್ನಿವೇಶದಲ್ಲಿ ಸ್ವಾತಂತ್ರ್ಯ ಸಂಪಾದನೆಗೆ ವೀರಾವೇಶದಿಂದ ಹೋರಾಡುವಂತೆ ಜನತೆಗೆ ತಮ್ಮ ಕಾವ್ಯದ ಮೂಲಕ ಕರೆಕೊಟ್ಟಿದ್ದಾರೆ, ಎಚ್ಚರಿಸಿದ್ದಾರೆ. ತಾವೂ ಹೋರಾಡುವ ಕೆಚ್ಚು-ನೆಚ್ಚನ್ನು ವ್ಯಕ್ತಪಡಿಸಿದ್ದಾರೆ. ಅಲ್ಲದೇ ಆ ರೀತಿಯ ಹೋರಾಟಕ್ಕೆ ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿ ನೀಡಿದ್ದಾರೆ. ಇದನ್ನು ನವೋದಯದ ಪ್ರಮುಖ ಕವಿಗಳ ಕಾವ್ಯಗಳಲ್ಲಿ ಕಾಣುತ್ತೇವೆ. ನವೋದಯದ ಮೊದಲ

ತಲೆಮಾರಿನ ಪ್ರಮುಖ ಕವಿಗಳಲ್ಲೊಬ್ಬರಾದ ಪಂಜೆ ಮುಂಗೇಶರಾಯರು 'ತೂಕಡಿಕೆಯನು ಕಳೆಯದೇಕೆ ಕುಳಿತಿಹೆ ಗೆಳೆಯ?'–ಕವನದಲ್ಲಿ

"ತೂಕಡಿಕೆಯನು ಕಳೆಯದೇಕೆ ಕುಳಿತಿಹೆ ಗೆಳೆಯ?
ಸಾಕು ಸುತ್ತಲೂ ಕಣ್ದೆರೆದು ನಿಂದು
ಲೋಕದಲಿ 'ವಂದೇ ಮಾತರಂ' ಎಂಬುದೊಂದೇ ಮಾ
ತೀ ಕಿವಿಯನೊಡೆಯುತಿರೆ ಉಚ್ಚಳಿಸಿ ಬಂದು"

(ಪಂಜೇರಾಮರಾಯ(ಸಂ), ೧೯೭೩, ಪುಟ–೭೮)

–ಎಂದು ಸ್ವಾತಂತ್ರ್ಯ ಚಳುವಳಿ ಸಂದರ್ಭದಲ್ಲಿ ಬಂಕಿಮ ಚಂದ್ರರ 'ವಂದೇ ಮಾತರಂ' ಗೀತೆ ದಿವ್ಯ ಮಂತ್ರವಾಗಿತ್ತು. ದೇಶದ ಜನತೆಯ ನರನಾಡಿಗಳಲ್ಲಿ ವಿದ್ಯುತ್ ಸಂಚಾರದಂತೆ ಪ್ರವಹಿಸಿ ಸ್ವಾತಂತ್ರ್ಯ ಚಳುವಳಿಗೆ ಪ್ರೇರೇಪಿಸುತ್ತಿತ್ತು. ಇದು ರಾಷ್ಟ್ರೀಯ ಚಳುವಳಿಯಲ್ಲಿ ಭಾಗವಹಿಸಲು ಕರೆಕೊಡುವ, ರಾಷ್ಟ್ರೀಯತೆ ಪ್ರಜ್ಞೆಯನ್ನು ಜಾಗೃತಗೊಳಿಸುವ ಘೋಷವಾಕ್ಯವಾಗಿತ್ತು. ಇದನ್ನು ಗಮನಿಸದೆ ನಿದ್ರೆಯಲ್ಲಿದ್ದರಂತೆ ತಟಸ್ಥವಾಗಿದ್ದವರನ್ನು ಪಂಜೆ ಮಂಗೇಶರಾಯರು ಈ ಕವನದ ಮೂಲಕ ಎಚ್ಚರಿಸಿದ್ದಾರೆ. ದೇಶದ ಇತರ ಪ್ರಾಂತ್ಯಗಳಿಗೆ ಮಾದರಿಯಾಗುವಂತೆ ಬಂಗಾಲವು ರಾಷ್ಟ್ರೀಯ ಚಳುವಳಿಯಲ್ಲಿ ಮುಂದಿದೆ. ಆದರೆ ನಾವು ಜಾತಿ–ಮತ–ಪಂಥಗಳ ಸುಳಿಗೆ ಸಿಕ್ಕು ರಾಷ್ಟ್ರೀಯ ಆಂದೋಲನದಲ್ಲಿ ಹಿಂದುಳಿದಿದ್ದೇವೆ. ಬಂಗಾಲವು "ಪತಿತರಿಗೆ ಕೈಗೊಟ್ಟು, ಭಾರತ ಧ್ವಜನೆಟ್ಟು, ಪಥದೋರಿ ಬಂಗಾಲ ಹಾಯುತಿರೆ ಮುಂದು!"(ಪಂಜೇರಾಮರಾಯ(ಸಂ), ೧೯೭೩, ಪುಟ–೭೮)ಎಂದು ನಾವು ಆ ಮಾದರಿಯಲ್ಲಿ ನಡೆಯಬೇಕೆಂದು ಹೇಳಿದ್ದಾರೆ.

ಬ್ರಿಟೀಷರು ಭಾರತದ ಇತರ ಪ್ರಾಂತಗಳಿಗಿಂತ ಅರ್ಧ ಶತಮಾನ ಮೊದಲೇ ಬಂಗಾಲ ಪ್ರಾಂತವನ್ನು ವಶಪಡಿಸಿಕೊಂಡು ಆಡಳಿತಮಾಡಿದ್ದರಿಂದ 'ಇಂದು ಬಂಗಾಲ ಯೋಚಿಸದ್ದನ್ನು ನಾಳೆ ಭಾರತ ಯೋಚಿಸುತ್ತದೆ'–ಎನ್ನುವಷ್ಟರ ಮಟ್ಟಿಗೆ ಅದು ಬೌದ್ಧಿಕ ವಿಕಾಸಹೊಂದಿತ್ತು. ಭಾರತದ ಇತರ ಪ್ರಾಂತಗಳಿಗಿಂತ ರಾಷ್ಟ್ರೀಯ ಚಳುವಳಿ ಮೊದಲು ಅಲ್ಲೇ ತೀವ್ರವಾಗಿತ್ತು (ಆದ್ದರಿಂದ ಬ್ರಿಟೀಷರು ಅದರ ಶಕ್ತಿಯನ್ನು ಒಡೆಯಲೆಂದೇ, ರಾಷ್ಟ್ರೀಯ ಚಳುವಳಿಯನ್ನು ದಮನ ಮಾಡಲೆಂದೇ ೧೯೦೫ರಲ್ಲಿ ಬಂಗಾಲವನ್ನು ವಿಭಜನೆ ಮಾಡಿದ್ದರು).

ಪಂಜೆ ಮಂಗೇಶರಾಯರು ಆಧ್ಯಾತ್ಮಿಕ ರಾಷ್ಟ್ರೀಯವಾದದ ಮಾರ್ಗಕ್ಕಿಂತ ಕ್ಷಾತ್ರ ತೇಜಸ್ಸಿನ (ತೀವ್ರವಾದಿಗಳ) ರಾಷ್ಟ್ರೀಯವಾದದ ಮಾರ್ಗವನ್ನೇ ಅನುಸರಿಸಬೇಕೆಂಬ ನಿಲುವನ್ನು ತಾಳಿದವರು. ಅಂತೆಯೇ–"ಕಳಚಿಬಿಡು ಆಧ್ಯಾತ್ಮ ನಿದ್ದೆಯನು ಬಂಧು!"–ಎಂದು ಆಧ್ಯಾತ್ಮಿಕ ಮಾರ್ಗದವರಿಗೆ ಹೇಳಿರುವರು. ಸಂಪ್ರದಾಯದ ಜಡತ್ವವನ್ನು ಬಿಟ್ಟು ಹೊಸದಾಗಿ ಉದಯವಾಗುತ್ತಿರುವ ಆಧುನಿಕತೆಯನ್ನು ಅಳವಡಿಸಿಕೊಳ್ಳಲು ಹೀಗೆ ಹೇಳಿದ್ದಾರೆ.

"ಹೊದ್ದಿರ್ದ ವೇದ ಕಂಬಳಿ ಮೂಲೆಗ್ಹೊಂದು!
ಎದ್ದು ಬರುತಿಹೆ ಬಾನು, ಎದ್ದಿತ್ತೈ ಜಪಾನು!
ಬಿದ್ದುಕೊಂಡಿರುವೇಕೆ ಕತ್ತ ಲೊಳಿಂದು?"

(ಪಂಜೇರಾಮರಾಯ(ಸಂ), ೧೯೭೩, ಪುಟ-೭೯)

ಆಧುನಿಕತೆ ಎಂಬ ಸೂರ್ಯನು ಉದಯವಾಗಿದ್ದರೂ ನಾವಿನ್ನೂ ಸಂಪ್ರದಾಯದ ಜಡತ್ವನ್ನೇ ಹೊದ್ದುಕೊಂಡು ಮಲಗಿದ್ದೇವೆ. ಜಪಾನ್ ದೇಶ ಆಧುನಿಕತೆಯನ್ನು ಅಳವಡಿಸಿಕೊಂಡು ಜಗತ್ತಿನಲ್ಲಿಯೇ ಶಕ್ತಿಶಾಲಿ ರಾಷ್ಟ್ರವಾಗಿದೆ. ಅದರಂತೆ ನಮ್ಮ ದೇಶವು ಆಗಬೇಕೆಂದು ಅಪೇಕ್ಷಿಸಿದ್ದಾರೆ. ಪಂಜೆ ಮಂಗೇಶರಾಯರು ತೀವ್ರವಾದಿಗಳನ್ನು ಅದರಲ್ಲೂ ಸುಭಾಸ್ ಚಂದ್ರ ಬೋಸ್‌ರನ್ನು ಮೆಚ್ಚಿಕೊಂಡಂತೆ ತೋರುತ್ತದೆ. ಎರಡನೇ ಜಾಗತಿಕ ಮಹಾಯುದ್ಧದಲ್ಲಿ ಸುಭಾಸ್ ಚಂದ್ರಬೋಸರು ಜಪಾನ್‌ಪರ ಭಾಗವಹಿಸಿ ಭಾರತದ ಸ್ವಾತಂತ್ರ್ಯ ಚಳುವಳಿಗೆ ಅದರ ಸಹಾಯ-ಸಹಕಾರ ಕೋರಿದವರು. ಅಲ್ಲದೆ ಅಲ್ಲೆ ಸೈನ್ಯ ಕಟ್ಟಿದವರು. ಭಾರತೀಯ ಯುವಕರಿಗೆ- 'ನೀವು ನನಗೆ ರಕ್ತ ಕೊಡಿ, ನಾನು ನಿಮಗೆ ಸ್ವಾತಂತ್ರ್ಯ ಕೊಡುತ್ತೇನೆ'-ಎಂದಿರುವರು. ಇವುಗಳ ಪ್ರಭಾವವನ್ನು ಪಂಜೆ ಮಂಗೇಶರಾಯರ ಕವನಗಳಲ್ಲಿ ಕಾಣಬಹುದಾಗಿದೆ.

ಕಡೆಂಗೋಡ್ಲು ಶಂಕರ ಭಟ್ಟರ-'ವಸ್ತ್ರಾಪಹರಣ'-ಕೃತಿಯು ಪೌರಾಣಿಕ ವಸ್ತುವನ್ನು ಒಳಗೊಂಡಿದ್ದರೂ ಇದರಲ್ಲಿ ದೇಶದ ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದ ವಿಷಯಗಳನ್ನು ಸಮೀಕರಿಸಿರುವರು. ರಾಷ್ಟ್ರೀಯ ಚಳುವಳಿಯಲ್ಲಿ ಬ್ರಿಟೀಷರ ಆಸೆ-ಆಮಿಷಗಳಿಗೆ ಒಳಗಾಗಿ ಅವರ ಪರವಾಗಿದ್ದತಂಹ ದೇಶದ್ರೋಹಿಗಳನ್ನು ಕುರಿತು:

"ಪರರ ಮನೆಯನು ಹಿಡಿದು ಧನವಪ
ಹರಿಸಿ ಗೃಹವಾಸಿಗಳಪೀಡಿಸೆ
ಬರಿದೆ ಬೊಂಬೆಯ ತೆರದೊಳೀಕ್ಷಿಪರುಂಟೆ ಭೂತಳದಿ?
ನಿರಪರಾಧಿಯ ಕುಣಿಸೆ ಮೌನವ
ಧರಿಸಿ ಮನವನು ಬಿಗಿ ಹಿಡಿವ ಮನು
ಜರ ಮನವೋ ಗೋರ್ಕಲ್ಲೊ............"

(ರಾಜಮ್ಮ ನಾಯಕ, ೧೯೮೨, ಪುಟ-೨೪೨)

-ಎಂದು ಸ್ವಾತಂತ್ರ್ಯ ಚಳುವಳಿಯಲ್ಲಿ ಬ್ರಿಟೀಷರೊಂದಿಗೆ ಕೈಜೋಡಿಸಿದ ದೇಶ ದ್ರೋಹಿಗಳನ್ನು ಕುಟುಂಬದ ಸದಸ್ಯನೊಬ್ಬನು ಪಕ್ಕದ, ವೈರಿಯ ಮನೆಯವರ ಸಹಕಾರದಿಂದ ಮನೆಯ ಧನ-ದಾನ್ಯ ಅಹಪರಿಸುವ ಕುಕೃತ್ಯಕ್ಕೆ ಹೋಲಿಸಿ ಅಂತವರು ಮನುಷ್ಯರೇ ಅಲ್ಲವೆಂದು ದೋಷಿಸಿದ್ದಾರೆ.

ಆನಂದಕಂದರು 'ಬಾಳಿದು ಕಾಳೆಗದ ಕಣ!'-ಕವನದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಕಹಳೆಯನ್ನು ಊದಿದ್ದಾರೆ. ಗೆಳೆಯಂತೆ ನಟಿಸುತ ಬಂದ ಬ್ರಿಟೀಷರು ನಮ್ಮ ನಾಡಿನಲ್ಲಿ ತಿಂದು ತೇಗಿ, ನಮ್ಮವರನ್ನು ಕೊಂದು ಆಳುತ್ತಿದ್ದಾರೆ. ಆದ್ದರಿಂದ ಕಾಳಗವು ಅನಿವಾರ್ಯವಾಗಿದೆ. ಇದು ಬೇಡ ಎನ್ನುವವರಿಗೆ ಕವಿ-

" 'ಬೇಡ ಕದನ', ಎಂದೊರೆವಾ
ಕೇಡುಗಾರನೆಲ್ಲರುವ.....?
ಹೇಡಿ ಏನಬಲ್ಲವನ?
ನಾಡಿಗೆ ಕಾಳಗವೆ ಜೀವ!"
(ಬೆಟಗೇರಿ ಕೃಷ್ಣ ಶರ್ಮ, ೧೯೫೧, ಪುಟ–೪೨)

–ಎಂದು ಗುಡುಗಿದ್ದಾರೆ. ಬ್ರಿಟೀಷರ ದಮನ ದಬ್ಬಾಳಿಕೆಯಿಂದ ಭಾರತೀಯರು ಮಡಿಯುತ್ತಿರುವಾಗ ಶಾಂತಿ ಬಯಸಿದವರಿಗೂ ಕವಿ–

"ಈ ಸ್ಮಶಾನ ಶಾಂತಿಯು  ಶಾಂತಿಯೆ ಇದು? ಬ್ರಾಂತಿಯು
ನಿಮ್ಮೆಲ್ಲರ ಮಾನವತನ
ಬೇಯುತಲಿದೆ ನೋಡಿರದನ"
(ಬೆಟಗೇರಿ ಕೃಷ್ಣ ಶರ್ಮ, ೧೯೫೧, ಪುಟ–೪೩)

–ಎಂದು ಸಿಡಿಮಿಡಿಗೊಂಡಿದ್ದಾರೆ. ಬ್ರಿಟೀಷರ ಕ್ರೌರ್ಯದಲ್ಲಿ ನಮ್ಮ ಮಾನವತನ ಬೆಂದು ಕರಕಲಾಗುತ್ತಿರುವಾಗ ಶಾಂತಿಯಿಂದ ಇರುವ ನೀತಿ ಹೇಡಿಯ, ಹೆಣದ ನೀತಿ. ಬ್ರಿಟೀಷರಿಗೆ ನಾವು ಬದುಕಿದ್ದೇವೆಂಬ ಕುರುಹನ್ನು ತೋರಿಸಲು ಕದನವೇ ಸರಿಯಾದ ಮಾರ್ಗ. ಇದನ್ನು ಬಿಟ್ಟು ಬೇರೆ ಮಾರ್ಗ ಉಚಿತವಲ್ಲವೆಂದು ಬಗೆದಿದ್ದಾರೆ. ಈ ಕಾಳಗಕ್ಕೆ ಹಳೆ ಆಯುಧ ಬಿಟ್ಟು ಹೊಸ ಆಯುಧ ಹಿಡಿಯಲು ಹೇಳಿರುವರು.

"ಬಿಡಿರಿ ಬಿಡಿರಿ ಹಳೆಯಾಯುಧ,
ಕೊಡಲಿ ಕತ್ತಿ ಬಿಲ್ಲು ಗದಾ
ಹೊಸತು ಕಾಲ, ಹೊಸ ಕಾಳಗ,.
ಹೊಸ ಕೈದುವ ಹುಡುಕಿರೀಗ"
(ಬೆಟಗೇರಿ ಕೃಷ್ಣ ಶರ್ಮ, ೧೯೫೧, ಪುಟ–೪೪)

–ಹೀಗೆ ಹೊಸ ಆಯುಧ ಹಿಡಿದು ಕಹಳೆಯ ಕೂಗು ಕೇಳಿ ಎದ್ದು ಬಂದವ ಬಾಳುತ್ತಾನೆ; 'ಏಳದಿದ್ದವ ಬೀಳುವ!'–ಎಂದು ಮಾರ್ಮಿಕವಾಗಿ ಆಧುನಿಕತೆಗೆ ತೆರೆದುಕೊಳ್ಳಲು ಹೇಳಿರುವರು. ಆನಂದ ಕಂದರು ಮಂದಗಾಮಿಗಳ ಮಾರ್ಗವನ್ನು ನಿರಾಕರಿಸಿ ತೀವ್ರವಾದಿಗಳ ಮಾರ್ಗವನ್ನು ಅನುಸರಿಸಿ ಕ್ಷಾತ್ರದಿಂದ ಹೋರಾಡುವ ಮನೋಧರ್ಮವನ್ನು ವ್ಯಕ್ತಪಡಿಸಿರುವದು ಕಂಡು ಬರುತ್ತದೆ.

ಕುವೆಂಪುರವರು ಹಲವಾರು ಕವನಗಳಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ ದಿಟ್ಟತನದಿಂದ ಹೋರಾಡಲು ಕರೆಕೊಟ್ಟಿದ್ದಾರೆ. 'ಪಾಂಚಜನ್ಯ'–ಸಂಗ್ರಹದ ಕೆಲವು ಪದ್ಯಗಳಲ್ಲಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ಅಣಿಯಾಗುವಂತೆ ಪಾಂಚಜನ್ಯ ಮೊಳಗಿಸಿದ್ದಾರೆ. 'ಪಾಂಚಜನ್ಯ'–'ಕವನದಲ್ಲಿ ಹೋರಾಟಕ್ಕೆ 'ಜಗ್ಗದೆಯೆ, ಕುಗ್ಗದೆಯೆ, ಹಿಗ್ಗಿನಡೆಮುಂದೆ' ಎಂದಿರುವರು. ಪ್ರಾಣಾರ್ಪಣೆಗೂ ಸಿದ್ಧರಿರಬೇಕು. ಪ್ರಾಣಾರ್ಪಣೆಯಾದರೂ ಕವಿ ಭರವಸೆಯನ್ನು ಬಿಟ್ಟಿಲ್ಲ.

“ನಾನಳಿವೆ ನೀನಳಿವೆ
ನಮ್ಮೆಲುಬುಗಳ ಮೇಲೆ
ಮೂಡುವುದು ಮೂಡುವುದು
ನವಭಾರತದ ಲೀಲೆ!”

(ಕುವೆಂಪು,೧೯೬೩, ಪುಟ–೫)

–ಎಂದು ಆಶಾಭಾವನೆಯನ್ನು, ನೆಚ್ಚನ್ನು ‘ಮುಂದೆಯದು ತೋರುವದು ಬಿಡುಗಡೆಯ ಹಬ್ಬದಲಿ!’–ಎಂಬ ವಿಶ್ವಾಸವನ್ನು, ವ್ಯಕ್ತಪಡಿಸಿರುವರು. ಕೆಚ್ಚೆದೆಯ ಕಲಿಯಾದನು ಕಾಳಗದಲಿ ಬೆಚ್ಚಿ ಬೆದರಿದರೆ ಭದ್ರಕಾಳಿಗೆ ಅವನೇ ಬಲಿಯಾಗುತ್ತಾನೆ. ದೇಶದ ಹಿತ–ಮತ–ಸುತರೇ ನನ್ನ ಹಿತ–ಮತ–ಸಹೋದರರರೆಂದು, ಭಾರತಾಂಬೆಯ ಮುಕ್ತಿಯೆ ನನ್ನಯೆಂದು ಬಗೆದು–

“ನುಗ್ಗು ಮುಂದಕೆ ಧೀರ
ಕಾಳಗದ ಕೊಲೆಗೆ
ನುಗ್ಗು ಮರಣಕೆ ವೀರ
ಸಗ್ಗದಾ ನೆಲಗೆ!”

(ಕುವೆಂಪು,೧೯೬೩, ಪುಟ–೬)

–ಎಂಬಲ್ಲಿ ‘ಮಾಡು ಇಲ್ಲವೆ ಮಡಿ’ ಎಂಬ ಮನೋಧರ್ಮವನ್ನು, ಹೋರಾಟದಲ್ಲಿ ಸತ್ತರೆ ವೀರಸ್ವರ್ಗವೆನ್ನುವ ನಂಬಿಕೆಯನ್ನು ವ್ಯಕ್ತಪಡಿಸಿರುವರು. ಸಾವನ್ನು ಲೆಕ್ಕಿಸದೆ ಹೋರಾಟದಲ್ಲಿ ನುಗ್ಗಿದವನಿಗೆ ಕವಿ ‘ತಡೆಯಬಂದವರ ಇರಿ! ಒಲಿಯುವಳು ಜಯದ ಸಿರಿ’– ಎಂದು ಗೆಲುವನ್ನು ಪಡೆಯುವ ಬಗೆಯನ್ನು ಅರುಹಿದ್ದಾರೆ. ರಣ ರಂಗದ ಭೀಕರತೆ ಕ್ರೌರ್ಯತೆಯನ್ನು ಬೆಚ್ಚಿ–ಬೆರಗಾಗಿ ನೋಡುವ ವೀರನನ್ನು ಈ ರೀತಿ ಪ್ರಶ್ನಿಸಿರುವರು:

“ನೆತ್ತರನು ನೋಡುವೆಯೆ?
ಸತ್ತವರ ನೋಡುವೆಯೇ?
ಕಂಕಾಲಗಳ ಗೂಡೆ?”

(ಕುವೆಂಪು,೧೯೬೩, ಪುಟ–೬)

–ಎನ್ನುವಲ್ಲಿ ರಾಜ ಮಹಾರಾಜರ ಕಾಲದ ಮಹಾಯುದ್ಧದ ದೃಶ್ಯವನ್ನೇ ಪ್ರತಿಮಿಸಿದ್ದಾರೆ.

ಕುವೆಂಪುರವರು ‘ಸತ್ಯಾಗ್ರಹಿ’ ಕವನದಲ್ಲಿ ಸತ್ಯಾಗ್ರಹಿಗೆ ಇರಬೇಕಾದ ಅರ್ಹತೆಗಳ ಪಟ್ಟಿಯನೇ ಕೊಟ್ಟಿರುವರು ಸತ್ಯಾಗ್ರಹಿ ಎಂದರೆ “ಸ್ವಾತಂತ್ರ್ಯ ಸಂಗ್ರಾಮದಲಿ ತನ್ನ ಜೀವವನು ಲೆಕ್ಕಿಸದೆ ಹೋರಾಡುವವನು ವೀರ ಸತ್ಯಾಗ್ರಹಿ”–ಎಂದು ವ್ಯಾಖ್ಯಾನಿಸಿರುವರು. ಗಾಂಧೀಜಿಯವರ ಅಹಿಂಸಾ ತತ್ತ್ವವನ್ನು ಪಾಲಿಸುವವನು ಸತ್ಯಾಗ್ರಹಿಯೆಂಬುದನ್ನು ಹೀಗೆ ಹೇಳಿದ್ದಾರೆ:

"ಹಿಂಸೆಯನಹಿಂಸೆಯಂ ಹಿಂಸಿಸಿಯೆ ಕೊಲ್ವ
ಸಮರ ಲೋಲನೆ ನಮ್ಮ ವೀರ ಸತ್ಯಾಗ್ರಹಿ!
..........................................................
..........................................................
ಬಗೆಯಲ್ಲಿ, ಬಾಯಲ್ಲಿ, ಕೈಯಲ್ಲಿ ಹಿಂಸೆಯನು
ಬಿಟ್ಟು ಹೋರುವ ಭಟನು ವೀರ ಸತ್ಯಾಗ್ರಹಿ!"

(ಕುವೆಂಪು,೧೯೬೩, ಪುಟ-೨೦)

ಸ್ವಾತಂತ್ರ್ಯ ಚಳುವಳಿಯಲ್ಲಿ ಸತ್ಯಾಗ್ರಹಿಗೆ ಜೈಲು, ಗುಂಡು, ಅಧಿಕಾರಿಗಳಿಂದ ಶೋಷಣೆ, ಸಂಕೋಲೆ-ಇವು ಅನಿವಾರ್ಯ-

"ಸಿಡಿಗುಂಡಿನೆದುರಿನಲಿ, ಕೂರಸಿಗಳೆದುರಿನಲಿ
ಕಬ್ಬಿಣದ ಸಂಕೋಲೆಗಳ ಕರಿಯ ತೆಕ್ಕೆಯಲಿ
ಜೈಲಿನಲಿ, ಅಧಿಕಾರಿಗಳ ಕ್ರೂರದರ್ಪದಲಿ
ಹರಿವೆದೆಯ ನೆತ್ತರಿನ ಹೊಳೆಯಲ್ಲಿ, ಮುಂದಿಟ್ಟ
ಕಾಲ ಹಿಂದೆಗೆಯದಳಿವವನು ಸತ್ಯಾಗ್ರಹಿ!....."

(ಕುವೆಂಪು,೧೯೬೩, ಪುಟ-೨೦)

-ಇವುಗಳನ್ನು ಎದುರಿಸಿ ಸಹಿಸಿಕೊಂಡು ದಿಟ್ಟತನದಿಂದ ಮುನ್ನುಗ್ಗುವವನು ಸತ್ಯಾಗ್ರಹಿ. ಸತ್ಯವನ್ನು ಕೈಬಿಡದವನು, ಪ್ರೇಮದಿಂದ ದ್ವೇಷವನ್ನು ಸುಟ್ಟು, ದೇಹಶಕ್ತಿಯಿಂದ ಆತ್ಮ ಶಕ್ತಿಯನ್ನು ಗೆಲ್ಲುವವನು, ತನ್ನ ದಳಪತಿ ನುಡಿದಂತೆ ನಡೆಯುವವನು, ಶತ್ರುವನ್ನು ಸಹನೆಯಿಂದ ಗೆಲ್ಲುವವನು, ತನ್ನ ಜೀವವ ತೆತ್ತು ಇತರರನ್ನು ಕಾಯುವವನು, ತನ್ನ ತ್ಯಾಗಕ್ಕೆ ತಾನೇ ಹೆಮ್ಮೆ ಪಡದವನು, ರಾಕ್ಷಸೀಬಲದಿಂದ ನಮ್ಮನ್ನಾಳುವ ವಿದೇಶಿಯರಿಗೆ ತಲೆಬಾಗದವನು, ಭಾರತ ಮಾತೆಯ ಸೇವೆಯನು ಮೌನದಿಂದ ಮಾಡಿ ಮಡಿಯುವವನು ಕಲಿಯುಗದ ಪ್ರಚ್ಛನ್ನ ಕಲ್ಕಿ ಸತ್ಯಾಗ್ರಹಿ.

ಕುವೆಂಪುರವರು 'ರಕ್ತಧುನಿ'ಯಲ್ಲೂ ಸ್ವಾತಂತ್ರ್ಯ ಹೋರಾಟದ ರೌದ್ರತೆಯನ್ನು ವ್ಯಕ್ತಪಡಿಸಿರುವರು. ಈ ವಿಪ್ಲವದ ಕಾಲದಲ್ಲಿ ಯಾವ ಸಾತ್ವಿಕ ಚೇತನವೂ ಸುಮ್ಮನಿರಲಾರದು; ಅದು ರೌದ್ರತೆಗೆ ಪರಿವರ್ತನೆಯಾಗಿತ್ತೆಂಬುದನ್ನು ಕವಿ-

"ಕಬ್ಬಿಗನ ಲೇಖನಿಯು
ಕಠಾರಿಯಾಗುತ್ತಿರುವುದು!
ಇಂಚರದ ಕೊಳಲು ಬಿರಿದು
ಕಠೋರ ಭೇರಿಯಾಗುತ್ತಿದೆ!"

(ಕುವೆಂಪು, ೧೯೬೩, ಪುಟ-೩೫)

-ಎಂಬಲ್ಲಿ ಅದರ ತೀವ್ರತೆಯನ್ನು ಕಾಣಹುದಾಗಿದೆ. ಆಧ್ಯಾತ್ಮಿಕ-ಸಾತ್ವಿಕ ಪ್ರವೃತ್ತಿಯವರಾದ, ಅಹಿಂಸೆ-ಶಾಂತಿಯ ತತ್ತ್ವಗಳಲ್ಲಿ ನಂಬಿಕೆ ಇರುವ ಕುವೆಂಪುರವರ ಲೇಖನಿಯೂ ಹಿಂಸೆ, ಅಶಾಂತಿಯುಂಟಾಗುವ ರೀತಿಯ ಹೋರಾಟಕ್ಕೂ ಪ್ರೇರೇಪಿಸುವ ಮಟ್ಟವನ್ನು ತಲುಪಿದೆ.

"ಬರುತಲಿದೆ! ಬರುತಲಿದೆ!
ವಿಪ್ಲವದ ರಕ್ತಧುನಿ,
ನೋಡು ಹರಿದು ಬರುತಿದೆ
ಬೆನೆವಸಿರಿನಿಂದ ಚಿಮ್ಮಿ
ದಾಸ್ಯ ಶಿಲೆಯನೊಡೆದು ಹೊಮ್ಮಿ"

(ಕುವೆಂಪು, ೧೯೬೩, ಪುಟ-೩೩)

-ಹೀಗೆ ಬರುವ ವಿಪ್ಲವದ ಭಯಂಕರತೆಯ ಬಗೆಯನ್ನು ಕವಿ ವಿಲಯದ ರೌದ್ರತೆ, ಗುಡುಗು ರಹಿತ ಸಿಡಿಲಿನಂತೆ, ಮರಣದಂತೆ ಮೌನವಾಗಿ, ಭದ್ರಕಾಳಿಯು ಬಾಯಿತೆರೆದು ಚಾಚಿದ ನಾಲಿಗೆಯಂತೆ' ತರುಣ ರಕ್ತದ ರುಣ, ನದಿಯಾದ ಈ ವಿಪ್ಲವ ಬರುತ್ತಿದೆ.

ಈ ವಿಪ್ಲವದ ಮಹಾಪ್ರವಾಹದಲ್ಲಿ ಬಲವಿದ್ದರೆ ಈಜಿ ದಡಸೇರಿಕೊಳ್ಳಬೇಕು. ಇಲ್ಲದಿದ್ದರೆ, 'ಮುಳುಗಿ ಸಾಯಿರಿ'ಯೆಂದು ಶಪಿಸಿರುವರು. ಈ ವಿಪ್ಲವದ ಮಹಾಪ್ರವಾಹವು ಸುಮ್ಮನೇ ಬರುತ್ತಿಲ್ಲ. ಅದರ ಕಾರ್ಯವೈಖರಿಯ ಪರಿಣಾಮವು ಭಯಂಕರವಾದುದು.

"ರುಂಡಗಳನು ಮುಂಡಗಳನು
ರಭಸದಲ್ಲಿ ತೇಲಿಸುತ್ತ
ರಾಜ್ಯಗಳ ಗುಡಿಸುತ್ತ
ರಾಜರನು ಬಡಿಯುತ್ತ
ಮುಕುಟಗಳನು ತುಳಿಯುತ್ತ"

(ಕುವೆಂಪು, ೧೯೬೩, ಪುಟ-೩೪)

-ಹೀಗೆ 'ವಿಪ್ಲವದ ರಕ್ತ ಧುನಿ' ಹರಿದು ಬರುತ್ತದೆ. ಇದು ವೇಗವಾಗಿ ಹರಿದು ಬರುವಾಗ ಕ್ರೋಧದಲ್ಲಿ ಶ್ರೀಮಂತರ ಮನೆಗಳನ್ನು ಉರುಳಿಸಿ, ಬಡವರನ್ನು ಕೆರಳಿಸಿ ಬರುತ್ತಿದೆ. ಹೀಗೆ ಈ ಕವನದಲ್ಲಿ ಮೂವತ್ತರ ದಶಕದ ದೇಶದ ಸ್ಥಿತಿ ಬ್ರಿಟೀಷರ ದಬ್ಬಾಳಿಕೆ, ಕ್ರೌರ್ಯ, ಚಳುವಳಿಯ ದಮನ ನೀತಿ, ಅದಕ್ಕೆ ಭಾರತೀಯರ ಪ್ರತಿಭಟನೆ, ಪ್ರತಿಕ್ರಿಯೆಗಳನ್ನು ವಿರಾವೇಶ-ರೌದ್ರತೆ-ಆಕ್ರೋಶವನ್ನು ವ್ಯಕ್ತಪಡಿಸಿರುವರು.

ಕುವೆಂಪುರವರು 'ತ್ಯಾಗವಿಲ್ಲದ ದೇಶಭಕ್ತಿ 'ಕ್ಲೈಬ್ಯಕ್ಕೆ ಯಷ್ಟಿ' ಕವನದಲ್ಲಿ ದೇಶದ ಸ್ವಾತಂತ್ರ್ಯ ಚಳುವಳಿಯ ಸಂದಿಗ್ಧ ಕಾಲದಲ್ಲಿ ತ್ಯಾಗವಿಲ್ಲದೆ ಬರಿಮಾತಿನಲ್ಲಿ ದೇಶಭಕ್ತಿ ವ್ಯಕ್ತಪಡಿಸುವ ಬೆಳ್ಳಿ ನಾಲಗೆಯ', ಮಾತೆತ್ತಿದರೆ ಸಂಧಿಗೆ ಸಿದ್ಧರಾಗುವ ನುಣ್ಪು ನಾಯಕರು ಬೇಕಾಗಿಲ್ಲ. ಈ ರೀತಿಯ

ದೇಶಭಕ್ತಿ ಹೇಡಿತನದ ಸಾಧನ, ಈಗ ನಮಗೆ ಬೇಕಾಗಿರುವದು 'ಸೆರೆಯ ಕಬ್ಬಿಣ ಸರಳ ನೊಡೆ'ಯುವ 'ವಜ್ರ ಮುಷ್ಠಿ'ಯ 'ಒರಟು ಮಂದಿ'-ಎಂದು ಕವಿ ಅಪೇಕ್ಷೆ ಪಟ್ಟಿರುವರು. 'ದೇಶ ಭಕ್ತನೋರ್ವನಿಗೆ' ಕವನದಲ್ಲಿ, "ದೇಶಭಕ್ತನೆ, ನಿನ್ನ ಕರ್ಮಕೆ ಸುಲಭ ಕೀರ್ತಿ ದೊರೆಯುತಿದೆ; ಶೀಘ್ರಫಲವೂ ಲಭಿಸುತ್ತಿದೆ ಜನಕೆ'-ಎಂದು ದೇಶಭಕ್ತರಿಗೆ ಭರವಸೆ, ಆಶಾಭಾವನೆಯನ್ನು ಮೂಡಿಸಿರುವರು.

'ದೇಶ ಭಕ್ತನ ಉತ್ತರವಾಣಿ'ಯಲ್ಲಿ ಸ್ವಾತಂತ್ರ್ಯ ಹೋರಾಟಕ್ಕಾಗಿ ತ್ಯಾಗ ವೀರನು ತಾನಳಿದರೂ ದೇಶಕ್ಕೆ ಸ್ವಾತಂತ್ರ್ಯ ಬರುತ್ತದೆ. ಇದರಲ್ಲಿ ಸಂದೇಹ ಬೇಡವೆಂದು ವಿರೋಚಿತವಾಗಿ ಕವಿ ಮಿತ್ರನಿಗೆ ಹೇಳಿರುವನು.

"ನನ್ನಾತ್ಮ ಸಂಗ್ರಾಮ ಗತವಾಯ್ತು
ಒಬ್ಬನಾಗಿದ್ದವನು ಕೋಟಿಯಾಗಿಹೆನಿಂದು
ಸ್ವಾತಂತ್ರ್ಯವನು ಕೊಲ್ಲುವರೆ ಒಬ್ಬನನು ಕೊಂದು?"

(ಕುವೆಂಪು, ೧೯೬೩, ಪುಟ-೭೩)

ಪಶ್ಚಿಮದಲ್ಲಿ ಒಂದು ನಕ್ಷತ್ರ ಮುಳುಗಿದರೆ ಮತ್ತೊಂದು ಪೂರ್ವದಲ್ಲಿ ಮೂಡುವಂತೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತಾನೊಬ್ಬ ಮಡಿದರೂ ಕೋಟ್ಯಾನು ಕೋಟಿ ಭಾರತೀಯರಲ್ಲಿ ತನ್ನ ಚೇತನ ತುಂಬುತ್ತದೆ. ಲೋಕಕಲ್ಯಾಣಕ್ಕೆ ನೂರಾರು ಮಹಾವ್ಯಕ್ತಿಗಳನ್ನು ಹೆತ್ತು ದಾನಗೈದ ಭಾರತ ಮಾತೆಗೆ ತನ್ನೊಬ್ಬನ ನಿಧನದಿಂದ ಕುಂದುಬರಲಾರದು-ಎಂದು ಬಗೆಬಗೆಯಾಗಿ ದೇಶಭಕ್ತನು ಪ್ರಸ್ತುತ ಕವನದಲ್ಲಿ ನಿವೇದಿಸಿಕೊಂಡಿರುವನು.

ಜಿ.ಪಿ ರಾಜರತ್ನಂ ಅವರು 'ಜಾಗೃತ ಭಾರತ'-ಕವನದಲ್ಲಿ ಭಾರತದ ಗತ ವೈಭವ, ಪಾರಂತಂತ್ರ್ಯ, ಬಿಡುಗಡೆಗಾಗಿ ನಡೆಯುತ್ತಿರುವ ಹೋರಾಟವನ್ನು ಈ ರೀತಿ ಸಾಂಕೇತಿಸಿದ್ದಾರೆ:

"ಜಾಗೃತ ಆಗಿತ್ತು ಹಿಂದೆ!
ಜಾಗೃತಿ ಹೋಗಿತ್ತು ನಡುವೆ!
ಜಾಗೃತ ಆಗುತ್ತಿದೆ ಮತ್ತೆ!"

(ರಾಜರತ್ನಂಜಿ.ಪಿ. ೧೯೭೧, ಪ್ರಟ-೪೭)

ಪರರಿಗೆ ದೇಶವನು ಒಪ್ಪಿಸಿ ಮೈಮರೆತು ದೇಶದ ಸ್ವಾತಂತ್ರ್ಯ ಹೋರಾಟಕ್ಕೆ ಇನ್ನು ಅಣಿಯಾಗದ ಸ್ಥಿತಿಯನ್ನು "ಕುರಿಗಳೊಂದಿಗೆ ಬೆಳೆದ ಸಿಂಹದೆಳೆ ಮರಿಯಂತೆ ಸ್ವಸ್ವರೂಪವ ಮರೆತು, ಕುರಿಯಂತೆ ಕೂಗಿ'-ಎಂದು ವಿಡಂಬಿಸಿದ್ದಾರೆ. ಮುಂದೆ ವಿವೇಕಾನಂದರ-"ಉತ್ತಿಷ್ಠತ! ಜಾಗೃತ! ಪ್ರಾಪ್ಯವರಾನ್ ನಿಬೋದಃ!"-ಎನ್ನುವ ವಾಣಿ ದೇಶವೆಲ್ಲಾ ವ್ಯಾಪಿಸಿ ಮೊಳಗಲು "ಅದುವರೆಗೆ ಬೂದಿಮುಚ್ಚಿದ ಕೆಂಡದಂತಿದ್ದ ಜನತೆ ಕಂಡು ಕೊಂಡಿತು ತನ್ನ ನಿತ್ಯಾಗ್ನಿ ತೇಜಸದ

ಘನತೆ"(ರಾಜರತ್ನಂಜಿ.ಪಿ. ೧೯೭೧, ಪ್ರಟ–೫೦)ಎಂದು ಸ್ವಾತಂತ್ರ್ಯ ಹೋರಾಟಕ್ಕೆ ಜನ ಜಾಗೃತಾರಾದುದನ್ನು ಬಣ್ಣಿಸಿರುವರು.

ಜಿ.ಪಿ. ರಾಜರತ್ನಂ ಅವರ 'ಶಾಂತಿ' ಕವನ ಸಂಕಲನದ 'ಬಿಡುಗಡೆ' ಕವನದ ಎರಡನೆ ಭಾಗ ಸ್ವಾತಂತ್ರ್ಯ ಹೋರಾಟವನ್ನು ಕುರಿತಿದೆ. (ಮೊದಲ ಭಾಗದಲ್ಲಿ ಇಂಗ್ಲೆಂಡ್ ರಾಣಿ ಭಾರತ ಮಾತೆಯನ್ನು ಬಂಧಿಸಿದ ವೃತ್ತಾಂತವಿದೆ. ಅದನ್ನು ಹಿಂದೆ ನೋಡಲಾಗಿದೆ). ಆ ಸೇತು ಹಿಮಾಲಯದವರೆಗೆ ನೆಲಸಿದ ಜನ ತಮ್ಮ ಭೇದ–ಭಾವ ಮರೆತು ತಾವೆಲ್ಲಾ ಒಂದೇ ತಾಯಿ ಭಾರತ ಮಾತೆಯ ಮಕ್ಕಳು ಸಹೋದರರೆಂದು ಭಾವಿಸಿ ಭಾರತಮಾತೆಯ ಬಿಡುಗಡೆಯ ಹೋರಾಟಕ್ಕೆ–

"ಮರಳಿ ಬಾರೆವು ನಾವು ಜಯ ತರುವ ತನಕ
ಇದು ಕಾರ್ಯ ಬಲುಹೆಂದು ಹಿಂದೆಗೆಯೆವಾವು
ಕಾರ್ಯದಾ ಕಾಠಿಣ್ಯವರಿತಿರುವೆವಾವು"
(ರಾಜರತ್ನಂಜಿ.ಪಿ. ೧೯೬೯, ಪ್ರಟ–೧೨೫)

–ಎಂದು ದೃಢ ನಿಶ್ಚಯ ಮಾಡಿ ಸಿದ್ಧರಾಗುತ್ತಾರೆ. ಪ್ರಾಣದ ಹಂಗುತೊರೆದ ಇವರು ಮಡಿದರೂ 'ಮರಣದಿಂ ಮತ್ತೆ ಜನಿಸುವೆವು ಧರೆಗೆ–ತಾಯಿಯ ಬಿಡುಗಡೆಗಾಗಿ'–ಎಂಬ ಧಿರೋಧಾತ್ತ ಭಾವನೆಯನ್ನು ಹೊಂದಿರುವರು. ಈ ಹೋರಾಟದಲ್ಲಿ ಗೆದ್ದೇಗೆಲ್ಲುತ್ತೇವೆಂಬ ಛಲವಿದೆ ಅವರಲ್ಲಿ.

"ಗೆಲ್ಲದಿರೆ ಮಡಗೆಮಗೆ ಬೇರೆ ಹೆಸರನ್ನು
ಗೆಲ್ಲುವೆವು ಗೆಲ್ಲುವೆವು ಗೆಲ್ಲುವೆವು ನಾವು.
ಮೂವತ್ತು ಮೂರು ಕೋಟಿಯ ಭಟರು ನಾವು!"
(ರಾಜರತ್ನಂಜಿ.ಪಿ. ೧೯೬೯, ಪ್ರಟ–೧೨೬)

ಒಬ್ಬ ವ್ಯಕ್ತಿ ತಾನು ಇಂಥಹ ಕಾರ್ಯಮಾಡದಿದ್ದರೆ 'ಈ ಹೆಸರೇ ಅಲ್ಲ' ಅಥವಾ ತಾನು 'ಇಂಥವರ ಮಗನೇ ಇಲ್ಲ' ಎಂದು ಪ್ರತಿಜ್ಞೆಗೈಯುವ ಮನೋಸ್ಥಿತಿಯುನ್ನು ಇಲ್ಲಿ ಕಾಣುತ್ತೇವೆ. ವಿರಾವೇಶದಿಂದ ಬಿಡುಗಡೆಯ ಹೋರಾಟಕ್ಕೆ ಹೊರಟ ದಂಡಿನ ಚಿತ್ರಣವನ್ನು ಹೀಗೆ ಕೊಟ್ಟಿದ್ದಾರೆ–

"ದಾಸ್ಯ ಶೃಂಖಲೆ ಹರಿವ ಕಂಕಣವ ತೊಟ್ಟು
ಭಾರತೀಯ ಬಿಡುಗಡೆಗೆ ಪೂರಮನ ಕೊಟ್ಟು
ಭಾರತದ ಮಾರ್ಬಲವು ನುಗ್ಗಿತ್ತು ಮುಂದೆ
'ಸ್ವರಾಜ್ಯ! ಸ್ವಾರಾಜ್ಯ!' ಎನ್ನುತ್ತ ಮುಂದೆ"
(ರಾಜರತ್ನಂ ಜಿ.ಪಿ. ೧೯೬೯, ಪ್ರಟ–೧೨೬)

ಸ್ವಾತಂತ್ರ್ಯ ಚಳುವಳಿಯನ್ನು–'ಬ್ರಿಟನ್ನಿಗೆ ಭಾರತವು ಚಿರವು ತೊತ್ತಾಗಿ ಇರಲೆಂಬ ಸ್ವಾರ್ಥ'–ದಿಂದ ಹತ್ತಿಕ್ಕಲು, ದಮನಿಸಲು 'ಕಡಲರಾಣಿಯು ಕರೆದಳಾ ಕಾಲನನ್ನು' ಈ ಕಾಲನೆಂಬ ಯಮನನ್ನು

ಕಳಿಸುತ್ತಾಳೆ. ಈ ಯಮಪಾಶನ ಕುಣಿಕೆಗೆ ಹತ್ತು, ನೂರು, ಸಾವಿರ, ಕೋಟಿ ಯೋಧರು ಬಲಿಯಾದರು.

ಹೀಗೆ ಸತ್ತವರ ಸಂಖ್ಯೆ ಹಿಗ್ಗುತ್ತ ಹೋಯಿತು. ಸತ್ತಂತೆ ಹೊಸ ಹೊಸ ದಂಡು ಬಂದವು. ಕಾಲನು ಇವರನ್ನು-ಗತಸತ್ತ್ವರಿವರೇನು ಹಂದೆಗಳು!'-ಎಂದು ಹಿಯಾಳಿಸಿ ಕೆಣಕುತ್ತಾರೆ. ಸಿಡಿಲಮರಿಗಳನ್ನು ಕೆಣಕಿದ ಕಾಲನು ಮತ್ತು ಇಂಗ್ಲೆಂಡ್ ರಾಣಿ ಈ ವೀರರಿಗೆ ಯಾವ ಲೆಕ್ಕ-

"ಕುಣಿಕೆ ಮುರಿಯಿತ್ತಿತ್ತು ಕಾಲನವನೆತ್ತ!
ಕಾಲನನು ಕರೆತಂದ ಕಡಲ ಹೆಣ್ಣೆತ್ತ?
ಕಂಬಿ ಕಿತ್ತಿದ್ದರವರೀರ್ವರೂ ಅಂದು
ಸೋಲು ತಮಗಾಯ್ತೆಂದು ಸಿದ್ಧವಾದಂದು!"

(ರಾಜರತ್ನಂ ಜಿ.ಪಿ. ೧೯೬೯, ಪ್ರಟ-೧೨೭)

ಭಾರತ ಮಾತೆಯ ವೀರಪುತ್ರರ ಉಗ್ರ ಹೋರಾಟಕ್ಕೆ ಸೋತು ಬಿಟ್ಟು, ಹೋಗಲು ತಯಾರಾಗುತ್ತಾರೆ. ಹೀಗೆ ಈ ಕವನದಲ್ಲಿ ರಾಜರತ್ನಂ ಅವರು ಸ್ವಾತಂತ್ರ್ಯ ಚಳುವಳಿಯನ್ನು ಬ್ರಿಟೀಷರು ಈ ಚಳುವಳಿಗೆ ಮಣಿದು ಭಾರತಕ್ಕೆ ಸ್ವಾತಂತ್ರ್ಯ ಕೊಟ್ಟಿದುದರ ಸಮಗ್ರ ಚಿತ್ರಣವನ್ನು ಕೊಟ್ಟಿರುವರು.

ಪು.ತಿ.ನ. ಅವರು 'ವಿರೋತ್ಸವ ಭೇರಿ' ಕವನದಲ್ಲಿ ರುದ್ರನ ಕೈದುಗಾಳಗಿ, ಉದ್ಧಟತನ ಅಹಂಕಾರ ತೊರೆದು ಬುದ್ಧಿಯನೇ ಹರಿತಮಾಡಿ ಕ್ಷುದ್ರರನ್ನು ಛೇದಿಸಿ, 'ವಿರೋತ್ಸವ ಭೇರಿ'ಯ ಧ್ವನಿ ಮೊಳಗಿಸಲು ಹೇಳಿರುವರು.; 'ನವಭಾರತ ತರುಣರಾವು'-ಕವನದಲ್ಲಿ ರಾಷ್ಟ್ರೀಯ ಆಂದೋಲನದ ಕಾಲದಲ್ಲಿ ಯುವಕರಲ್ಲಿ ಉಕ್ಕುವ ವಿರೋತ್ಸಾಹ, ದುಡುಕು, ತಾರುಣ್ಯದ ಉಲ್ಲಾಸವನ್ನು ಈ ಕವನದಲ್ಲಿ ಬಿಂಬಿಸಿದ್ದಾರೆ. ತರುಣರು ವಿದೇಶಿ ಪ್ರಭುತ್ವವನ್ನು ಪ್ರತಿಭಟಿಸಿ ಹಿರಿಯರನ್ನು ಈ ರೀತಿ ಕೇಳುತ್ತಾರೆ:

"ನಮ್ಮ ಮೋಹವಾಗಬೇಕೆ
ಪರರದಾಹಕೆ?
ನಮ್ಮ ಲೋಭವಾಗಬೇಕೆ?
ಪರರಲಾಭಕೆ?
ನಮ್ಮ ಭೇದವಾಗಬೇಕೆ
ಪರರ ಮೋದಕೆ?
ನಮ್ಮ ಭೋಗವಾಗಬೇಕೆ
ಪರರಯೋಗಕೆ?"

(ನರಸಿಂಹಾಚಾರ್ಯ, ಪು.ತಿ. ೧೯೮೮, ಪುಟ-೧೭೧)

–ಎಂದು ಉತ್ಸುಕತೆಯಿಂದ ಪ್ರಶ್ನಿಸುವಲ್ಲಿ ತನ್ನತನವನ್ನು ಕಂಡುಕೊಳ್ಳಬೇಕೆಂಬುದು ತರಣರ ಬಯಕೆ. ಅಂತೆಯೇ–'ಹಿರಿಯ ಬಾಳೆ ನಮ್ಮಗುರಿ ಸಿರಿಯ ಬಾಳೆ ನಮಗೆ ಸರಿ'–ಎಂಬ ಆದರ್ಶವನ್ನು ಹೊಂದಿದ್ದಾರೆ.

ವಿ.ಸೀತಾರಾಮಯ್ಯನವರು 'ದುಂದುಭಿ' ಕವನದಲ್ಲಿ ದೇಶಕ್ಕಾಗಿ ಹೋರಾಡಲು "ಮೊಳಗು! ಮೊಳಗು ದುಂದುಭಿಯೇ! ನಿದ್ರೆ ಸಾಕಿನ್ನೇಳಿರೆಂದು ಎಚ್ಚರಿಸು!"(ಸೀತಾರಾಮಯ್ಯ ವಿ. ೧೯೯೦, ಪುಟ–೩೫) ಎಂದು ರಣ ದುಂದುಭಿಗೆ ಕೇಳಿಕೊಂಡಿದ್ದಾರೆ. ಹೋರಾಟವು ಯಾತಕ್ಕಾಗಿ ಎಂದರೆ, ದೇಶಕ್ಕೆ, ಮನೆ, ಮಠ, ಮಡದಿ–ಮಕ್ಕಳ ಸ್ವಾತಂತ್ರ್ಯಕ್ಕೆ. ಭಾರತ ಮಾತೆಗೆ, ನಿನ್ನ ಮಕ್ಕಳಿಗೆ ಹೋರಾಟಕ್ಕೆ ಅಣಿಯಾಗುವಂತೆ ಅವರ ನರನಾಡಿಗಳಲ್ಲಿ "ಬಿಸಿರಕುತ ಕುದಿಸುತ್ತೆ ಅಭಿಮಾನಗಳ ಹೊಮ್ಮುಹರಿಸು" ಎಂದು ಕೇಳಿಕೊಂಡಿದ್ದಾರೆ.

ದಿನಕರ ದೇಸಾಯಿಯವರು, ಬಾರ್ಡೋಲಿ ಸತ್ಯಾಗ್ರಹ ಸಮಯದಲ್ಲಿ ಒಕ್ಕಲಿಗರು ಕಂದಾಯ ಕೊಡದೆ ಪ್ರತಿಭಟಿಸಿ ಬೆಳೆಗಳನ್ನು ಸುಟ್ಟು ಬಡೋದಾ ಸಂಸ್ಥಾನ ಸೇರಿದರು. ಇದನ್ನು ಕುರಿತು ಒಕ್ಕಲಿಗರು ಹಾಡುವ ಶೈಲಿಯಲ್ಲಿ "ವೀರ ಒಕ್ಕಲಿಗರು"–ಕವನ ರಚಿಸಿದ್ದಾರೆ. ಇದರಲ್ಲಿ ಒಕ್ಕಲಿಗರ ರಾಷ್ಟ್ರೀಯ ಪ್ರಜ್ಞೆ, ದೇಶದ ಸ್ವಾತಂತ್ರ್ಯಕ್ಕಾಗಿ, ಸ್ವರಾಜ್ಯಕ್ಕಾಗಿ ಹೋರಾಡುವ ನೆಚ್ಚು–ಕೆಚ್ಚನ್ನು ಕಾಣುತ್ತೇವೆ.

"ಬಂಧನದೊಳಗಿನ ಬಾಳುವೆಯಿಂದ
ಬೆಂದು ಹೋಗುವುದು ಪರಮಾನಂದ!
ಮಾತೃಸೇವೆಯೇ ಮಗನಿಗೆ ಚೆಂದ,
ಸ್ವರಾಜ್ಯ ತಾಯಿ ಭಾರತ ಭೂ"
(ದಿನಕರ ದೇಸಾಯಿ, ೧೯೫೦, ಪುಟ–೪೪)

–ಎಂದು ದಿನಕರ ದೇಸಾಯಿಯವರು ಬಂಧನಕ್ಕೊಳಗಾದ ವೀರ ಒಕ್ಕಲಿಗರ ಪ್ರಜ್ಞೆಯ ಮನೋಧರ್ಮವನ್ನು ಪ್ರಸ್ತುತ ಕವನದಲ್ಲಿ ಬಿಂಬಿಸಿದ್ದಾರೆ.

ನವೋದಯ ಕವಿಗಳು ದೇಶದ ಸ್ವಾತಂತ್ರ್ಯಕ್ಕಾಗಿ ವೀರಾವೇಶದಿಂದ ಹೋರಾಡಬೇಕೆಂದು ಜನತೆಗೆ ಕರೆ ಕೊಟ್ಟಿರುವರು. ಅಲ್ಲದೆ ಜನತೆಯು ವೀರಾವೇಶದಿಂದ ಹೋರಾಡುವುದಕ್ಕೆ ಪ್ರೋತ್ಸಾಹಿಸಿ ಕಾವ್ಯಾಭಿವ್ಯಕ್ತಿಗೊಳಿಸಿದ್ದಾರೆ.

ಡಾ. ಪಂಚಾಕ್ಷರಿ ಹಿರೇಮಠ ಅವರು ಕನ್ನಡ ನಾಡು–ನುಡಿಗಳ ಹಿರಿಮೆ ಗರಿಮೆಗಳನ್ನು ಮನದುಂಬಿ ವೀರವತ್ತಾಗಿ ಅಭಿವ್ಯಕ್ತಿಸಿರುವ ಪ್ರಸಿದ್ಧ ಕವಿಗಳ ಸಾಲಿನಲ್ಲಿ ಕಂಗೊಳಿಸುತ್ತಿರುವರು. ಅವರ ಕವನ ಸಂಕಲನಗಳಾದ ಚೈತ್ಯಾಕ್ಷಿ, ಬಯಕೆ ಈ ಮನಕೆ, ಬೆಳಕಿನ ಹೆಪ್ಪು ಹಾಕುವ ತವಕ, ಆರಂಭವ ಮಾಡುವೆ, ನೀ ರುದ್ರನಾಗು ಮತ್ತು ಇತರ ಕವನ ಸಂಕಲನಗಳಲ್ಲಿ ಒಂದೊಂದು ಕವನಗಳು ಸ್ವಯಂಪ್ರೇರಿತ ಕ್ಷಾತ್ರಾ ತೇಜಸ್ಸಿನ ಕಿಡಿಗಳೇ ನುಡಿಗೊಂಡಂತಿವೆ. ಸ್ವಾತಂತ್ರ್ಯ ರಕ್ಷಣೆಯ ಜಾಗೃತ

ಪ್ರಜ್ಞೆಯನ್ನು ಇವರ ಕವನಗಳಲ್ಲಿ ಕಾಣಬಹುದು. ಕನ್ನಡದ ದೇಶ ಭಾಷೆಗಳ ಕುರಿತು ಸಲ್ಲಿಸುವ ಗೌರವ ಮೆಚ್ಚುವಂತದ್ದಾಗಿದೆ. ಕನ್ನಡ ನುಡಿಯು, ಕನ್ನಡ ನಾಡಿನ ಅದರಂತೆ ಭರತ ಭೂಮಿಯ ಭಾರತ ಮಾತೆಯ ಬಗೆಗಿನ ಗೌರವ, ದೇಶ ಭಾಷೆಗಳ ಕುರಿತು ಸಲ್ಲಿಸುವ ಕರ್ತವ್ಯ ಪ್ರತಿಯೊಬ್ಬ ನಾಗರಿಕನ ಕರ್ತವ್ಯ, ಋಣ, ಆ ಕರ್ತವ್ಯವನ್ನು ಆ ಋಣವನ್ನು ಸಲ್ಲಿಸುವ ಕಾರಣದಿಂದ ಡಾ. ಪಂಚಾಕ್ಷರಿ ಹಿರೇಮಠರವರು ಇಲ್ಲಿ ಮುಖ್ಯರಾಗಿದ್ದಾರೆ. ಪರಕೀಯರ ಆಕ್ರಮಣ ಕುರಿತು ಒಂದು ಕವನ ಸಂಕಲನವಿದೆ. ಅದು 'ನೀ ರುದ್ರನಾಗು' ಎಂಬ ಕವನ ಸಂಕಲನ ಅದು ಭಾರತಕ್ಕೆ ಚೀನಿಯರ ಆಕ್ರಮಣ ಕುರಿತು ಬರೆದುದಾಗಿದೆ.

ಭಾರತ ದೇಶ ಸಂಸ್ಕೃತಿಗೆ ಹೆಸರಾದ ನಾಡು ಭಾರತೀಯರೆಂದರೆ ಎಲ್ಲರಿಗೂ ಎಲ್ಲಿಲ್ಲದ ಗೌರವ, ನಮ್ಮ ಭಾರತೀಯರು ಎಂತಹ ಕಲ್ಲಿಗೂ ಹಾಲೆರೆಯುವ ವೈರಿಗಳನ್ನು ಮಿತ್ರರಂತೆ ಪ್ರೀತಿಸುವ, ನಸುನಗೆಯಿಂದ ಸ್ವಾಗತಿಸುವ, ಮುಗ್ಧ ಮನೋಭಾವ ಭಾರತೀಯರದು. ಇಂಥ ನಮ್ಮವರ ಮೇಲೆ ಆಕ್ರಮಣ ಮಾಡಿದ ಚೀನಿಯರ ಪ್ರವೃತ್ತಿಯನ್ನು ಕುರಿತು ಹಿರೇಮಠರು "ನೀ ರುದ್ರನಾಗು" ಕವನ ಸಂಕಲನದಲ್ಲಿ ವಿಶ್ವಶಾಂತಿಯನ್ನು ಬಯಸುವ ನಾಡ ಜನತೆಗೆ ಒಂದೊಂದು ಕವನಗಳು ದೇಶದ ರಕ್ಷಣೆಗೆ ಸನ್ನದ್ದರಾಗಲು ಎಚ್ಚರಿಕೆಯ ಘಂಟೆಯನ್ನು ಭಾರಿಸಿದಂತಿದೆ.

ಪಂಚಾಕ್ಷರಿ ಹಿರೇಮಠರ ಕಾವ್ಯದಲ್ಲಿ ದೇಶಭಕ್ತಿಯನ್ನು ಹುಡುಕಬೇಕಾಗಿಲ್ಲ, ಶೋಧಿಸಬೇಕಾಗಿಲ್ಲ! ಬುಡದಿಂದ ತುದಿಯವರೆಗೆ, ದೇಶ ಭಕ್ತಿಯ ಕಂಪು ಅವರ ಕಾವ್ಯದಲ್ಲಿ ಬೆರೆತಿರುವುದನ್ನು ನಾವು ಕಾಣುತ್ತೇವೆ. ನಮ್ಮ ದೇಶದೊಳಗೆ ವೈರಿಗಳು ಬಲತ್ಕಾರದಿಂದ ಆಕ್ರಮಣ ಮಾಡಿದಾಗ ಇವರ ಕವನಗಳು ಭಾರತೀಯರನ್ನು ಬಡಿದೆಬ್ಬಿಸಿದಂತಾಗಿದೆ. ಇವರ ಅನೇಕ ಕವನಗಳಲ್ಲಿ ರಾಷ್ಟ್ರ ರಕ್ಷಣೆಯ ಸಲುವಾಗಿ ಭಾರತದ ಪುರುಷ ಶಕ್ತಿ ಜಾಗೃತವಾಗುತ್ತದೆ. ಪಾಂಚಜನ್ಯವನ್ನು ಊದಿ ಕನ್ನಡಿಗರನ್ನು ಬಡಿದೆಬ್ಬಿಸಿದ ಕವಿ–ಎಂದರೂ ತಪ್ಪಿಲ್ಲ. ಅವರ ಅನೇಕ ಕವನಗಳು ಸಾಕ್ಷಿಯಾಗಿದೆ.

'ಓ! ಭಾರತ ಪುರುಷ!' ಎಂಬ ಕವನದಲ್ಲಿ ಭಾರತೀಯನಿಗೆ ತನ್ನ ಪ್ರಾಣವನ್ನು ಪಣಕ್ಕಿಟ್ಟು ನಾಡನ್ನು ರಕ್ಷಿಸು ಎಂದು ಹೇಳುತ್ತಾರೆ. ಅಂದಿನ ಕ್ರಿಯಾಶೀಲ ಸ್ವಾತಂತ್ರ್ಯ ಯೋಧ ಈ ಕಾವ್ಯದಲ್ಲಿ ಮತ್ತೆ ಹೊರಬಂದಿದ್ದಾನೆ. ಅದೇ ಸ್ವಾತಂತ್ರ್ಯದ ಕೆಚ್ಚು ಅದೇ ದೇಶಾಭಿಮಾನ...

"ಓ ಭಾರತೀಯನೇ ಏಳು! ಎದ್ದೇಳು!
ದೌರ್ಜನ್ಯ ಕ್ಷುದ್ರತೆಯ ಮೆಟ್ಟಲೇಳು!
ಸಾಕಿನ್ನು
ಸ್ವರಗೈವ ನಾಗಸ್ವರ, ಕೊಳಲು, ಶಹನಾಯಿ ನಾದ
ಊದಿನ್ನು
ಕೂಗಿಡುವ ಕಹಳೆ,. ಹೆಗ್ಗಾಳೆ, ಕಂಸಾಳೆ, ಮದ್ದಳೆಯ ನಾದ"

(ಪ್ರಭಾವತಿ ಹಲಕುರ್ಕಿ, ೨೦೧೧, ಪುಟ–೪೭)

ಚೀನಾ ದಾಳಿಯಿಂದ ಉರಿದ್ದೆದ್ದ ಬಾರತೀಯನ ಕಣ್ಣಿಗೆ ಭಾರತದ ನೆಲ-ಜಲ ಸ್ವಾತಂತ್ರ್ಯ ಯುದ್ಧದಲ್ಲಿ ಭಾಗಿಯಾಗಿರುವಂತೆಯೇ ಭಾಸವಾಗುತ್ತದೆ.

"ಕಟ್ಟಿಂದು ಕಂಕಣವನು
ಮಾಡು, ಪ್ರತಿಜ್ಞೆ ಮಾಡು
ದೇಶ ರಕ್ಷಣೆಗೆ ಮುಡಿಪು
ನಾನಿಂದು ಎಂದು"

(ಪ್ರಭಾವತಿ ಹಲಕುರ್ಕಿ, ೨೦೧೧, ಪುಟ-೪೭)

ಎಂದು ಈ ದೇಶವನ್ನು ರಕ್ಷಿಸಲು ಕಂಕಣಬದ್ಧನಾಗಿ, ಪ್ರತಿಜ್ಞೆ ಮಾಡುವದರೊಂದಿಗೆ ನಿನ್ನ ತನು, ಮನ, ಧನ, ಪ್ರಾಣವನ್ನು ತಾಯಿ ರಕ್ಷಣೆಗೆ ಮೀಸಲಿಡು, ವಿಶ್ವಶಾಂತಿಯನ್ನು ಬಯಸುವ ನೀನು ಸತ್ಯ, ಪ್ರೇಮ, ಸಮತೆಯಿಂದ ರಾಷ್ಟ್ರರಕ್ಷಣೆಗೆ ಸಿದ್ಧರಾಗಿ-ಎಂಬ ಮಾತನ್ನು ಹೇಳುತ್ತಾರೆ.

'ನಾಳಿನ ಕನಸು'-ಎಂಬ ಕವನದಲ್ಲಿ ಭಾರತೀಯನ ವೀರತ್ವದ ಬಗ್ಗೆ ಕ್ಷಾತ್ರ ತೇಜಸ್ಸಿನ ಬಗ್ಗೆ ಹೇಳುತ್ತಾರೆ.

ಉರಗನ ಫಣಾಮಣಿಯ ಬೆಳಗಿನಲಿ
ಸಿಂಹದ ಹಲ್ಲ ಎಣಿಸಬಲ್ಲೆವು ನಾವು

ಇದರಲ್ಲಿ ನಮ್ಮ ದೇಶದ ಯುವಕರ ವೀರತ್ವವನ್ನು ತೋರ್ಪಡಿಸುವ ಧೈರ್ಯವನ್ನು, ಆತ್ಮಾಭಿಮಾನವನ್ನು ಮನೋಸ್ಥೈರ್ಯವನ್ನು ಈ ಕವನದಲ್ಲಿ ಕಾಣಬಹುದಾಗಿದೆ.

"ಗುಡುಗು ಮಿಂಚುಗಳು
ಹಿಡಿದೆಳೆದು ತಂದು
ಬಯಲನೇ ಹಿಡಿದು ಹೆಡಗುಡಿಯ
ಕಟ್ಟ ಬಲ್ಲೆವು ನಾವು"

(ಪಂಚಾಕ್ಷರಿ ಹಿರೇಮಠ, ೨೦೦೩, ಪುಟ-೩೭)

ನಮ್ಮ ದೇಶದ ಜನತೆಯಲ್ಲಿ ವೈರಿಗಳನ್ನು ಸದೆಬಡೆವ ಶಕ್ತಿಯಿದೆ. ಆದ್ದರಿಂದ ರಾಷ್ಟ್ರರಕ್ಷಣೆಗೆ ಎಲ್ಲರೂ ಎದ್ದೇಳಿ ಎಂದು ಹೇಳುತ್ತಾರೆ. ಭಾರತ-ಚೀನಾ ಯುದ್ಧದ ಸಂದರ್ಭದಲ್ಲಿ ಬರೆದ ಬಹುಪಾಲು ಪದ್ಯಗಳಲ್ಲಿ ತಾಯಿ ನಾಡಿನ ಮೇಲೆ ನಡೆದ ಆಕ್ರಮಣವನ್ನು ರೋಷದಿಂದ ಕವಿ ಹೇಳಿದ್ದಾರೆ. ಭಾರತ ದೇಶದ ಜನತೆಯ ಹೃದಯ ಯಾವಾಗಲೂ ತೆರೆದ ಬಾಗಿಲಿದ್ದಂತೆ. ಸರ್ವಮಾನವ ಕುಲಕೋಟಿಗೆ ಭಾರತೀಯ ಅಮೃತ ಹಸ್ತಗಳು ಆಲಂಗಿಸಲು ಸದಾ ಸಿದ್ಧ.

ಈ ಸ್ನೇಹ ಪರವಾದ ಪ್ರೀತಿಯನ್ನು ಮಾತೃವಾತ್ಸಲ್ಯಕ್ಕೆ ಎರಡು ಬಗೆದ ಮಿತ್ರದ್ರೋಹಿ ಶತ್ರುಗಳಾದ ಚೀನಿಯರ ಕುರಿತು ಹೀಗೆ ಹೇಳುತ್ತಾರೆ.

'ನೀ ರುದ್ರನಾಗು' ಕವನದಲ್ಲಿ-

"ಹಿಂದಿ ಚೀನಿ ಭಾಯಿ ಭಾಯಿ ಎಂದು
ಸಾರಿದವನೇ ಇಂದು ಬಾಂಧವರ ಕೊಂದ
ಹಿರಿದು ಕರುಳನು ತಿಂದು
ಬಿಸಿ ರಕ್ತ ಕುಡಿದು
ಆ ರಕ್ತ ಪಿಶಾಚಿ
ರುಚಿ ನೋಡುತಿಹುದು ಇಂದು"
(ಪಂಚಾಕ್ಷರಿ ಹಿರೇಮಠ, ೨೦೦೩, ಪುಟ-೨೮)

ಡಾ. ಪಂಚಾಕ್ಷರಿ ಹಿರೇಮಠರಂತೆ ಬಿ.ಎ. ಸನದಿಯವರು ಬರೆದ 'ಕಿಡಿ ಕಿಡಿ' ಎಂಬ ಕವನದ ಸಾಲುಗಳನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ಹಿಂದಿ-ಚೀನಿ ಭಾಯಿ
ಎಂದು ಕೂಗಿದ ಬಾಯಿ
ಇಂದು ಹಗೆ ನುಡಿಗಡಣಗಳ ತಿಪ್ಪೆಯಾಯ್ತೆ?
ಇತಿಹಾಸ-ಭೂಗೋಳ
ಸಮರಸದ ಪಾಠಗಳ
ಕಲಿತ ಸ್ಮೃತಿ ಈ ಹೊತ್ತು ಸಪ್ಪೆಯಾಯ್ತೆ?"
(ಸನದಿ ಬಿ.ಎ. ಹಿಮಗಿರಿಯ ಮುಡಿಯಲ್ಲಿ, ಪುಟ-೧೦)

ಇಲ್ಲಿ ಕವಿಯ ಮನಸ್ಸು ನೋವಿನಿಂದ ತತ್ತರಿಸುತ್ತಿವೆ. ಏಕೆಂದರೆ ಭಾರತ ಮಾತೆಯ ರಕ್ಷಣೆಯ ಸಲುವಾಗಿ ಯೋಧರಿಗೆ ಯುವಜನಾಂಗಕ್ಕೆ ಸ್ಫೂರ್ತಿ "ಕ್ರಾಂತಿಯಿಂದಲೇ ಶಾಂತಿ" ಎಂಬ ತಂತ್ರ ಅಳವಡಿಸಬೇಕಾಯಿತು. ಭಾರತದೇಶ ಸಂಸ್ಕೃತಿಗೆ ಹೆಸರುವಾಸಿಯಾಗಿದೆ. ಸರ್ವಧರ್ಮಗಳ ಸಂಗಮವಾಗಿದೆ. ಆದರೆ ಇಂದು ವೈರಿಗಳ ಆಕ್ರಮಣದಿಂದ, ಭಾರತದ ಸ್ಥಿತಿ ಹದಗೆಡುತ್ತಿದೆ. ಆದ್ದರಿಂದ ನಾವೆಲ್ಲರೂ "ಒಂದೇ ತಾಯಿಯ ಮಕ್ಕಳು" ಎಂಬ ದಿವ್ಯ ಏಕ ಮಂತ್ರವನ್ನು ಘೋಷಿಸಿ ಪರಿಪಾಲಿಸಲು ಕವಿ ಎಚ್ಚರಿಸುತ್ತಾರೆ.

'ಜಾಗೃತ ಜ್ವಾಲಾಮುಖಿ' ಕವನದಲ್ಲಿ ಕವಿ ಭಾರತಮಾತೆಯನ್ನು ರಕ್ಷಿಸಲು ಪ್ರಕೃತಿ ದೇವರುಗಳಿಗೆ ಮೊರೆಹೋಗಿದ್ದಾರೆ.

"ಓ! ತಾಯೆ ಗಂಗೆ,
ಮೈಯೆಲ್ಲ, ಕಾಲಾಗಿ ಹರಿ,
ಓ! ಅಗ್ನಿ,
ಮೈಯಲ್ಲಿ ನಾಲಗೆಯಾಗಿ ಉರಿ!
ನೀನು"
(ಪಂಚಾಕ್ಷರಿ ಹಿರೇಮಠ, ೨೦೦೩, ಪುಟ-೩೪)

ಇಲ್ಲಿ ನಿಸರ್ಗದ ಎಲ್ಲ ಸಂಪತ್ತುಗಳಿಗೆ ಕವಿ ಎಚ್ಚರಿಸಿದ್ದಾರೆ. 'ನೀ ಭಾರ್ಗವಿಯಾಗು' ಕವನದಲ್ಲಿ ಭಾರತ ಮಾತೆಯೇ ಮಹಾನ್ ಮಹಾತ್ಮರನ್ನು ಸೃಷ್ಟಿಸಿದ ತಾಯೇ, ಅವತಾರ ರೂಪ ತಾಳಿದ ತಾಯೇ, ನಿನ್ನ ಮಕ್ಕಳನ್ನು ರಕ್ಷಿಸು ಎಂದು ಕವಿ ಹೇಳಿದ್ದಾರೆ. ನೀನೊಮ್ಮೆ ಕೋಪಗೊಂಡರೆ ಎಲ್ಲರನ್ನು ಸೆದೆಬಡಿವ ಶಕ್ತಿ ನಿನ್ನಲ್ಲಿದೆ ಎಂದಿದ್ದಾರೆ.

"ಜಯಹೇ! ಜಯಹೇ! ಜಯ ಜಯ ಜಯಹೇ
ಓ! ತಾಯೇ! ಭಾರತ ಜನನಿ ಜಯಹೇ!
ತಕ್ಕಥೈ ದಿತ್ತೆ ತೋಂ ತಾ
ಕುಣಿದು ಬಿಡು
ತುಳಿದು ಬಿಡು
ಮೆಟ್ಟಿ ಬಿಡು
ಅರಿಯ ಸಂತಾನವನು
ಮತ್ತೊಮ್ಮೆ ಸೊಕ್ಕಿನಲಿ
ತಲೆಯೆತ್ತ ದಿರಲಿ"
(ಪಂಚಾಕ್ಷರಿ ಹಿರೇಮಠ, ೨೦೦೩, ಪುಟ–೩೪)

ಮತ್ತೊಮ್ಮೆ ಎಂದು ಆಕ್ರಮಣಗೈದಂತೆ "ವೈರಿಯ ಸಂತಾನವನು ನಾಶ ಮಾಡು ತಾಯೆ" ಎಂದು ಹೇಳಿದ್ದಾರೆ. 'ತಾಯಿ ರಕ್ಕಸಿ' ಕವನದಲ್ಲಿ–

"ಹಿಮಾಚಲ ತಳದಲಿ
ಬಂದಳೊಬ್ಬ ರಕ್ಕಸಿ
ಲಕ್ಷ ಲಕ್ಷ ಮಕ್ಕಳು
ಒಡಹುಟ್ಟಿದ ಬಂಧುಗಳು
ಹಿಂದು ಮುಂದಣ ಬಂಧುಗಳನು
ಬಂದು ಒಂದೇ ಬಾರಿಗೆ
ನುಂಗಿ ನೀರ ಕುಡಿದಳು"
(ಪಂಚಾಕ್ಷರಿ ಹಿರೇಮಠ, ೨೦೦೩, ಪುಟ–೩೦)

ತಾಯೆ ಭಾರತ ಮಾತೆ ಎಲ್ಲಿಂದಲೊ ರಾಕ್ಷಸ ಸ್ವರೂಪ ತಾಳಿ, ಭಾರತೀಯರನ್ನು ಚಂಡಾಡಿ, ಮಕ್ಕಳು, ಬಂಧು ಭಾಂಧವರೆನ್ನದೆ, ಸಹೋದರರೆನ್ನದೆ ಒಂದೆ ಬಾರಿಗೆ ಎಲ್ಲರನ್ನೂ ನಾಶ ಮಾಡಿದಳು 'ತಾಯಿ' ಎಂದಿದ್ದಾರೆ. 'ಆ ಗೂಳಿ' ಕವನದಲ್ಲಿ–

"ಹಿಮಗಿರಿಯ ಕಿತ್ತುರುಳಿಸುವೆನೆಂದು
ಬಂದ ಆ ಚೀನಿ ಗೂಳಿ!
ಕೋಡ ಮುರಿದುಕೊಂಡಿತ್ತು!
ಪೀಕಿಂಗಿನಲ್ಲಿ–
ನರಳುತ್ತ ಬಿದ್ದಿತ್ತು!"
(ಪಂಚಾಕ್ಷರಿ ಹಿರೇಮಠ, ೨೦೦೩, ಪುಟ–೩೩)

ಸಮಸ್ತ ಭಾರತ ದೇಶವನ್ನೇ ಹಾಳು ಮಾಡುತ್ತೇನೆಂದು ಬಂದ ಚೀನಿಯರು ತಮ್ಮ ಸೊಕ್ಕಿನಲ್ಲಿ, ಅಹಂಕಾರದಲಿ ತಮ್ಮ ಕೋಡನ್ನು ತಾವೇ ಮುರಿದುಕೊಂಡು ನರಳುತ್ತ ಬಿದ್ದಿದ್ದಾರೆ-ಎಂದು ಕವಿ ಹೇಳಿದ್ದಾರೆ.

'ಬರಲಿರುವ ನಾಳೆ ನಿಮ್ಮದಿದೆ' ಕವನದಲ್ಲಿ 'ಇಂದಿನ ಮಕ್ಕಳೇ ನಾಳಿನ ನಾಗರಿಕರು' ಎನ್ನುವಂತೆ ನವ ರಾಷ್ಟ್ರದ ನಿರ್ಮಾಪಕರಾದ ನವಯುವಕರನ್ನು ಕವಿ ಎಚ್ಚರಿಸಿದ್ದಾರೆ.

"ಮದಮತ್ಸರಗಳ ಹೆಡೆಮೆಟ್ಟಿ ತುಳಿದು
ಜಾತಿ-ಜಾತಿಗಳ ಬೇರ ಕಿತ್ತು ತೆಗೆದು
ನವರಾಷ್ಟ್ರ ನಿರ್ಮಾಣ ಕಾರ್ಯದಲಿ
ನಿಮ್ಮನ್ನು ನೀವೇ ತೊಡಗಿಸಿಕೊಳ್ಳಲೇಳಿ!"
(ಪಂಚಾಕ್ಷರಿ ಹಿರೇಮಠ, ೨೦೦೩, ಪುಟ-೮೪)

ಎಂದು ನವಯುವಕರಿಗೆ ಜಾತಿ, ಮತ, ಪಂಥಗಳನ್ನು ದೂರ ಸರಿಸಿ ಭಾರತದ ಭವಿಷ್ಯವನ್ನು ಕಟ್ಟಲು ಯುವಕರನ್ನು ಕವಿ ಹುರುದುಂಬಿಸಿದ್ದಾರೆ ಮತ್ತು ಜಾತಿ-ಮತದ ವಿಷಮ ಬೀಜವನ್ನು ಕಿತ್ತೊಗೆದು ರಾಷ್ಟ್ರದ ಕಾರ್ಯಕ್ಕೆ ಸಿದ್ಧರಾಗಿ ಎಂದು ಹೇಳಿದ್ದಾರೆ.

'ಶಾಂತಿಪಕ್ಷಿ' ಕವನದಲ್ಲಿ ಎಲ್ಲರೂ ಒಂದೇ ಎಂಬ ಮಾತನ್ನು ಹೇಳಿದ್ದಾರೆ.

"ಶಾಂತಿ ಪಕ್ಷಿ ಸಾರುತ್ತಲಿದೆ ಲೋಕಕ್ಕೆಲ್ಲ
ಬರಲಿರುವ ನಾಳೆ ನಮ್ಮವಿವೆ
ಅಲ್ಲಿ ಯಾರು ಯಾರನ್ನೂ ತುಳಿಯಲಾರರು.
ಯಾರು ಯಾರನ್ನೂ ಆಳಲಾರರು.
ಅಲ್ಲಿ ಎಲ್ಲರೂ ಸಮಾನರು.
ಎಲ್ಲರೂ ಅಲ್ಲಿ ಸುಖಿಗಳು.
ಅಲ್ಲಿ ರೊಟ್ಟಿಗಾಗಿ ಯಾರ ಮುಂದೆಯೂ
ಕೈ ಚಾಚಬೇಕಾಗಿಲ್ಲ.
ದುಡಿಮೆಗಾಗಿ ಯಾರ ಮುಂದೆಯೂ
ಮೊಣಕಾಲೂರಬೇಕಾಗಿಲ್ಲ"
(ಪಂಚಾಕ್ಷರಿ ಹಿರೇಮಠ, ೨೦೦೩, ಪುಟ-೮೬)

ಈ ಕವನದಲ್ಲಿ 'ಶಾಂತಿಪಕ್ಷಿ' ಯುದ್ಧ ಮುಗಿದು ವೈರಿಗಳ ಸಮೂಹ ನಾಶವಾಗಿ ಜಗತ್ತೆಲ್ಲ ಬೆಳದಿಂಗಳ ಸಮುದ್ರದಂತೆ ಶಾಂತವಾಗಿದೆ. ಗುಲಾಮರಂತೆ ಬದುಕುವ ಸ್ಥಿತಿ ಮಾಯವಾಗಿ ಜನತೆ ಸ್ವತಂತ್ರರಾಗಿ ಶಾಂತಿ ಪಕ್ಷಿಗಳಂತೆ ಉಲಿಯುತ್ತಿದ್ದಾರೆ ಎನ್ನುತ್ತಾರೆ. ಎಲ್ಲರೂ ಒಂದೇ ಎಂಬ ಶಾಂತಿ ಮಂತ್ರ ಸಾರುತ್ತಲಿದೆ. ಮೋಸ-ವಂಚನೆಗಳಿಂದ ವಿಮುಕ್ತರಾಗಿ ಶಾಂತತೆಯಿಂದ ಜೀವನ ಸಾಗಿದೆ ಎಂದು ಕವಿ ಹೇಳಿದ್ದಾರೆ.

"ಓ! ರಾಜ ರಾಜೇಶ್ವರಿ ವಿಶ್ವಕಲ್ಯಾಣಿ
ಸಿದ್ಧಗೊಳಿಸೆಮ್ಮನು ನಿನ್ನ ಕಾರ್ಯಕ್ಕಾಗಿ
ಐಕ್ಯತೆಯ ಹೊಂದೀವಿಗೆಯ
ಮುಡಿಸಿ ಎಲ್ಲರ ಎದೆ ದೆಯಲಿ
ನಿನ್ನ ಮಕ್ಕಳ ಮನದಿ
ಅಲ್ಲಿ ಸುಳಿವ
ಅಸಂಖ್ಯಾತ ಸ್ಮಿತ ಸ್ವಪ್ನದಲಿ
ಅಧರದೆಸಳಿನಲಿ
ಸಂಪ್ರೀತಿಯನು ಸುರಿ ಸುರಿ
ಕನ್ನಡದ ಜೊತ್ಸಾಮಯಿ!"

(ಪ್ರಭಾವತಿ ಹಲಕುರ್ಕಿ, ೨೦೧೧, ಪುಟ-೫೨)

ಜಾತಿ, ಮತ, ಪಂಥವನ್ನು ಹೊಡೆದೋಡೆಸಿ ಏಕತಾ ಭಾವವನ್ನು ಎಲ್ಲರಲ್ಲೂ ಸಾರಿ, ಪ್ರತಿಯೊಬ್ಬರಲ್ಲೂ ಕನ್ನಡದ ಅಭಿಮಾನವನ್ನು ಬೆಳೆಸು, ಅಸಂಖ್ಯಾತ ಜನರಲ್ಲಿ ಕನ್ನಡದ ಬಗ್ಗೆ ಪ್ರೀತಿಯನ್ನು ಹೆಚ್ಚಿಸಿ. ಕನ್ನಡಿಗರಿಗೆ ಪ್ರೀತಿಯ ಧಾರೆಯನ್ನು ಸುರಿಸು ತಾಯೇ ಎಂದಿದ್ದಾರೆ. ಕನ್ನಡಿಗರಿಗೆ ಕನ್ನಡ ಬೆಳೆಸಲು ಉಳಿಸಲು ಕರೆನೀಡಿದ್ದಾರೆ. ಕನ್ನಡಿಗನಾಗಿ ಉಳಿವ ಆಸೆಯನ್ನು ಅಭಿವ್ಯಕ್ತಪಡಿಸಿದ್ದಾರೆ.

'ಸಾಕು ತಾಯೇ ರಕ್ತದೋಕುಳಿ......' ಎಂಬ ಕವನದಲ್ಲಿ ಸರ್ವರೂ ಸಮನ್ವಯವಾಗಿ ಬಾಳಲು ಶಾಂತಿಯಿಂದಿರಲು ಕವಿ ಕರೆ ನೀಡಿದ್ದಾರೆ.

"ನಿನ್ನ ಋಷಿ-ಮುನಿಗಳು, ಸಾಧು ಸಂತರು
ಸಾರಿದ 'ವಸುದೈವ ಕುಟುಂಬಕಂ'
ಸಾಧಿಸಲು ಎಮಗೆ ಶಕ್ತಿಯ ನೀಡು ತಾಯೇ!
ಓ! ಪೃಥಿವಿ, ನಿನ್ನ ತಾಣ ಶಾಂತಿ, ಪ್ರೇಮ
ಸೌಂದರ್ಯಧಾಮವಾಗಿಯೇ ಉಳಿಯಲಿ,
ಸಾಕು ತಾಯೇ ಈ ರಕ್ತ ದೋಕುಳಿ
ಲೋಕದ ತುಂಬ ಶಾಂತಿಯ ಸುರಿಮಳೆ ಸುರಿಸು!
ಕೂಡಿಬಾಳುವ ಕಲೆಯ ಕಲಿಸು!"

(ಪ್ರಭಾವತಿ ಹಲಕುರ್ಕಿ, ೨೦೧೧, ಪುಟ-೫೩)

ಋಷಿ-ಮುನಿಗಳು, ಸಾಧು ಸಂತರು ಹುಟ್ಟಿದಂತ ನಾಡಿನಲ್ಲಿ ಪ್ರೇಮ, ಶಾಂತಿ, ಸೌಂದರ್ಯವನ್ನು ಉಳಿಸಿಕೊಳ್ಳಲು, ಜಗದಲ್ಲಿ ಶಾಂತಿಯ ಮಳೆ ಸುರಿಸಲು, ಎಲ್ಲರೂ ಒಂದಾಗಿ ಬಾಳಲು, ಕ್ರೌರ್ಯ, ಅಹಂಕಾರವನ್ನು ಹೊಡೆದೊಡಿಸಿ, ಅಂತಃಕರಣದಿಂದ ರಕ್ತದೋಕುಳಿಯನ್ನು ನಿಲ್ಲಿಸು ತಾಯೇ ಎಂದು ಕವಿ ವಸುಂಧರೆ ನಿನ್ನ ಕೃಪೆಯಿರಲಿ ಎಂದಿದ್ದಾರೆ.

'ಇನ್ನೇನು ಬೇಕು............' ಕವನದಲ್ಲಿ ಕವಿ ಭಾರತ ದೇಶದಲ್ಲಿ ಎಲ್ಲವೂ ಇದೆ ಆದರೆ ಉದ್ಧಾರವಾಗಲು ಇನ್ನೇನು ಬೇಕು ನೀವೇ ಹೇಳಿ ಎಂಬ ಮಾತನ್ನು ಹೇಳಿದ್ದಾರೆ.

"ಪ್ರತಿಭಾವಂತರು, ಸ್ವಾಭಿಮಾನಿಗಳು
ತಲೆಯೆತ್ತಿ ಜೀವಿಸದಂತೆ
ನೋಡಿಕೊಳ್ಳಲೋಸುಗ
ಸದಾ ಜಾಗೃತರಾಗಿರುವ
'ಹಿತಚಿಂತಕ' ರಿದ್ದಾರೆ
ಧರ್ಮ, ಸಂಪ್ರದಾಯ, ದೇವರು
ಮಂದಿರ, ಮಸೀದಿ, ಗುರುದ್ವಾರ
ಚರ್ಚುಗಳು, ಗಡಿ, ಭಾಷೆ-ಇವೆಲ್ಲವುಗಳ ಹೆಸರಿನಲ್ಲಿ"
(ಪ್ರಭಾವತಿ ಹಲಕುರ್ಕಿ. ೨೦೧೧, ಪುಟ-೫೩)

"ಭಾರತ ದೇಶದಲ್ಲಿ
ದಿನಕ್ಕೊಂದು ಚಂದದಂತೆ
ಮುಗ್ಧ ಜನರ ಕೊಲೆ ನಿರಂತರ
ನಡೆದಿದೆ"
(ಪಂಚಾಕ್ಷರಿ ಹಿರೇಮಠ,, ೨೦೦೩, ಪುಟ-೧೫೦)

ನಮ್ಮ ಭಾರತ ದೇಶದಲ್ಲಿ ಪ್ರತಿಭಾವಂತ ಜ್ಞಾನ ಸಂಪನ್ನರಿದ್ದಾರೆ. ದೇಶದ ಬಗ್ಗೆ ಜಾಗೃತ ಪ್ರಜ್ಞೆಯನ್ನು ಹೊಂದಿದ ಹಿತಚಿಂತಕರಿದ್ದರೂ ಸಹ ಧರ್ಮ ದೇವರ ಹೆಸರಿನಲ್ಲಿ ನಿರಂತರವಾಗಿ ದಿನಕ್ಕೊಂದು ಕೊಲೆ ಸುಲಿಗೆ ಭ್ರಷ್ಟಾಚಾರಗಳು ನಿಂತಲ್ಲಿ ನಿಲ್ಲದೆ ಸುರಿಮಳೆಯಂತೆ ಸುರಿಯುತ್ತಿರುವಾಗ ದೇಶದ ಉದ್ಧಾರ ಯಾವಾಗ? ಉದ್ಧಾರವಾಗಲು ಮತ್ತಿನ್ನೇನು ಬೇಕು ಎಂಬ ಮಾತನ್ನು ಅಭಿವ್ಯಕ್ತ ಪಡಿಸಿದ್ದಾರೆ.

'ನೆಲವೇ ತಳವಾರನಾಗಿರುವಾಗ' ಎಂಬ ಕವನದಲ್ಲಿ ಕಾಯುವವರೇ ಕೊಲ್ಲುವ ಹಾಗಾದರೆ ನಮ್ಮ ಭಾರತ ಮಾತೆಯನ್ನು ರಕ್ಷಣೆ ಮಾಡುವವರು ಯಾರು? ಎಂದು ಹೇಳಿ ಭಾರತದ ಸಂಸ್ಕೃತಿಯ ಬಗ್ಗೆ ತಿಳಿಸಿದ್ದಾರೆ.

"ಭಾರತದ ಮಣ್ಣ ಕಣ ಕಣ
ಪವಿತ್ರತೆಯ ಹೊಂಗಿರಣ ಕಿರಣ
'ಸಾರೆ ಜಹಾಂಸೆ ಅಚ್ಚಾ ಹಿಂದೂಸಿತಾ ಹಮಾರಾ'
ವಿಶ್ವ ಸಂಸ್ಕೃತಿಯ ಪರಮ
ಪಾವನ ಕ್ಷೇತ್ರವಿ ಭರತಭೂಮಿ"
(ಪಂಚಾಕ್ಷರಿ ಹಿರೇಮಠ, ೨೦೦೩, ಪುಟ-೧೩೪)

ಬಹುಭಾಷಾ ಬಲ್ಲಿದರಾದ ಲೇಖಕರು ಹಿಂದಿ ಭಾಷೆಯನ್ನು ನಡುನಡುವೆ ಬಳಸಿ ಶಕ್ತಿಯುತವಾಗಿದ್ದಾರೆ. ಭಾರತ ದೇಶದ ಮಣ್ಣಿನ ಒಂದೊಂದು ಕಣದಲ್ಲಿಯೂ ಪಾವಿತ್ರ್ಯತೆ, ಪೂಜ್ಯತೆ ಇದೆ, ಹೊಂಗಿರಣದ ಬೆಳಕಿದೆ. ವಿಶ್ವದಲ್ಲಿಯೇ ಸಂಸ್ಕೃತಿಗೆ ಹೆಸರಾದ ಕ್ಷೇತ್ರವಾಗಿದೆ ಎಂದಿದ್ದಾರೆ.

ಕವಿಯ ಸಾಹಿತ್ಯದಲ್ಲಿ ದೇಶಪ್ರೇಮ ದೇಶ ವಾಸಿಗಳ ರಕ್ಷಣೆಗೋಸ್ಕರ ಹಂಬಲಿಸುವ ಮನದ ತುಡಿತವನ್ನು ಕಾಣಬಹುದು. ಭಾರತಮಾತೆಗೆ ದೇಶವನ್ನು ಉದ್ಧಾರವಾಗಿಸಲು ದಾರಿ ತೋರಿಸು ಎನ್ನುವ ಮಾತನ್ನು ನೋಡಿದಾಗ ಇವರಲ್ಲಿಯ ದೇಶಪ್ರೇಮ, ದೇಶಾಭಿಮಾನ, ದೇಶಶಕ್ತಿ ಎಷ್ಟಿದೆ? ಎಂಬುದನ್ನು ತಿಳಿಯಬಹುದು. ಕವಿಯಲ್ಲಿ ಪ್ರಗತಿ ಆಶಯ ವ್ಯಕ್ತವಾಗಿದೆ. ಮಾನವೀಯ ಅನುಕಂಪ ಹೃದಯಂಗಮವಾಗಿ ಹೊರಹೊಮ್ಮಿದೆ.

**೪.೬. ಸಂಭ್ರಮದ ಸ್ವಾತಂತ್ರ್ಯೋತ್ಸವ:**

ದೇಶವು ಸ್ವಾತಂತ್ರ್ಯಗೊಂಡ ಶುಭಸಂದರ್ಭವನ್ನು ಸ್ವಾತಂತ್ರ್ಯೋದಯ, ಗಣರಾಜ್ಯೋದಯಗಳ ಉತ್ಸವಗಳ ಸಡಗರ, ಸಂಭ್ರಮಗಳನ್ನು ಕುರಿತು ನವೋದಯ ಕವಿಗಳು ಕಾವ್ಯ ರಚಿಸಿರುವರು. ಈ ಸಂದರ್ಭದಲ್ಲಿ ರಾಷ್ಟ್ರೀಯತೆಯ ಅಂಗಗಳಾದ, ರಾಷ್ಟ್ರಧ್ವಜ, ರಾಷ್ಟ್ರಗೀತೆ, ಬಿಡುಗಡೆ, ಸ್ವಾತಂತ್ರ್ಯ, ಪ್ರಜಾಪ್ರಭುತ್ವ-ಮುಂತಾದವುಗಳನ್ನು ಕುರಿತು ವರ್ಣಿಸಿರುವರು. ಇವುಗಳ ಜಯಂತಿ, ಪುಣ್ಯಸ್ಮರಣೆ, ಆಚರಣೆಗಳಿಗೂ ಕಾವ್ಯ ಮಾಧ್ಯಮದ ಮೂಲಕ ಅಭಿವ್ಯಕ್ತಪಡಿಸುವುದು ರಾಷ್ಟ್ರೀಯತೆಯ ಧ್ಯೋತಕವಾಗಿದೆ.

ಹುಯಿಲಗೋಳ ನಾರಾಯಣರಾಯರು "ಬನ್ನಿರೋ ನೋಡಬನ್ನಿರೋ"-ಕವನವು ಸ್ವಾತಂತ್ರ್ಯೋದಯದ ಉತ್ಸವದ ಸಡಗರ-ಸಂಭ್ರಮಗಳನ್ನು ಕುರಿತಿದೆ. ಇಲ್ಲಿ ಕವಿ ಜನರಿಗೆ ತ್ರಿವರ್ಣ ಧ್ವಜ ಹಿಡಿದು, ಮೇಳ ವಾದ್ಯಗಳೊಡನೆ 'ಜಯ್ ಹಿಂದ್'-ಘೋಷಣೆ ಕೂಗುತ್ತಾ ಸ್ವಾತಂತ್ರ್ಯೋತ್ಸವದಲ್ಲಿ ಪಾಲ್ಗೊಳ್ಳಲು ಹೇಳಿದ್ದಾರೆ. ಜನರು ತಮ್ಮ ಮನೆ-ಮನೆಗಳ ಮುಂದೆಯೂ ರಂಗೋಲಿಹಾಕಿ ತಳಿರು-ತೋರಣ ಕಟ್ಟಿ ಸ್ವಾತಂತ್ರ್ಯೋತ್ಸವ ಆಚರಿಸಬೇಕೆಂದು ಹೇಳಿದ್ದಾರೆ. ನಾವು ಸತ್ಯ-ಅಹಿಂಸೆ-ಅಸಹಕಾರ-ಅಸ್ತ್ರಗಳಿಂದ ಸ್ವಾತಂತ್ರ್ಯಗಳಿಸಿದ್ದನ್ನು ಜಗತ್ತಿಗೆ ಸಾರಿಹೇಳಬೇಕು. ಭಾರತಕ್ಕೆ ಈ ಸ್ವಾತಂತ್ರ್ಯ ದೊರೆಯುತ್ತಿದ್ದುದು ತನ್ನ ಆರಾಧ್ಯ ದೈವವಾದ ಗದುಗಿನ ವೀರನಾರಾಯಣನ ಕೃಪೆಯಿಂದ-ಎಂದು ಕವಿಗಳು ತಮ್ಮ ದೈವಭಕ್ತಿಯ ಮಹಿಮೆಯನ್ನು ಅರುಹಿದ್ದಾರೆ.

ರಂ ಶ್ರೀ ಮುಗಳಿಯವರು ಸ್ವಾತಂತ್ರ್ಯೋದಯದ ಸಂದರ್ಭದಲ್ಲಿ ಸ್ವಚ್ಛಂದವಾಗಿ ಹಾರಾಡುವ ರಾಷ್ಟ್ರಧ್ವಜಕ್ಕೆ 'ನಮನ' ಕವನದಲ್ಲಿ, ರಾಷ್ಟ್ರಧ್ವಜವು ಸ್ವತಂತ್ರ ಭಾರತದ ನವಸಂಕೇತ, ನಾಡಬಲದ ಕುರುಹು, ಅದಕ್ಕೆ-"ನಮನ ಮಾಡುವ ನಮ್ಮಯ ಧ್ವಜಕೆ! ಮೂರ್ತತೇಜಕೆ!"-ಎಂದು ತಮ್ಮ ನಮನವನ್ನು ಅರ್ಪಿಸಿದ್ದಾರೆ. ರಾಷ್ಟ್ರಧ್ವಜವು ಭಾವೈಕ್ಯತೆಯನ್ನುಂಟು ಮಾಡುವದು. ಹೀಗೆ-

"ಬಣ್ಣ ಬಣ್ಣದಾ ಜನಮನಗಣವನು
ತನ್ನಡಿಯಲಿ ಒಂದಾಗಲು ಕರೆಯುತ
ನೆಲದಲಿ ನೆಲಸಿಯು ಮುಗಿಲಲಿ ಮಿಳಿರುವ

ಮೂವಣ್ಣದ ಸೊಬಗಿನ ಆಗರಕೆ"

(ಮುಗಳಿ ರಂ. ಶ್ರೀ. ೧೯೫೦, ಪುಟ–೬೬)

–ಎಂದು ಬಣ್ಣಿಸಿ, ಅದು ಸತ್ವದ ರಕ್ಷಣೆ, ತತ್ವ ಸಹನೆ, ಸಮರಸ ಧರ್ಮದ ಪಾಲನೆ, ದೇಶದ ಜನತೆಯ ನಾಡಿಯ ಮಿಡಿತವ ಸಾರುವದರ ಪ್ರತೀಕವೂ ಆಗಿದೆ. ಇವರ 'ನವಯುಗದ ರವಿ'– ಕವನವು ೧೯೫೦ ರ ಜನವರಿ೨೬ ರಂದು ದೇಶವು ಪ್ರಜಾಸತ್ತಾತ್ಮಕ ಗಣರಾಜ್ಯವಾದ ಸಂದರ್ಭದಲ್ಲಿ ರಚಿಸಲಾಗಿದೆ. ಇದರಲ್ಲಿ ಇಂದಿನ ಬಿಡುಗಡೆಯ ಪಾಶಕ್ಕಾಗಿ, ಅಮೃತ ಯೋಗದ ಸುಧೆಯು ಸೌಖ್ಯಕ್ಕಾಗಿ ವೀರಧೀರರ ಜೀವನರಸ ಹಿಂಡಿದ ಹೋರಾಟದ ಕಹಿ ನೆನಪನ್ನು ಮಾಡಿಕೊಂಡಿರುವರು. ಅದರ ಸತ್‌ಫಲವಾಗಿಯೇ,–

"ನವಯುಗದ ರವಿಯಿಂದು ಮೂಡಣದಿ ಮೂಡುತಿಹನು
ಮಲಗಿರುವ ಜನಮನದ ಕತ್ತಲೆಯ ದೂಡುತಿಹನು
ಚಿಮ್ಮುತಿದೆ ದಿಸೆದಿಸೆಗೆ ಬಿಡುಗಡೆಯ ಚೆಲುಬೆಳಕು"

(ಮುಗಳಿ ರಂ. ಶ್ರೀ. ೧೯೫೦, ಪುಟ–೬೭)

–ಎಂದು ಆ ಶುಭ ಸಂದರ್ಭವನ್ನು ಕುರಿತು ಬಣ್ಣಿಸಿರುವರು.

ಆನಂದ ಕಂದರು–'ಏರಿತು ಗಗನಕೆ ನಮ್ಮ ಧ್ವಜ!'ದಲ್ಲಿ ಸ್ವಾತಂತ್ರ್ಯೋತ್ಸವದಂದು ಏರಿಸಿದ ಧ್ವಜವನ್ನು ಭಾರತದ 'ಭಾಗ್ಯರವಿಯ ತೇಜ'–ಎಂದು ಬಗೆ ಬಗೆಯಾಗಿ ಅದನ್ನು ಪ್ರತಿಮಿಸಿದ್ದಾರೆ. ಈ ರಾಷ್ಟ್ರಧ್ವಜವು 'ಮರವೆಯಿಂದ ಜನಮನ ಜಾಗರಿಸಿ ಪರದಾಸ್ಯದ ಜಾಲದ ಭಯ ಹರಿಸಿದೆ. ಇನ್ನು ಮುಂದೆಯೂ ಇದು–

"ದೇಶ–ದೇಶಗಳ ಜನತೆಗೆ ಅನ್ನ,
ಪಾಶವ ಹಿಂಸೆಯ ತಡೆಯುವ ತ್ರಾಣ (ಸಂ)
ತೋಷದಿ ಬಾಳುವ ಸಮತೆಯ ಜ್ಞಾನ
ಬೀರಲು ಏರಿದೆ ನಮ್ಮ ಧ್ವಜ"

(ಬೆಟಗೇರಿ ಕೃಷ್ಣಶರ್ಮ, ೧೯೫೧, ಪುಟ–೭೫)

ದೇಶದಲ್ಲಿ ಸಮೃದ್ಧಿ, ಅಹಿಂಸೆ, ಸಮತೆ, ಜ್ಞಾನಗಳನ್ನು ಸಾರಲು ಏರಿದೆ–ಈ ಧ್ವಜವು ಆ ಪೂರ್ವದಲ್ಲಿದ್ದ ಬಂಧನ, ಆಕ್ರಮಣ ದುರಾಡಳಿತ ದಬ್ಬಾಳಿಕೆಯ ಶಾಸನಗಳೇನಾದರೂ ಈಗ ಎಲ್ಲಿಯಾದರೂ ಇದ್ದರೆ ತೋರಿಸಿರಿ–

"ಎಲ್ಲಿದೆ ಬಂಧನ ಬಲದಾಕ್ರಮಣ?
ಎಲ್ಲಿದೆ ಶಾಸನರಾಹುಗ್ರಹಣ?
ಎಲ್ಲವ ನಿಲ್ಲಿಸಿ ಬಿಡುವೆನೀಕ್ಷಣ!"

(ಬೆಟಗೇರಿ ಕೃಷ್ಣಶರ್ಮ, ೧೯೫೧, ಪುಟ–೭೫))

–ಎಂದು ಸಾರಿ ಹೇಳುತ್ತಿದೆ. ಸ್ವಾತಂತ್ರ್ಯೋದಯವನ್ನು ಕುರಿತು ಇವರ ಇನ್ನೊಂದು ಕವನ–

'ಇದೋ ಬಂದ ಭಾನು!'

"ಓ!– ಮೂಡಣದೀ ನಭದಿ ಹೊನ್ನ
ಯುಗದ ಮೊಳಕೆ ಮೂಡಿತೋ?
ಆ–ಮೊಳಕೆಯದೇ ಬಳೆದು ನಿಶೆಯ
ಜತೆಗೆ ಕದನ ಹೂಡಿತೋ!"

(ಬೆಟಗೇರಿ ಕೃಷ್ಣಶರ್ಮ, ೧೯೫೧, ಪುಟ–೮೪)

ಪೂರ್ವದಿಗಂತದಲ್ಲಿ ಸೂರ್ಯನು ಉದಯಿಸುವಾಗ ಹಗಲು ರಾತ್ರಿಯೊಂದಿಗೆ ಕದನ ಮಾಡುತ್ತಿರುವಂತಿರುತ್ತದೆ. ಅದೇ ರೀತಿ ಸಂಘರ್ಷ ನಡೆದು ಸ್ವಾತಂತ್ರ್ಯ ಉದಯವಾಗಿದೆ.

ಸ್ವಾತಂತ್ರ್ಯ ಸೂರ್ಯನು ಉದಯಿಸಲು ಈತನ ಪ್ರಕಾಶದಿಂದ ಪರದಾಸ್ಯವೆಂಬ ಕತ್ತಲೆಯು ಓಡಿಹೋಯಿತೋ?–ಹೀಗೆ ಉಪಮೆ–ರೂಪಕಗಳ ಮೂಲಕ ಸ್ವಾತಂತ್ರ್ಯೋದಯದ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ.

"ಇದೋ ಬಂದ ಭಾನು ತಂದ
ಸ್ವಾತಂತ್ರ್ಯದ ಕಾಂತಿಯ
ಅದೋ ಓಡಿಹೋಯ್ತು ನೋಡಿ
ಬಲಿದ ನಿಶಾ ಭ್ರಾಂತಿಯ!"

(ಬೆಟಗೇರಿ ಕೃಷ್ಣಶರ್ಮ, ೧೯೫೧, ಪುಟ–೮೪)

ಇವರ 'ನವಯುಗಾರಂಭ'ವೂ ಸ್ವಾತಂತ್ರ್ಯೋದಯದ ದಿನದಂದು ಉಲ್ಲಸಿತ ಭಾವನೆಯಿಂದ ರಚಿಸಿದ್ದಾರೆ. ಸ್ವಾತಂತ್ರ್ಯದ ಉದಯ ದೇಶದಲ್ಲಿ ಹೊಸ ಯುಗವನ್ನು ಆರಂಭಿಸುವುದಾಗಿದೆ. ಭವಿಷತ್ತಿನ ಆಶೆ–ಭರವಸೆಗಳನ್ನು ಹೊತ್ತು ತರುವುದಾಗಿದೆ. ದೇಶದಲ್ಲಿ 'ಇಂದು ಹುಟ್ಟಿದವನಿಗೆ ಇಲ್ಲವ್ಯೆ, ಪರದಾಸ್ಯದ ಹೊಲೆಯು!'–ಎಂಬ ಭಾವನೆಯನ್ನೂ, ಪರದಾಸ್ಯದಲ್ಲಿದ್ದಾಗ, ಎಂಜಲನ್ನವನು ಹೊಟ್ಟೆತುಂಬ ಉಂಡರೂ, ಅದು ನಮಗೆ ಹೊಲಸು ಅನ್ನುವ ಹಂದಿತನವನ್ನು ಕೊಟ್ಟಿತ್ತು. ಆದರೆ–'ಇಂದು ಉಂಡ ಊಟವಿದು ತುಂಬುತಿದೆ ಮನದಿ ಮನುಜ ಗುಣವ'–ಎಂಬ ತೃಪ್ತಿ ಇದೆ. ದೇಶದ ಜನತೆಯ ಉತ್ಸಾಹ–ಉಲ್ಲಾಸದ ಭಾವನೆಗಳನ್ನು ಈ ಕವನದಲ್ಲಿ ವ್ಯಕ್ತಪಡಿಸಿರುವರು. ಇವರ 'ಉತ್ಸಾಹ ಗಾಥಾ' ಸಂಗ್ರಹದ 'ನಿದ್ದೆಯಿಂದೆದ್ದಿಹನು ಭಾರತದ ಪುರುಷ!'–ಕವನದಲ್ಲಿ ಭಾರತವು ಕುಂಭಕರ್ಣನಂತೆ ಗಾಢನಿದ್ರೆಯಲ್ಲಿತ್ತು. ಕುಂಭಕರ್ಣನನ್ನು ಎಬ್ಬಿಸಿದಂತೆ ಪ್ರಯಾಸಪಟ್ಟು ಎಬ್ಬಿಸಲಾಯಿತು. ಈಗ–

"ನಿದ್ದೆಯಿಂದೆದ್ದಿಹನು ಭಾರತದ ಪುರುಷ
ಎಂದು ತಾರೆಗಳೆಲ್ಲ ತಾಳಿಹವು ಹರುಷ!

ಇನ್ನುಹ ಗೆ ತಲೆಯಿಕ್ಕಲಾರನೀ ದೆಸೆಯತ್ತ"

(ಬೆಟಗೇರಿ ಕೃಷ್ಣಶರ್ಮ, ೧೯೭೨, ಪುಟ-೫೮)

ಅದೇ ತಾನೆ ಸ್ವಾತಂತ್ರ್ಯಗೊಂಡ ದೇಶವನ್ನು ಪ್ರತಿಮಿಸಿದ್ದಾನೆ. ಕುವೆಂಪುರವರು 'ಶ್ರೀಸ್ವಾತಂತ್ರ್ಯೋದಯ ಮಹಾಪ್ರಗಾಥ'-ದಲ್ಲಿ ೧೯೪೭ರ ಅಗಸ್ಟ ೧೪ ಮಧ್ಯರಾತ್ರಿ ೧೨ ಗಂಟೆ ಆದ ಮರುಕ್ಷಣದಲ್ಲೇ ದೇಶ ಸ್ವತಂತ್ರಗೊಂಡಿತು. ಈ ಉತ್ಸವದ ಶುಭ ಸಂದರ್ಭಲ್ಲಿ ಮೂಡಿದ ಭಾವನೆಗಳನ್ನು ಈ ಸುದೀರ್ಘವಾದ ಪ್ರಗಾಥದಲ್ಲಿ ಹರಿಬಿಟ್ಟಿದ್ದಾರೆ. ಅಂದು ಸ್ವಾತಂತ್ರ್ಯೋದಯಕ್ಕೆ ಸಿದ್ಧಗೊಂಡಿರುವದನ್ನು ಕವಿ ದೇವಾನುದೇವತೆಗಳ ಸಮೂಹ ಬಂದ ಮುಕ್ತಿಗಳಾದ ಭಾರತಾಂಬೆಯನ್ನು ಪೂಜಿಸುವ ಸಿದ್ಧತೆಯಂತೆ-'ಭಾರತಾಂಬಿಕಾ ಮುಕ್ತಿ ಪೀಠವದೊ ಸಿದ್ಧಯೋಗಿ ಸಾಂದ್ರ!'ವೆಂದು ವರ್ಣಿಸಿರುವರು. ಈ ಪೂಜಾ ಉತ್ಸವದ ಮಹಾಸಭೆಗೆ ದೇವಲೋಕದಿಂದ ಅವತಾರಪುರುಷರಾದ ರಾಮ, ಕೃಷ್ಣ, ಮಹಾವೀರ, ಬುದ್ಧ, ರಾಮಕೃಷ್ಣ ಪರಮಹಂಸ-ಮೊದಲಾದವರೂ ಆಸೀನರಾಗಿರುವರು. ಕವಿ ನಿರೂಪಕನಂತೆ ಭಾರತಮಾತೆಗೆ ಯಾವ ಮಹಾತ್ಮರು ಯಾವ ಕಡೆ ಇದ್ದಾರೆಂದು ಸ್ಥಾನ ನಿರ್ದೇಶಿಸಿ ಪರಿಚಯಮಾಡಿಕೊಡುತ್ತಾರೆ. ಇವರ ಪಕ್ಕದಲ್ಲಿಯೇ ಕರ್ನಾಟಕ ಕವಿ, ಅಲ್ಲಿ ಬಂಗಾಳಿ ಗುರು (ರವಿಂದ್ರನಾಥ ಟ್ಯಾಗೋರ), ಇಲ್ಲಿ ಗುರುನಾನಕರು ಮತ್ತು ಸಂತಕವಿ ಕಬೀರ, ಇತ್ತ ನಿನ್ನ ರಾಜಕೀಯ ವೀರ (ಗಾಂಧಿ), ಅತ್ತ ನಿನ್ನ ಅಚಾರ್ಯರಾದ ಕ್ರೈಸ್ತಪೈಗಂಬರರು, ಅಲ್ಲಿ ರಾಜರ್ಷಿ, ಇಲ್ಲಿಯಂತ್ರರ್ಷಿ, ಅತ್ತ ಚಕ್ರವರ್ತಿ, ಇತ್ತ ನಿನಗೆ ಕೈಮುಗಿದು ನಿಂತವನು ನಿನಗಾಗಿ ದುಡಿದ ದೈವಮೂರ್ತಿ-ಹೀಗೆ ಮಹದ್‌ದೇವತಾ ಪುರುಷರು, ಅವತಾರಿ ಪುರುಷರು, ಗಣ್ಯವೆತ್ತ ಮಹಾವ್ಯಕ್ತಿಗಳು, ಕವಿಗಣ ಸಮೂಹ ಇಂದ್ರನ ಸಭೆಗೆ ಸೇರಿದಂತೆ ದೇವಲೋಕದಿಂದ ಭೂಮಿಗಿಳಿದು ಬಂದಿರುವ ದಿವ್ಯವೂ ಭವ್ಯವೂ-ಆದ, ದೈವತ್ವದ ಕಲ್ಪನೆಗೂ ಮೀರಿದ, ಮಹಾಸಭೆ ನಮ್ಮ ಕಣ್ಣುಂದೆಯೇ ನಡೆಯುತ್ತಿದೆ ಎನ್ನುವಂತೆ ಸೃಷ್ಟಿಸಿರುವರು. ಆ ಶುಭ ದಿನವನ್ನು ಕವಿ-

"ಶ್ರೀಧೀನಂ, ದಿಟಮಿದು ಮಹಾದಿನಂ, ವಿರಾಡ್ ದಿನಂ;

.......................................................................

ಸಾಮ್ರಾಜ್ಯಮಂ ತ್ಯಜಿವ ಮೈತ್ರಿಯ ಮಹದ್ ದಿನಂ !
ಭಾರತ ಸ್ವಾತಂತ್ರ್ಯ ಪುಣ್ಯೋದಯದ ದಿನಂ!"

(ಕೃಷ್ಣಕುಮಾರ ಸಿ.ಪಿ. (ಸಂ); ೧೯೮೪, ಪುಟ-೧೦೫)

-ಎಂದು ಆ ಪುಣ್ಯದಿನಕ್ಕೆ ನಮನವನ್ನು ಅರ್ಪಿಸಿರುವರು, ಸರ್ವರಿಂದ ಸರ್ವರಿಗೂ ಸಂತೋಷವಾಗುವ, ಉದ್ಧಾರವಾಗುವ ಸ್ವಾತಂತ್ರ್ಯವನ್ನು

"ಸಾರಿಬಾ ಸರ್ವರ್ಗೆ ಸ್ವಾತಂತ್ರ್ಯಮಂ
ಸಾರಿಬಾ ಸರ್ವರ್ಗೆ ಸಾಮ್ಯತ್ವಮಂ
ಸರ್ವರ್ಗೆ ಸಾರಿಬಾ ಸೌಹಾರ್ದಮಂ
ಸರ್ವಲೋಕದ ಸರ್ವ ಸಂತೋಷಮಂ

ಸರ್ವರಿಂ ಸರ್ವರಾ ಉದ್ಧಾರಮಂ!"

(ಕೃಷ್ಣಕುಮಾರ. ಸಿ.ಪಿ. (ಸಂ); ೧೯೮೪, ಪುಟ-೧೦೫)

ಎಂದು ಮನದುಂಬಿ ಸ್ವಾಗತಿಸಿದ್ದಾರೆ. ಶತಶತಮಾನಗಳಿಂದ ನಡೆದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಡಿದ ಹುತಾತ್ಮರ ಪರಮಾರ್ಥ ಆಧ್ಯಾತ್ಮಿಕ ಚೇತನದ ಸಂಕೇತವೂ ಆಗಿದೆ. ಇದಕ್ಕೆ ಭವಿಷ್ಯದಲ್ಲಿ ಚ್ಯುತಿ ಬರಲಾರದೆಂದು-

"ನಂಬುಗೆಯಾಗಲಿ ತಾಯ್ಗೆ!
ಇನ್ನೆಂದೂ ಮುಂದೆಂದೂ
ಬರದಿರಲಿಂದೆಯ್ತುಂದೀ
ಸ್ವಾತಂತ್ರ್ಯಕ್ಕೆ ಕುಂದು"
(ಕೃಷ್ಣಕುಮಾರ ಸಿ.ಪಿ. (ಸಂ); ೧೯೮೪, ಪುಟ-೧೦೭)

-ಅಂದು ಬಂದ ಸ್ವಾತಂತ್ರ್ಯದ ಬಗ್ಗೆ ಭಾರತ-ಮಾತೆ ವಿಶ್ವಾಸ ಭರವಸೆ ಹೊಂದಲೆಂದಿರುವರು. ಆ ದಿನ ರಾತ್ರಿ ೧೧ ರಿಂದ ೧೨ ಗಂಟೆಯವರೆಗೆ ರೇಡಿಯೋದಲ್ಲಿ ದೆಹಲಿಯಿಂದ ಬಿತ್ತರಿಸುತ್ತಿದ್ದ ಉತ್ಸವದ ವ್ಯಾಖ್ಯಾನ-ವಿಶ್ಲೇಷಣೆಯ ವಾರ್ತೆಯನ್ನು ಕೇಳಿದ ಕವಿ ಅದಕ್ಕೆ ಪ್ರತಿಯಾಗಿ ತನ್ನ ಕವನವು 'ಆಸುರ್ತೆಗಾಶುವಾರ್ತೆ ನೆರವನಿತ್ತು ಪೇಳು'-ವೆನೆಂದು ಸ್ವಾತಂತ್ರ್ಯವನ್ನು ವೈಭವೀಕರಿಸಿ ವರ್ಣಿಸಿರುವರು.

"ಲೋಕ ಮಲಗಿದಂದು ನೀ ನಟ್ಟ ನಡೂ ರಾತ್ರಿ
ಎಚ್ಚರಾಂತೆ; ಅವಿಶ್ರಾಂತೆಯಾದೆ ಪುನರ್ ಯಾತ್ರಿ"
(ಕೃಷ್ಣಕುಮಾರ ಸಿ.ಪಿ. (ಸಂ); ೧೯೮೪, ಪುಟ-೧೦೭)

-ಲೋಕವು ಮಲಗಿ ನಿದ್ರಿಸುವಾಗ, ವಿಶ್ರಾಂತಿಯಲ್ಲಿರುವಾಗ ಎದ್ದಿರುವುದರಿಂದ ಅವಿಶ್ರಾಂತೆಯಾದೆ. ಇನ್ನು ನಿನಗೆ ವಿಶ್ರಾಂತಿಯೆಂಬುದೇ ಇಲ್ಲ; ಅಲ್ಲದೆ ನೀನು "ಸರ್ವಕಾಲ ಸರ್ವದೇಶ ಸರ್ವಮೋಕ್ಷ ಮಂತ್ರೇ ಅಸ್ವತಂತ್ರೆ ಸುಸ್ವತಂತ್ರೆಯಾದ ವಿಶ್ವತಂತ್ರೆ"(ಕೃಷ್ಣಕುಮಾರ ಸಿ.ಪಿ. (ಸಂ); ೧೯೮೪, ಪುಟ-೧೦೭)

ಸ್ವಾತಂತ್ರ್ಯವವು ಒಂದು ನಿರ್ಧಿಷ್ಟಕಾಲಕ್ಕೆ ಒಂದು ದೇಶಕ್ಕಷ್ಟೇ ಸೀಮಿತವಲ್ಲ. ಇಡೀ ವಿಶ್ವವನ್ನೇ ಮೋಕ್ಷಗೊಳಿಸುವ ಮಂತ್ರವೂ, ತಂತ್ರವೂ ಆಗಿದೆಯೆಂದೂ ಅದರ ವಿಶ್ವಾತ್ಮಕತೆಯನ್ನು ಸಾರಿದ್ದಾರೆ.

ಬೇಂದ್ರೆಯವರ 'ಅರಳು-ಮರಳು'-ಸಂಕಲನದ 'ನವಯುಗಾರಂಭ' ಕವನವು ಸ್ವಾತಂತ್ರ್ಯದಿನದ ಗೀತವಾಗಿದೆ. ಬೇಂದ್ರೆಯವರು ಸ್ವಾತಂತ್ರ್ಯೋದಯದಿಂದ ಉಂಟಾದ ಬದಲಾವಣೆಗಳನ್ನು ನಿಸರ್ಗದಲ್ಲುಂಟಾಗುವ ಚೇತನಕ್ಕೆ ಹೋಲಿಸಿರುವರು.

"ಸಂಕ್ರಾಂತಿಗೆ ಮರಬಿರಿಯೆ,
ಪಡುವಲ ಗಾಳಿಯು ಹರಿಯೆ,
ನೆನದೋರಲು ಮೈಮುರಿಯೆ

ಶಿಶಿರದ ಮಾಗಿ"

(ಬೇಂದ್ರೆ ದ.ರಾ. ೧೯೬೮, ಪುಟ-೨೨)

ಚಿಗುರು ಮೂಡಿ ಬೆಳೆದು ತುದಿಯಲ್ಲಿ ಮುಗುಳ್ನಗೆ ಸೂಸುವ ಹೂವಿನಂತೆ ಅರಳಿದೆ. ಮಾಘವು ಅಭಯವನ್ನು ಸಾರುತ್ತಿದೆ. ಈ ಅಮೃತ ಕಾಲದ ಸ್ಪರ್ಶದಿಂದ ಬೇವಿನಲ್ಲೂ ಸಿಹಿಮೂಡಿದೆ– ದಿನ ದಿನವೂ ಹೊಸತು.

ಸ್ವಾತಂತ್ರ್ಯೋದಯವನ್ನು, ಹಬ್ಬದ ಅದರಲ್ಲೂ ಹುಣ್ಣಿಮೆಯ ಆಗಮನದ ಸಾದೃಶ್ಯವನ್ನು ಕೊಟ್ಟಿರುವರು.

"ಭಾರತ ಹುಣ್ಣಿವೆ ಬಂತು
ನಾನು ಮುಂತು ನೀನು ಮುಂತು
ಕಡಲು ಮೂರು ಮೊರೆವವಿಂತು"

(ಬೇಂದ್ರೆ ದ.ರಾ. ೧೯೬೮, ಪುಟ-೨೨)

ಮೂರು ಕಡಲುಗಳೂ ಸಹಿತ 'ಹುಣ್ಣಿಮೆಗೆ' ತಾ ಮುಂದು ತಾ ಮುಂದೆಂದು ಭಾರತಮಾತೆಯಲ್ಲಿ ಮೊರೆಯಿಡುತ್ತಿರುವಂತೆ, ಗಾಳಿ ಬೀಸುತ್ತಿರುವ ಭವ್ಯ ಕಲ್ಪನೆಯನ್ನೇ ಕೊಟ್ಟಿರುವರು. ಸ್ವಾತಂತ್ರ್ಯವು ಹಳ್ಳಿ ಹಳ್ಳಿಗೂ ದೇಶಕ್ಕೂ ಕೊನೆಗೆ ವಿಶ್ವಕ್ಕೂ ವ್ಯಾಪಿಸಿದೆ. ಇನ್ನು ಮುಂದೆ ದೇಶ ಅವಿಭಾಜ್ಯವಾಗಿಯೇ ಇರುತ್ತದೆ. ಜಗತ್ತೇ ಏಕರಾಜ್ಯ ಎನ್ನುವಲ್ಲಿ ಸ್ವಾತಂತ್ರ್ಯವು, ದೇಶವನ್ನು, ವಿಶ್ವವನ್ನು ಬೆಸೆಯುತ್ತದೆ. 'ಕುಣಿಯಲಿ ಸ್ವಚ್ಛಂದದಿಂದ ನವಯುಗದಂದ'-ವೆಂದು ಸ್ವಾತಂತ್ರ್ಯೋದಯದಿಂದ ದೇಶದಲ್ಲಿ ನವಯುಗದ ಆರಂಭವಾಗಿರುವದನ್ನು ಈ ಕವನದಲ್ಲಿ ಬಣ್ಣಿಸಿರುವರು.

ವಿ. ಸೀತಾರಾಮಯ್ಯನವರು–'ನಾಡ ತಾಯಿ' ಕವನದಲ್ಲಿ ಸ್ವಾತಂತ್ರ್ಯೋದಯವನ್ನು ಹೀಗೆ ಬಣ್ಣಿಸಿರುವರು

"ಸ್ವರ್ಗ ಮರ್ತ್ಯ ಪಾತಾಳ
ಮೂರು ಲೋಕವು ಮೊಳಗಿಹುದು ತುಳುಕಿಹುದು
ಭಾರತೀಯ ಸ್ವಾತಂತ್ರ್ಯ
ಸಾಮ್ರಾಜ್ಯ ವೇಳುತಿರೆ ತಲೆಯೆತ್ತಿ ನಿಲ್ಲುತಿರೆ, ಗೆಲ್ಲುತಿರೆ"

(ಸೀತಾರಾಮಯ್ಯವಿ. ೧೯೯೦, ಪುಟ-೧೬೩)

ಭಾರತಕ್ಕೆ ಸ್ವಾತಂತ್ರ್ಯ ಕೊಡಲಾಗುವದೆಂದು ಘೋಷಿಸಿದ ಸಂದರ್ಭದಲ್ಲಿ, ದೇಶವು ಸ್ವತಂತ್ರ್ಯಗೊಳ್ಳುತ್ತಿರುವದನ್ನು ಸಮ್ರಾಜ್ಯವಾಗಿ ತಲೆಯೆತ್ತಿ ನಿಲ್ಲುತ್ತಿರುವದನ್ನು ವಿಶ್ವಕ್ಕೆ ಅಷ್ಟೇ ಅಲ್ಲ, ಸ್ವರ್ಗ-ಮರ್ತ್ಯ-ಪಾತಾಳ ಈ ಮೂರು ಲೋಕಗಳು ಸಾರಿ ಹೇಳುತ್ತಿವೆ.

"ಸಾವಿರ ಸಂವತ್ಸರ ಸಂ–
ಕೋಲೆಯ ಗೋಳಾಟದ ಬೀಳಾಟದ ಕಾಟದಲಿ
ಸ್ವಾಧೀನತೆ ಉರಿದೆದ್ದು
ಕೋಳದ ಬಿಗಿ ಸಡಲುತಿರೆ ಕದಲುತಿರೆ ಬಿಡುತಲಿರೆ."

(ಸೀತಾರಾಮಯ್ಯ. ವಿ. ೧೯೯೦, ಪುಟ–೧೬೩)

ಸಾವಿರಾರು ವರ್ಷಗಳಿಂದ ಪರಕೀಯರಿಂದಆಕ್ರಮಣ, ದಾಸ್ಯತ್ವವನ್ನು, ಬಂಧನವನ್ನು ಅನುಭವಿಸಿದ ಭಾರತವು ಈಗ ಸ್ವಾತಂತ್ರ್ಯ ಚಳುವಳಿಯ ಕಿಡಿ ಉರಿದೆದ್ದು ಭಾರತ ಮಾತೆಯ ಬಂಧನದ ಸಂಕೋಲೆಯು ಸಡಿಲಗೊಳ್ಳುತ್ತಿದೆ. ಹೀಗೆ ಆಗ ದೇಶ ಸ್ವತಂತ್ರ್ಯಗೊಳ್ಳಲು ಸಿದ್ಧಗೊಂಡಿರುವದನ್ನು ಈ ಕವನ ಪ್ರತಿಬಿಂಬಿಸಿದೆ. 'ಭಾರತ ವೈಜಯಂತಿ'ಯಲ್ಲಿಯೂ ಸ್ವಾತಂತ್ರ್ಯೋದಯದ ಶುಭ ಸಂದರ್ಭದಲ್ಲಿ, ಸ್ವಚ್ಛಂದವಾಗಿ ಹಾರಾಡುತ್ತಿರುವ ಬಾವುಟವನ್ನು–

"ಗರುಡನಂತೆ ಗರಿಗೆದರಿ ಹಾರಿತ್ತು, ಹಾರಿತ್ತು

ಭಾರತದೀ ವೈಜಯಂತಿ ರೋದೋಂತವಸೇರಿ"

(ಸೀತಾರಾಮಯ್ಯವಿ. ೧೯೯೦, ಪುಟ–೨೮೦)

–ಅಲ್ಲದೆ ಭಾನಯಾನಮಾಡಿ ಹಾರಿರುವದನ್ನು ಜಲ–ನೆಲ–ಗಿರಿ–ಕಾನನಗಳು ಕಂಡು ರೋಮಾಂಚನಗೊಂಡಿವೆವೆಂದು ವರ್ಣಿಸಿರುವರು 'ಜಾಗೃತ ಭಾರತ'–ದಲ್ಲಿ ಬ್ರಿಟೀಷರು ಭಾರತಕ್ಕೆ ಸ್ವಾತಂತ್ರ್ಯ ಕೊಟ್ಟಿರುವದನ್ನು ಹೇಳಿರುವರು. ಬ್ರಿಟೀಷರಿಗೆ ಒಂದಾನೊಂದು ಕಾಲಕ್ಕೆ–'ರವಿ ಕಣ್ಣು ಮುಚ್ಚಲಿಕೆ ಅಂಜಿದ್ದ ಸಾಮ್ರಾಜ್ಯದ'ವರೆಂಬ ಜಂಭವಿತ್ತು. ಭಾರತೀಯರ ಹೋರಾಟದ ಮುಂದೆ ಅವರ ಮದ, ಅಬ್ಬರ, ಉಡುಗಿ ಹೋಯಿತು. ಅಂತೆಯೇ ಕೊನೆಗೆ ಇದು– .

"ತನಗೆ ದಕ್ಕದ ಆಳ್ಕೆ ಇನ್ನು ನಿಮ್ಮತೆಂದಾಡಿ ನಾಡಿಗರ ಕೈಗದನು ಒಪ್ಪಿಸಿತ್ತು.
ಅಂದು ನಡುರಾತ್ರಿಯಲಿ ತನ್ನ ಬಾವುಟವನು ನೇರ ಕೆಳಗಿಳಿಸಿ
ಮೂಬಣ್ಣ ಬಾವುಟವ ಮೇಲಕೆತ್ತಿತು"

(ಸೀತಾರಾಮಯ್ಯ.ವಿ. ೧೯೯೦, ಪುಟ–೫೧೮)

–ಹೀಗೆ ಭಾರತವು ಬ್ರಿಟೀಷರಿಂದ ಸ್ವತಂತ್ರಗೊಂಡಿರುವದನ್ನು ದೇಶದ ಮೂವತ್ತು ಕೋಟಿ ಜನರು ಇದನ್ನು ಕಂಡು ಸಂತೋಷಪಟ್ಟರು. ವಿಶ್ವದ ಅನೇಕ ರಾಷ್ಟ್ರಗಳು ಇದನ್ನು ಮೆಚ್ಚಿಕೊಂಡು ಸ್ನೇಹಪರವಾದ ಸಲಹೆ, ಕೊಟ್ಟು, ಸಂದೇಶ ಕಳಿಸಿ ಹಾರೈಸಿದವು.

'ಹರಸು–ತಾಯಿ'ಯಲ್ಲಿ ಸ್ವಾತಂತ್ರೋದಯದ ಉತ್ಸವದ ಸಂಭ್ರಮವನ್ನು ಮನದುಂಬಿ ವರ್ಣಿಸಿರುವರು. ಇಡೀ ದೇಶದ ಜನತೆ ಪರತಂತ್ರ ಕೊನೆಗೊಂಡು ಸ್ವತಂತ್ರವಾದೆವು. ಇದೆ ನಮಗೆ ಸಕಲ ಸಿದ್ಧಿಗೆ ಸಾಧನವಾಯಿತೆಂದು ಹರುಷಗೊಂಡರು. ಈ ಉತ್ಸವಕ್ಕೆ ಜನ ಭೇದ–ಭಾವ ಮರೆತು ನೆರೆದಿರುವದನ್ನು ಕವಿ ಭಾರತ ಮಾತೆಗೆ ಹೀಗೆ ಹೇಳಿರುವರು.

"ಗಂಡು ಹೆಣ್ಣುಗಳೆನದೆ ಕುಲವೆನದೆ ಮತವೆನದೆ
ನಿನ್ನ ಮಕ್ಕಳು ನಿಂತ ನೆಲವ ನೋಡಾ!
ಸ್ವಾತಂತ್ರ್ಯಗೀತೆಗಳ ಹೆಮ್ಮೇಳ ಮಾರುಲಿಯೆ
ಭೂಮಿ ಆಕಾಶಗಳ ಪುಳಕ ನೋಡಾ!"
(ಸೀತಾರಾಮಯ್ಯ.ವಿ. ೧೯೯೦, ಪುಟ-೧೧೦)

ಜನರು ಸ್ವಾತಂತ್ರ್ಯೋತ್ಸವನ್ನು ಪಾಲ್ಗೊಂಡು ಎಲ್ಲರೂ ರಾಷ್ಟ್ರಗೀತೆ ಹಾಡುತ್ತಿರುವುದು, ಜನಪದ ಗೀತೆಗಳ ಮೇಳದಂತೆ ಕಂಡು ಬಂದಿದೆ. ಆಕಾಶ-ಭೂಮಿಗಳಿಗೂ ಆಶ್ಚರ್ಯವನ್ನುಂಟು ಮಾಡುವ ಈ ಉತ್ಸಾಹದ-ದೃಶ್ಯವನ್ನು ಕವಿ ಭಾರತ ಮಾತೆಗೆ ಮಾಡುವ ಉತ್ಸಾಹದ-ದೃಶ್ಯವನ್ನು ಕವಿ ಭಾರತ ಮಾತೆಗೆ "ಕಣ್ತುಂಬ ನೋಡೆಮ್ಮ ಹರಸು ತಾಯಿ ಭಾರತ ಭಾಗ್ಯೇಶ್ವರಿ ಹರಸು ತಾಯಿ"(ಸೀತಾರಾಮಯ್ಯವಿ. ೧೯೯೦, ಪುಟ-೧೧೦)ಎಂದು ಪ್ರಾರ್ಥಿಸಿಕೊಂಡಿರುವರು.

ಪು.ತಿ.ನರಸಿಂಹಾಚಾರ್ಯರ 'ಜಯ ನವ ಭಾರತಕ್ಕೆ' ಕವನವು ಸ್ವಾತಂತ್ರ್ಯೋದಯ ಸಂದರ್ಭವನ್ನು ಕುರಿತ ಸಾಂದರ್ಭಿಕ ಕವನ. ಇದರಲ್ಲಿ ಪು.ತಿ.ನ. ಅವರು ದೇಶವು ರಾಜ ಪ್ರಭುತ್ವದಿಂದ ಪ್ರಜಾಪ್ರಭುತ್ವಕ್ಕೆ ಪರಿವರ್ತನೆಯಾಗಿರುವದನ್ನು-

"ಕಿರೀಟ ಪತಿಗಳ ರಾಜ್ಯವಿದಲ್ಲ
ನಮ್ಮೀ ಭಾರತ ದೇಶ
ಈ ಮೊದಲಿನ್ನೀ ರಾಜ್ಯದಿ ನಡೆವುದು
ನಾಡ ಮಕ್ಕಳಾದೇಶ"
(ನರಸಿಂಹಾಚಾರ್ಯ ಪು.ತಿ. ೧೯೬೫, ಪುಟ-೨೮೨)

ಪ್ರಜಾ ಪ್ರಭುತ್ವದ ಮಹತ್ವದ ತತ್ತ್ವವನ್ನು ಸಾರಿ ಹೇಳಲು ಸ್ವಾತಂತ್ರ್ಯೋದಯದ ದಿನ 'ಬಿರುದಿನ ಬಾವುಟವೇರಿತು ದಿಲ್ಲಿಯ ತುದಿಗೆ' ಈ ದಿನ ಭಾರತದ ಜನ-ಜಲ-ಬಾಳು-ಎಲ್ಲವೂ ಹೊಸತು. ನಾವು ಜಗಳಗಂಟರೂ ಅಲ್ಲ, ಅಬಲರೂ ಅಲ್ಲ. ಬ್ರಿಟೀಷರೊಂದಿಗಿನ ಸ್ವಾತಂತ್ರ್ಯ ಚಳುವಳಿಯ ಗೆಲವನ್ನು 'ಬಾವುಟ ನಾಡುವ ಜರುಬುದಲ್ಲಿ ಗೆಲುವಾಯ್ತು' ಎಂದಿರುವರು.

ಎಸ್.ವ್ಹಿ. ಪರಮೇಶ್ವರ ಭಟ್ಟರ 'ಅಗಸ್ಟ-೧೫' ಮತ್ತು 'ಧ್ವಜವಂದನೆ' ಕವನಗಳು ಸ್ವಾತಂತ್ರ್ಯೋದಯವನ್ನು ಕುರಿತಿವೆ. 'ಅಗಸ್ಟ್-೧೫'-ರಲ್ಲಿ 'ಶ್ರಾವಣ ಸಂಧ್ಯ ಸುಖದ ಸಮಿರಣ'-ಕ್ಕಾಗಿ ಜನಗಣಮನ ರಾಷ್ಟ್ರಗೀತೆಯು ದೇಶಾದ್ಯಂತ ವ್ಯಾಪಿಸಿ ಹೊಸ ಹರುಷ ತರುತ್ತಿದೆ. ರಾಷ್ಟ್ರಪತಿಯ, ದೇಶ-ವಿದೇಶದವರ ಶುಭಸಂದೇಶವನ್ನು ಕೇಳಿ-"ಹಿರಿ ಹಿರಿನೊಳೀ ಜನರು ಶುಭ ಸಂಭ್ರಮದಿಂದೆಸೆಯುವರು." ಅಂದು ದೇಶದ ಜನತೆಯ ಮನೆ-ಮನಗಳಲ್ಲೂ ಹರ್ಷೋತ್ಸಾಹಗಳು ತುಂಬಿವೆ.

"ಭಾರತ ವರ್ಷದ ಸ್ವಾತಂತ್ರ್ಯೋತ್ಸವ-
ದತ್ಯುತ್ಸಾಹದ ದಿನ್ಯಾಮೋದವ
ಸಾರುವ ಶ್ರವಣ ಸುಖಾವಹ ಶುಭರವ
ಮನೆ ಮನೆಯಲಿ ತಾ ಮೊಳಗುತಿದೆ
ಮನ ಮನವನು ಅಹ ರಮಿಸುತಿದೆ."

(ಪರಮೇಶ್ವರಭಟ್‌ಎಸ್.ವಿ., ೧೯೬೫, ಪುಟ-೧೫)

ದೇಶದ ವೀರ ಸುಪುತ್ರರಾದ ನವಯುವಕ-ಯುವತಿಯರು ದೇಶದ ನಾಳಿನ ವಿಷ್ಣು-ಲಕ್ಷ್ಮೀಯರು (ಒಡೆಯರು). ಇವರು ಅತ್ಯಂತ ಸಂತೋಷ-ಉತ್ಸಾಹ- ಹುರುಪಿನಿಂದ ಭಾರತಮಾತೆಗೆ ಜಯಕಾರ ಹಾಕುತ್ತಾ ನಲಿಯುತ್ತಿರುವರು. ಹೀಗೆ ಈ ಕವನದಲ್ಲಿ ಮನೆಯಲ್ಲಿ ಆಚರಿಸುವ ಹಬ್ಬದ ಪ್ರತಿಮೆಯನ್ನೇ ಕೊಟ್ಟಿರುವರು. 'ಧ್ವಜ ವಂದನೆ'-ಲ್ಲಿ ಅಂದು ಹಾರಾಡುತ್ತಿರುವ ಧ್ವಜವನ್ನು ರೂಪಕ-ಪ್ರತಿಮೆ-ಪ್ರತೀಕಗಳ ಮೂಲಕ ವರ್ಣಿಸಿರುವರು. ಆತ್ಮಗೌರವದಿಂದ ಅಮರತ್ವವನ್ನು ಪಡೆದು ಮರೆಯುತ್ತಿರುವ, ಭೂಮಿ ಆಕಾಶಗಳನ್ನೇ ಬೆಳಗುತ್ತಿರುವ ಈ ಧ್ವಜವು-

"ಭಾರತ ತಪಸ್ವಿನಿಯ ಶಾಂತಿ ಸಂದೇಶಮಂ
ಮನುಜಲೋಕಕೆ ಸಾರುತಿರೆಯಿರೆ ನಿರಂತರಂ
ಸತ್ಯ ಲೋಕದ ಸಾಕ್ಷಿಗೀತ್ರಿವರ್ಣ ಧ್ವಜಕೆ"

(ಪರಮೇಶ್ವರಭಟ್‌ಎಸ್.ವಿ., ೧೯೬೫, ಪುಟ-೩೯)

ಪ್ರತಿ ನಿತ್ಯವೂ ತನ್ನ ನಮನವನ್ನು ಅರ್ಪಿಸುವದಾಗಿ ಕವಿ ಹೇಳಿರುವಲ್ಲಿ ಅಪ್ಪಟ್ಟ ರಾಷ್ಟ್ರಾಭಿಮಾನ-ರಾಷ್ಟ್ರೀಯತೆ ವ್ಯಕ್ತವಾಗಿದೆ. ಪ್ರತಿಯೊಬ್ಬ ಪ್ರಜೆಯೂ ರಾಷ್ಟ್ರ ಧ್ವಜ-ರಾಷ್ಟ್ರಗೀತೆಗಳಿಗೆ ಗೌರವಿಸಬೇಕಾಗಿರುವದು ಮೂಲಭೂತ ಕರ್ತವ್ಯಗಳಲ್ಲಿ ಒಂದಾದರೂ, ಇದು ಅದಕ್ಕಿಂತಲೂ ಮಿಗಿಲಾದ ಅಪ್ಪಟವಾದ ರಾಷ್ಟ್ರೀಯತೆಯಾಗಿದೆ.

ಇವರ 'ಜನೇವರಿ-೨೬'-ಕವನವು ೧೯೫೦ ರ ಆ ದಿನ ಭಾರತವು ಗಣರಾಜ್ಯವಾದ ಸಂದರ್ಭವನ್ನು ಕುರಿತಿದೆ. ಸ್ವಾತಂತ್ರ್ಯೋದಯದ ಹರ್ಷದುತ್ಸವದೀ ದಿನ ನಕ್ಕು ನಲಿಯುತಲುಕ್ಕಿ ಮೆರೆವುದು ಭರತ ದೇಶದ ಜನಮನ"(ಪರಮೇಶ್ವರಭಟ್‌ಎಸ್.ವಿ., ೧೯೬೫, ಪುಟ-೪೦)ಎಂದು ವರ್ಣಿಸಿರುವರು. ಸ್ವಾತಂತ್ರ್ಯದಲ್ಲಿ ಇಟ್ಟ-ನಿಷ್ಠೆ- ನೆಚ್ಚನ್ನು ಇದರಲ್ಲಿಯೂ-'ರಾಜ್ಯಾಂಗದೊಳು ನಿಷ್ಠೆಯ ತೋರಿ ಮೆರೆವೆವು, ನೆಚ್ಚನು'-ಎಂದು ಗಣರಾಜ್ಯದ ಬಗೆಗೆ ಅಭಿಮಾನ-ವಿಶ್ವಾಸ-ಹೆಮ್ಮೆ ವ್ಯಕ್ತಪಡಿಸಿರುವರು. ಸ್ವಾತಂತ್ರ್ಯ ತಂದುಕೊಟ್ಟ ಹಿರಿಯರನ್ನು ಸ್ಮರಿಸಿ ಅವರು ತೋರಿಸಿದ ಮಾರ್ಗದಲ್ಲಿ ನಡೆಯುವೆವು. ದೇಶದ ಸರ್ವಜನದ ಹಿತಕ್ಕಾಗಿ ನಮ್ಮ ಬದುಕನ್ನು ಮುಡುಪಾಗಿಟ್ಟು, ದೇಶರಕ್ಷಣೆ ಆದ್ಯತೆ -ಯನ್ನು ಕೊಡುವುದಾಗಿ-"ಇದು ರಾಷ್ಟ್ರಧ್ವಜದ ಅಡಿಯೊಳು ನಿಂತು ಪೂಣ್ಕೆಯ ತೊಡುವೆವು"-ಎಂಬ ಪ್ರಜಾವಿಧಿ ಸ್ವೀಕರಿಸುವೆವೆಂದಿರುವರು.

ಸಿದ್ದಯ್ಯ ಪುರಾಣಿಕರು 'ಮಾನಸ ಸರೋವರ'-ಸಂಕಲನದ 'ಸ್ವಾತಂತ್ರ್ಯದ ಸಪ್ತವರ್ಷ' ಕವನದಲ್ಲಿ ಏಳನೇ ಸ್ವಾತಂತ್ರ್ಯೋತ್ಸವದ ಸಂದರ್ಭದಲ್ಲಿ ಹಲವಾರು ಸಮಸ್ಯೆಗಳ ಮಧ್ಯವೂ ದೇಶವು ಸಾಧಿಸಿದ ಸಾಧನೆಗಳ ಅವಲೋಕನವಿದೆ. ಭಾರತದ ಜನತೆಯಲ್ಲಿ ಉತ್ಸಾಹವಿದೆ; ದೇಶ ಬಲಶಾಲಿಯಾಗಿದೆ. "ನಿನ್ನ ಗೆಲುವಿನ ಸದ್ದು ಅಡಗದಿರಲೆಂದಿಗೂ" ಎಂದು ಹಾರೈಸಿರುವರು. ಇದೇ ರೀತಿ ಈ ಸಂಕಲನದ ಇನ್ನೊಂದು ಕವನ' ರಾಷ್ಟ್ರ ರಾಜೇಶ್ವರಿ' ಇದರಲ್ಲಿ ದಸರೆಯೆಂದು ಕನ್ನಡ ರಾಜೇಶ್ವರಿಯನ್ನು ಆರಾಧಿಸುವುದರ ಜೊತೆಗೆ ಭಾರತ ಮಾತೆಯ ಆರಾಧನೆಯನ್ನು ಮಾಡಿದ್ದಾರೆ. ಭಾರತದ ಪ್ರಜೆಗಳು ಇಂದು ಮಣ್ಣು ಬೊಂಬೆಗಳಲ್ಲ; ವಜ್ರದೇಹಿಗಳು ಭಾರತವು ಸ್ವರ್ಗವೆನಿಸಿದೆ ಕವಿಗೆ.

ಕೆ.ಎಸ್. ನರಸಿಂಹಸ್ವಾಮಿಯವರ 'ಡೊಮಿನಿಯನ್ ಜನನ'-ಸ್ವಾತಂತ್ರ್ಯೋದಯವನ್ನು ಬಣ್ಣಿಸಿರುವ ಕವನ. ಆರಂಭದಲ್ಲಿ ಬ್ರಿಟನ್ ಬಗೆಗೆ ಹೇಳಿರುವರು. ಇದುವರೆಗೆ ಭಾರತವನ್ನು ಆಳಿದ ನಿನಗೆ ಇನ್ನು ಸಮುದ್ರವೇ ಗತಿ ಎನ್ನುವಂತೆ-ಆಳೌ ಬ್ರಿಟಾನಿಯ, ಆಳು ತೆರೆಗಳನು'-ಎಂದು ವ್ಯಂಗ್ಯವಾಡಿದ್ದಾರೆ.

ಭಾರತದ ಸಮುದ್ರ ತೀರದಲ್ಲಿ ಅಜ್ಞಾನ- ಅಂಧಕಾರ-ಅಶ್ರೆದ್ದೆಯ ಮಬ್ಬು ಕವಿದಿತ್ತು. ಇದು ಬ್ರಿಟನ್‌ಳಿಗೆ ಅನುಕೂಲವಾಯಿತು. ಆಗ ಸಮುದ್ರ ಮಾರ್ಗವನ್ನು ಸೃಷ್ಟಿಸಿ-"ನಿನ್ನವರು ಪಾಲಕಿ ಹೊತ್ತು ತಂದಿಳಿಸಿದರು ನಿನ್ನ ಅಧಿಕಾರ ದಂಡವನು"-ಎಂದು ಬ್ರಿಟೀಷರು ಭಾರತವನ್ನು ವಸಾಹತುವನ್ನಾಗಿ ವಶಪಡಿಸಿಕೊಂಡಿರುವದನ್ನು ಹೇಳಿದ್ದಾರೆ. ಭಾರತವು ಸ್ವಾತಂತ್ರ್ಯಕ್ಕಾಗಿ ಶಸ್ತ್ರಾಸ್ತ್ರ ಸಜ್ಜಿತರಾದ ಬ್ರಿಟೀಷರೊಂದಿಗೆ ಬರಿಗೈಯಲ್ಲಿ ಹೋರಾಡಲಾಯಿತು. ಬ್ರಿಟೀಷರು ಚಳುವಳಿಯನ್ನು ಹತ್ತಿಕ್ಕಲು ಎಷ್ಟೇ ಹಳೆಯ ಕಾಲದ ರಾಜ್ಯ ವ್ಯಾಮೋಹವನ್ನು ಧ್ವಂಸ ಮಾಡಿದರು ನಿನ್ನವರು"-ಎಂದು ಆ ಪ್ರಯತ್ನಿಸಿದರೂ ಭಾರತದ ಚಳುವಳಿಯ ಶಕ್ತಿಯ ಮುಂದೆ ವಿಫಲವಾಯಿತು. ಯುದ್ಧದಿಂದ ತಲ್ಲಣಿಸಿದ ಬ್ರಿಟನ್ ಭಾರತಕ್ಕೆ ಸ್ವಾತಂತ್ರ್ಯ ಕೊಟ್ಟಿತು. ಇದನ್ನು ಬ್ರಿಟನ್‌ಳಿಗೆ-"ಅರ್ಧ ನಿಮಿಷದಲಿ ನಿನ್ನ ಆ ಮಧ್ಯರಾತ್ರಿ ಬ್ರಿಟಿಶ್ ಅಧಿಕಾರಿಗಳು ಭಾರತಕ್ಕೆ ಅಧಿಕಾರ ಹಸ್ತಾಂತರ ಮಾಡಿರುವದನ್ನು ಆ ಸಮಯದಲ್ಲಿ ಭಾರತೀಯರು ಅಧಿಕಾರ ಪಡೆದು ಸ್ವತಂತ್ರ ಪ್ರಜಾಪ್ರಭುತ್ವ ರಾಷ್ಟ್ರವಾಗಿ ತಲೆಯೆತ್ತಿರುವದನ್ನು-"ಏಷ್ಯದ ಮಹಾವೀರ ನೆಹರು ಅಧಿಕಾರವನು ಹಿಡಿದರದೋ! ಮುಡಿಹುದು ಇಂಡಿಯನ್ ಡೊಮಿನಿಯನ್"(ನರಸಿಂಹಸ್ವಾಮಿ ಕೆ.ಎಸ್. ೧೯೮೬, ಪುಟ-೧೯೦) ಎಂದು ಹರ್ಷೋದ್ಗಾರವೆತ್ತಿದ್ದಾರೆ ಈ ದಿನ ಭಾರತವು ಏಷ್ಯಾಖಂಡದಲ್ಲಿ ಸ್ವಾತಂತ್ರ್ಯ ತಾರೆಯಾಗಿ ಮೂಡಿತು. ಇನ್ನುಬ್ರಿಟೀನ್‌ಗೆ ಭಾರತದ ಮೇಲೆ ಯಾವುದೇ ಅಧಿಕಾರವಿಲ್ಲ. ಇನ್ನು ಭಾರತಕ್ಕೆ ಚಕ್ರವರ್ತಿನಿಯಲ್ಲ, ಬರಿ-'ಗ್ರೇಟ್ ಬ್ರಿಟನ್', ಅಲ್ಲದೆ ಕಾಮನ್‌ವೆಲ್ತ ಕೂಟಕಟ್ಟಿ ಇಂಡಿಯಾವನ್ನು ಗೆಳತಿಯನ್ನಾಗಿ ಮಾಡಿಕೊಂಡಿತು. ಇದೇ ದಿನ

ದೇಶವಿಭಜನೆಯಾಗಿ ಪಾಕಿಸ್ತಾನ್ ಉದಯವಾಯಿತು. ಇದಕ್ಕೆ ಬ್ರಿಟೀಷರೇ ಕಾರಣರು ಆದರೆ ನಾವೇ ಇದನ್ನು ಬಯಸಿದ್ದೇವೆಂದು ಆರೋಪಿಸುವುದಕ್ಕೆ ಕವಿ ಕೋಪದಿಂದ–

"..............................ನಿಮ್ಮವರಿದನು
ಬಯಸಿದರು ಎಂದು ನುಡಿವೆಯ ಓ ಬ್ರಿಟಾನಿಯಾ
ಬಯಸಿದೆವು 'ನಿನ್ನ ಅಧಿಕಾರ ಮುಗಿಯಲಿ' ಎಂದು;
ಒಳ್ಳುಡಿಯ ಬಳಸಿ ಹಡಗನು ಹತ್ತು.................."
(ನರಸಿಂಹಸ್ವಾಮಿ ಕೆ.ಎಸ್. ೧೯೮೬, ಪುಟ–೧೯೦)

–ಎಂದು, ಸುಮ್ಮನೆ ಒಳ್ಳೆಯ ಮಾತಿನಿಂದ ದೇಶ ಬಿಟ್ಟು ಹೊರಡಲು ಹಡಗನು ಹತ್ತು'–ಎಂಬ ಬೆದರಿಕೆಯ ಅರ್ಥದಲ್ಲಿ ಹೇಳಿರುವರು. ಮುಂದೊಂದು ದಿನ ಪಾಕಿಸ್ತಾನವು ಭಾರತದಲ್ಲಿ ವಿಲೀನಗೊಳ್ಳುವ ಕಷ್ಟ ಸಾಧ್ಯವಾದ ಆಶಾಭಾವನೆಯನ್ನು ಇಟ್ಟುಕೊಂಡ ಕವಿ–

"ಪಾಲಾದ ಭೂಮಿ 'ಕೂಡುವ ಗಳಿಗೆ ಬಂದೀತೆ?
ಎನುವ ತವಕದಲಿ ಕಾದಿಹುದು, ಬರುವುದು ನಾಳೆ;
ಕೂಡುವುದು ನಾಡು, ನದಿ ಬೆಟ್ಟ ಏತರ ಮೇರೆ?"
(ನರಸಿಂಹಸ್ವಾಮಿ ಕೆ.ಎಸ್. ೧೯೮೬, ಪುಟ–೧೯೦)

ಈ ರೀತಿ ಅಭಿಪ್ರಾಯ ವ್ಯಕ್ತಪಡಿಸಿರುವರು. ಬ್ರಿಟನ್‌ದಿಂದ ಇಂಡಿಯಾವು ಶೋಷಣೆಯ ಕಹಿಯನ್ನು ಉಂಡರೂ ಸಂಪ್ರದಾಯದಂತೆ ಇಂಡಿಯಾಳು ಬ್ರಿಟನ್ನಳನ್ನು ಆದರಿಸಿ, ವೀಳ್ಯವನ್ನಿತ್ತು ಬೀಳ್ಕೊಟ್ಟು ರಾಜ್ಯಸೂತ್ರಗಳನ್ನು ವಹಿಸಿಕೊಂಡಳೆಂದು ಭಾವಿಸಿ ಬಹಳ ಮನೋಹರವಾಗಿ ವರ್ಣಿಸಿರುವರು.

"ರವಿರಥದ ಮೇಲೆ ಬರುತಿಹಳು, ಧನ್ಯ ಅಶೋಕ
ಕಾಣಿಸಿದ ಚಕ್ರ ನೆಲಸಿಹುದು ಬಾವುಟದಲ್ಲಿ
ಹೂಮಳೆಯ ಸುರಿದರು ಹುತಾತ್ಮರಾಗಸದಲಿ
ಮಿಂದಿಹುದು ರಾಷ್ಟ್ರಗಾಂಧೀಜಿ ತಂದ ಗಂಗೆಯಲಿ;"
(ನರಸಿಂಹಸ್ವಾಮಿ ಕೆ.ಎಸ್. ೧೯೮೬, ಪುಟ–೧೯೧)

–ಈ ದಿವ್ಯ ಸೊಬಗನ್ನು ನೋಡಿದ ಕಲಿಯುಗವು ಆನಂದ ಬಾಷ್ಪಗಳನ್ನುದುರಿಸಿತು. ಕವಿ ಕೊನೆಗೆ ಅವರದೇ ಭಾಷೆಯಲ್ಲಿ 'ಫೇರ್‌ವೆಲ್ ಬ್ರಿಟಾನಿಯ, ನೀನಿಂದು ಗ್ರೇಟ್ ಬ್ರಿಟನ್..... ವೆಲ್‌ಕಮ್ ಯುವರ್ ಎಕ್ಸಲೆನ್ಸಿ ಲಾರ್ಡಮೌಂಟ್ ಬ್ಯಾಟನ್,"–ಎಂದು ವಿದಾಯ ಹೇಳಲು ಮರೆತಿಲ್ಲ. ಉತ್ಸವದ ಕೊನೆಗೆ' ಜಯಗಾಂಧೀ! ಜಯ ಭಾರತಾಂಬೆ ಜಯ ಗಾಂಧಿ, ಜಯ ಹಿಂದ್!"–ಜಯಕಾರ ಘೋಷಣೆಗಳು ಮೊಳಗಿದವು. ಹೀಗೆ ಈ ಕವನದಲ್ಲಿ ಕೆ.ಎಸ್. ನರಸಿಂಹಸ್ವಾಮಿಯವರು

ಮಹೋನ್ನತವಾದ, ಭಾವನಾತ್ಮಕವಾದ ಕಲ್ಪನೆಯನ್ನು ಕಟ್ಟಿಕೊಡುವದರ ಮೂಲಕ ಅಂದಿನ ಉತ್ಸವವನ್ನು ವರ್ಣಿಸಿರುವರು.

'ಪ್ರಥಮ ರಾಜನಿಗೆ'-ಕವನದಲ್ಲಿ ಸ್ವತಂತ್ರಗೊಂಡು ಪ್ರಜಾಪ್ರಭುತ್ವವಾದ ಹೊಸತರಲ್ಲಿ ದೇಶವನ್ನು 'ಪ್ರಥಮ ರಾಜನಿಗೆ'-ಎಂದು ಸಂಭೋಧಿಸಿ ಹೇಳಿರುವರು. ಜ್ಞಾನ ಮತ್ತು ಅದರ ವೈರುದ್ಯದ ಸಂಕೇತಗಳಾದ-'ದೀಪ-ಗಾಳಿ'-ಇವೆರಡೂ ನಿನ್ನವೆ ಆದರೂ 'ದೀಪ ಆರದಿರಲಿ' ಇವೆರಡೂ ನಿನ್ನವೆ ಆದರೂ-'ಬದುಕು ಮುಳಗದಿರಲಿ'-ಎಂದೂ ಹಾರೈಸಿರುವರು. ಕಷ್ಟಸುಖಗಳ ಸಂಕೇತಗಳಾದ-'ಬೆಟ್ಟವೂ-ಬಯಲೂ' ಇವೆರಡೂ ನಿನ್ನವೇ ಆದರೂ-'ಏಕರೀತಿ ಇರಲಿ' ಎಂದು ಆಶಿಸಿದ ಕವಿ ಇವನಿಗೆ ಅಲಂಕಾರ ಮತ್ತು ನಮಸ್ಕಾರಗಳು ಹೀಗಿವೆ:

'ಆಗೊಂದು ಸಿಡಿಲು, ಈಗೊಂದು ಮುಗಿಲು
-ನಿನಗೆ ಅಲಂಕಾರ
ಅಲ್ಲೊಂದು ಹಕ್ಕಿ, ಇಲ್ಲೊಂದು ಮುಗುಳು
-ನಿನಗೆ ನಮಸ್ಕಾರ"
(ನರಸಿಂಹಸ್ವಾಮಿ ಕೆ.ಎಸ್. ೧೯೮೬, ಪುಟ-೨೦೧)

ಪ್ರಕೃತಿದತ್ತವಾದ ಸಿಡಿಲು, ಮುಗಿಲುಗಳೇ ಅಲಂಕಾರವಾದರೆ, ವಸಂತಾಗಮನದಿಂದ ಚಿಗಿತ ಗಿಡದ ಮುಗುಳು, ಅದರ ಸವಿಸವಿದು ಇಂಪಾಗಿ ಕೂಗುವ ಹಕ್ಕಿ ನಮಸ್ಕಾರ ಹೇಳುತ್ತವೆ.

ಹಿಂದಿನ ಹೋರಾಟದ ರಣದುಂಭಿಯ ನಿನಾದವೂ, ಇಂದಿನ ವೀಣೆಯ ಸುಮಧುರ ಸಂಗೀತವೂ ನಿನ್ನ ಪ್ರತಿಧ್ವನಿಯಾಗಿದೆ. ಹಿಂದಿನ ಬೃಹತ್ ಮತ್ತು ಇಂದಿನ ಮಹತ್ ಸಾಹಿತ್ಯ ಪರಂಪರೆಗಳಾದ 'ಆ ಮಹಾಕಾವ್ಯ ಈ ಭಾವಗೀತೆ'-ಇವು ನಿನ್ನ ಸಾಹಿತ್ಯದ (ಪದ) ಧ್ವನಿಗಳಾಗಿವೆ. ಅವನ ಕೀರ್ತಿ ಮತ್ತು ಮೂರ್ತಿಗಳನ್ನು ಹೀಗೆ ಹೇಳಿದ್ದಾರೆ:

"ಅಲ್ಲೊಂದು ಯುದ್ಧ, ಇಲ್ಲೊಬ್ಬ ಬುದ್ಧ,
ಕೀರ್ತಿ ಇವು ನಿನಗೆ,
ಆ ಮಧ್ಯ ರಾತ್ರಿ, ಈ ಉದಯ ಸೂರ್ಯ
-ಮೂರ್ತಿ ಇವು ನಿನಗೆ"
(ನರಸಿಂಹಸ್ವಾಮಿ ಕೆ.ಎಸ್. ೧೯೮೬, ಪುಟ-೨೦೧)

ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟ, ಅಹಿಂಸೆ, ಶಾಂತಿಯ ಸಂದೇಶ ಸಾರಿದ ಬುದ್ಧನ ಪ್ರತಿರೂಪವಾದ ಗಾಂಧಿ ಇವು ಕೀರ್ತಿಗಳಾದರೆ, ೧೯೪೭ ಅಗಸ್ಟ ೧೪ ರ ಮಧ್ಯರಾತ್ರಿ ಬಂದ ಸ್ವಾತಂತ್ರ್ಯ ಮತ್ತು ಗಣರಾಜ್ಯೋದಯಗಳು ಪ್ರತಿವರ್ಷ ಆಚರಿಸುವ ಉತ್ಸವ ಮೂರ್ತಿಗಳು. ಒಂದು ಕಡೆ ಅತೃಪ್ತಿಯ-'ಕ್ಷಾಮ', ಇನ್ನೊಂದು ಕಡೆ ಸಂತೃಪ್ತಿಯ 'ತುಷ್ಟಿ' ಈ ಅಸಮತೋಲನಗಳನ್ನು ನೀನೇ

ಸೃಷ್ಟಿಸಿದ್ದರೂ ಕಡೆಗೆ ನಿನ್ನ 'ತಾಯ್' ತನದ ಪ್ರೀತಿ-ವಾತ್ಸಲ್ಯದ ದೃಷ್ಟಿ ಒಂದನ್ನಾಗಿ ಮಾಡಿರುವ ಭಾವೈಕ್ಯತೆ, ಸಮಗ್ರತೆಯನ್ನು ವರ್ಣಿಸಿರುವರು.

ಇಲ್ಲಿ ಗಾಂಧೀಜಿ ವ್ಯಕ್ತಿ ಚಿತ್ರಣವನ್ನು ಕಾಣಬಹುದಾಗಿದೆ. 'ಈಸೃಷ್ಟಿಗೆಲ್ಲಾ ಕರ್ತೃವಾಗಿ, ಅಧ್ಯಕ್ಷನಾಗಲೊಲ್ಲೆ!'ನೆಂಬುದು ಗಾಂಧೀಜಿ ನೇತೃತ್ವದಲ್ಲಿ ದೇಶ ಸ್ವಾತಂತ್ರ್ಯಗೊಂಡುದು ಮತ್ತು ಸ್ವತಂತ್ರ ಭಾರತದ ಯಾವುದೇ ಅಧಿಕಾರವನ್ನು ಗಾಂಧೀಜಿಯವರು ವಹಿಸಿಕೊಳ್ಳಲು ನಿರಾಕರಿಸಿರುದನ್ನು ಸೂಚಿಸುತ್ತದೆ. 'ಈ ಸೃಷ್ಟಿಗೆಲ್ಲ ಅಧಿಕಾರಿಯಾಗಿ ಕಣ್ಣಿಲ್ಲವಾದೆ, ಅಲ್ಲೆ!' ಎಂಬುದು ಇಂದು ಗಾಂಧೀಜಿ ಇಲ್ಲದಿದ್ದರೂ ಇಂದು ಆತನ ಪ್ರಭಾವವನ್ನು ಸೂಚಿಸುತ್ತದೆ. ದೇಶದ ಪ್ರಜೆಗಳಿಗೆ ಪ್ರಜಾಪ್ರಭುತ್ವತಂದು ಕೊಟ್ಟಿರುವದನ್ನು ವರ್ಣಿಸಿರುವರು.

"ಪ್ರಜೆಗಳನ್ನು ಕರೆದು ಇದೊ ರಾಜ್ಯವಿಹುದು;
ಆಳಬಹುದೆಂದು ನುಡಿದೆ.
ಅರಮನೆಯ ತೊರೆದು ಬಾಗಿಲನು ತೆರೆದು
ತಿರುಗಿ ನೋಡದಯೆ ನಡೆದೆ"

(ನರಸಿಂಹಸ್ವಾಮಿ ಕೆ.ಎಸ್. ೧೯೮೬, ಪುಟ-೨೦೨)

ರಾಜಪ್ರಭುತ್ವವು ಪ್ರಭುತ್ವವಾಗಿ ಮಾರ್ಪಾಡುದುದನ್ನು ಬಹಳ ಅರ್ಥಗರ್ಭಿತವಾಗಿ ಹೇಳಲಾಗಿದೆ. ರಾಜ ಪ್ರಭುತ್ವವು ಪ್ರಜೆಗಳಿಗೆ ರಾಜ್ಯವನ್ನು ಒಪ್ಪಿಸಿ, ಬುದ್ಧನಂತೆ ತ್ಯಾಗಿಯಾಗಿ, ಅರಮನೆಯ ಬಾಗಿಲನ್ನು ಪ್ರಜೆಗಳಿಗಾಗಿ ತೆರೆದು, ತಾನು ತೊರೆದು ಹೋದನು. ಅಲ್ಲದೆ ಇದು ಗಾಂಧೀಜಿಯವರು ದೇಶಕ್ಕೆ ಸ್ವಾತಂತ್ರ್ಯತಂದು ಕೊಟ್ಟಿರುವದನ್ನೂ ಮತ್ತು ಅವರು ತ್ಯಾಗದ ಪ್ರತೀಕವೂ ಆಗಿದೆ. ಸರ್ವಶಕ್ತಿ-ಸರ್ವತ್ಯಾಗದ ಮೂರ್ತಿಯಾದ ಗಾಂಧಿ, ಏಸು ಕ್ರಿಸ್ತನಂತೆ, ಮಹಾವ್ಯಕ್ತಿಗಳಂತೆ, ಮುಳ್ಳಿನ ಕಿರೀಟವಾಗಲಿ, ಯಾವುದನ್ನು ಧರಿಸಿದ್ದರೂ ಮಹಾತ್ಮನಾಗಿರುವನು. ಪ್ರಜಾಪ್ರಭುತ್ವದಲ್ಲಿ ಈ 'ಪ್ರಜಾರಾಜನ'-ಇರುವಿಕೆ ಮತ್ತು ಶಕ್ತಿಯನ್ನು ಹೀಗೆ ಹೇಳಿರುವರು.

"ನಿನ್ನಂಥ ರಾಜ ಒಳಗಿದ್ದೂ ದೂರ;
ಇನ್ನೆಲ್ಲೋ ನೀನು
ರಾಜರಹಿತ ರಾಜ್ಯಾಂಗ ಶಾಸನದ
ಪ್ರಾಣಶಕ್ತಿಯೇ ನೀನು!"

(ನರಸಿಂಹಸ್ವಾಮಿ ಕೆ.ಎಸ್. ೧೯೮೬, ಪುಟ-೨೦೨)

*ಕೆ.ಎಸ್. ನರಸಿಂಹಸ್ವಾಮಿಯವರ '೨೬-೧-೫೦' ಕವನವು ಇದರ ಶೀರ್ಷಿಕೆಯೇ ತಿಳಿಸುವ ಆ ದಿನದ ಭಾರತದ ಗಣರಾಜ್ಯೋದಯವನ್ನು ಕುರಿತಿದೆ. ಇದರಲ್ಲಿ ಕೆ.ಎಸ್. ನ. ಅವರು ಬ್ರಿಟೀಷರು ಭಾರದಿಂದ ತೊಲಗಿ ಆಗಲೇ ಎರಡು ಮೂರು ವರ್ಷ ಗತಿಸಿರುವದನ್ನು-'ತಲೆಯ ಮೇಲಿನ ಹೆಜ್ಜೆ ಎಂದೋ ತೆರಳಿತು ಪಡುವಲಿನ ಬಿಳಿ-ಕೆಂಪು-ನೀಲಿ ನೀರನ್ನು ದಾಟಿ',-ಎಂದು ವರ್ಣಿಸಿರುವರು. ಇಲ್ಲಿ 'ಹೆಜ್ಜೆ' ಎಂದರೆ ಮಕುಟದ ಮುತ್ತು' ಎಂದು ಕವಿಯೇ ಸ್ಪಷ್ಟ ಪಡಿಸಿರುವದು ಬ್ರಿಟಿನ್ ರಾಣಿಯ ಅಧಿಕಾರದ ಸಂಕೇತ. ಭಾರತವು ಈಗ ಗಣರಾಜ್ಯವಾಗಿದೆ, ಬ್ರಿಟನ್‌ನಂತೆ ಇಲ್ಲಿ-

"ಇರಲಿ ರಾಜತ್ವ ನೆಪಮಾತ್ರ ಎನುವಂತಿಲ್ಲ,
ಮುಕುಟ ರಹಿತ ಸಾಮ್ರಾಜ್ಞಿ ಭಾರತ ಲಕ್ಷ್ಮೀ,
ರಾಜತ್ವ ರಹಿತ ರಾಜ್ಯಾಂಗ ಮನೋಮಂದಿರೆ"
(ನರಸಿಂಹಸ್ವಾಮಿ ಕೆ.ಎಸ್. ೧೯೮೬, ಪುಟ-೨೩೪)

ಬ್ರಿಟನ್‌ನಂತೆ ಇಲ್ಲಿ ನೆಪಮಾತ್ರಕ್ಕೆ ವಂಶಪಾರಂಪರ್ಯದ ರಾಜತ್ವ ಸಂಕೇತವಾದ ಮುಕುಟವಿಲ್ಲ ಭಾರತವು ಗಣರಾಜ್ಯದ ಲಕ್ಷಣದಂತೆ ಚುನಾಯಿತ ಅಧ್ಯಕ್ಷನನ್ನು ಹೊಂದಿತು. ಆದರೆ ಭಾವನಾತ್ಮಕ, ದೈವತ್ವದ ಕಲ್ಪನೆಯಲ್ಲಿ ಭಾರತ ಮಾತೆಯೇ ದೇಶದ ಜನತೆಯ ಮನೋಮಂದಿರದ 'ಮುಕುಟ ರಹಿತ ಸಾಮ್ರಾಜ್ಞಿ'-ಯಾಗಿರುವಳು. ಈಗ ದೇಶದ ಎದೆಗತ್ತಲೆಯನ್ನು ಕಳೆಯಲು ಗಾಂಧೀಜಿಯ ಚಂದ್ರಬಿಂಬದ ಅವಶ್ಯಕತೆ ಇದೆ. ಅದಕ್ಕಾಗಿ ಆತನನ್ನು ಈ ಸಂದರ್ಭದಲ್ಲಿ ನೆನಯಬೇಕಾಗಿದೆ. ಆ 'ಮಹಾತ್ಮನ ಮಂದಹಾಸವೇ ಗುರುವಾಗಲಿ!'-ಎಂದು ಆಶಿಸಿರುವನು. ಹಿಂಸೆಯನ್ನು ಬಯಸದ ಶಾಂತಿಪ್ರೀಯಳಾದ, ಗಂಗಾ-ಯಮುನಾ, ನದಿಗಳಲ್ಲಿ, ಸ್ನಾನಮಾಡಿದ ಉಪನಿಷತ್ತಿನ ಹೋಮಾಗ್ನಿಯಿಂದ ಜನಿಸಿದ ಭಾರತ ಮಾತೆ ಹಲವಾರು ಕಷ್ಟಕೋಟಲೆಗಳನ್ನು ಅನುಭವಿಸಿ ಬೆಂದು ಬಳಲಿ ಈಗ ಚೇತರಿಸಿಕೊಳ್ಳುತ್ತಿದ್ದಾಳೆಂದೂ; ಅದೇ ತಾನೇ ಸ್ವತಂತ್ರಗೊಂಡ ದೇಶವನ್ನು-

"ಚಳಿಗಾಲ ಬಂದಿರಲು, ಮುದುಕಿ ಮುಮ್ಮೊಲೆಯಲಿ
ಒಂದು ಕಿಡಿ ಕೆಂಡದೆದುರಿನಲಿ ಮೈ ಹಿಡಿಯಾಗಿ
ಬೆದರಿ ಕುಳಿತಂತೆ, ಚಿಂತೆಗೆ ಆತ್ಮವನು ತೆತ್ತು"
(ನರಸಿಂಹಸ್ವಾಮಿ ಕೆ.ಎಸ್. ೧೯೮೬, ಪುಟ-೨೩೫)

-ಎಂದು ಬಣ್ಣಿಸಿರುವರು. ಭಾರತಮಾತೆಗೆ ನೀನು ಜಗದ್ಧಾತ್ರಿಯಾಗಿ, ಆಹಿಂಸಾವತ್ಸಲೆಯಾಗಿ ಶಾಂತಿಯ ಶಿಶುವನ್ನು ಉಪಚರಿಸಿ ಬೆಳೆದು, ಅದೇ ಲೋಕ ನಾಯಕನಾಗಿಸಿ ದೇಶ ಸಾರುತ್ತದೆ, ಭಾರತವು ವಿಶ್ವಕ್ಕೆ ಶಾಂತಿ ಸಂದೇಶ ಸಾರಲೆಂಬುದೇ, ಕವಿಯ ಅಪೇಕ್ಷೆ. ಇವರ ಇನ್ನೊಂದು ಕವನ- '೧೫-೮-೫೦'-ಈ ಶೀರ್ಷಿಕೆಯ ದಿನಾಂಕವೇ ತಿಳಿಸುವಂತೆ ಆ ದಿನದ ಸ್ವಾತಂತ್ರ್ಯೋತ್ಸವದ ಸಂದರ್ಭದಲ್ಲಿ ರಚಿಸಿದ್ದಾಗಿದೆ. ಈ ಹಿಂದಿನ ಕವನದಂತೆಯೇ ಇಲ್ಲಿಯೂ ದೇಶವು ಶಾಂತಿಯನ್ನು ಬಯಸುತ್ತದೆಂದು ಅರುಹಿಸಿದ್ದಾರೆ. ಇಂದು ಅರ್ಧ ಜಗತ್ತಿಗೇನೆ ಯುದ್ಧ-ಶಸ್ತ್ರ-ಕೊಲೆ-ಮೊದಲಾದ ದಾನವತೆಯ ಪ್ರವೃತ್ತಿ ಬೇಕಾಗಿದೆ. ಆದರೆ ಭಾರತವೊಂದೇ ಯುದ್ಧ ಬೇಡವೆಂದು ಸಾರುತ್ತಿದೆ. ಅಂತೆಯೇ ಜಗತ್ತಿನಲ್ಲಿ ಇದರ ಕಣಿಯೇ ಬೇರೆ ಧ್ವನಿಯೇ ಬೇರೆ ಇದರಲ್ಲಿ ಭಾರತವು ಜನ್ಮತಳೆದ ಭಾವನಾತ್ಮಕ ಕಲ್ಪನೆಯನ್ನು ಸೊಗಸಾಗಿ ಕೊಟ್ಟಿದ್ದಾರೆ.

ಏಷ್ಯಾ ತಾಯಿ ಇದಕ್ಕೆ ಬೆಟ್ಟದಲಿ ಜನ್ಮಕೊಟ್ಟು ನದಿಯಲ್ಲಿ ಎರೆದು, ಆಕಾಶದಲ್ಲಿ ತೂಗಿ, ತಾರೆಗಳನ್ನೇ ನೆತ್ತಿಗೆ ಒತ್ತಿ, ಮುಗಿಲಲಿ ಸುತ್ತಾಡಿಸಿ, ಚಳಿ ಮತ್ತು ಉರಿಗಾಳಿ ಬೀಸಿ, ಭುಜ ತಟ್ಟಿ, ಪೋಷಿಸಿ, ಜಗಜಟ್ಟಿಯಾಗುವಂತೆ ಬೆಳೆಸಿದಳು. ಇದು ಇಂದು 'ಇಂಡಿಯಾ'-ವೆಂಬ ಹೆಸರನ್ನು

ಹೊಂದಿ ತಲೆಯೆತ್ತಿದೆ. ಶಾಂತಿ, ಸಹನೆ, ಧರ್ಮ, ಸಹಿಷ್ಣುತೆಯನ್ನು ಮೈಗೂಡಿಸಿಕೊಂಡ ಭಾರತ ಮಾತೆಯು–"ಸಾರುತಿಹಳಿಂದು ಎತ್ತಿದ ಕತ್ತಿಗಳ ತಡೆದು; ಶಾಂತಿ ಮೂಡದು ರಕ್ತಪಾತದಲಿ ಶಾಂತಿರಸ್ತು" (ನರಸಿಂಹಸ್ವಾಮಿ ಕೆ.ಎಸ್. ೧೯೮೬, ಪುಟ–೨೪೬)ಎಂದು ಜಗತ್ತಿಗೆ ಸಾರುತ್ತಿದ್ದಾಳೆ.

ಕೆ.ಎಸ್. ನರಸಿಂಹಸ್ವಾಮಿಯವರು 'ಇದೆ ಸಾಕು'–ಕವನದಲ್ಲಿ ಸ್ವಾತಂತ್ರ್ಯೋತ್ತರ ಭಾರತದ ಚೆಲುವು–ಒಲವು ಆನಂದಗಳನ್ನು ಕಂಡು ಇದೇ ಸಾಕೆಂಬ ಸಂತೃಪ್ತಿಯನ್ನು ವ್ಯಕ್ತಪಡಿಸಿರುವರು. ರಾಷ್ಟ್ರ ಧ್ವಜಾರೋಹಣವು ದೇಶದ ಭುಜದ ಬೆಳ್ಳಿಗುಡಿ, ಸ್ವಾಂತ್ರ್ಯದ ಗಂಗಾವರಣ. ಇದರ ನುಡಿಯೇ ರಾಷ್ಟ್ರತ ಭಾಷೆ. ಈ ಸುಂದರವಾದ ಸಂಸಾರವನ್ನು ದಕ್ಷಿಣ–ಉತ್ತರವೆಂದು ವಿಭಜಿಸುವದು ಸಾಧ್ಯವಿಲ್ಲ,

ಹೀಗೆ ನವೋದಯ ಕಾವ್ಯವು ದೇಶದ ಸ್ವಾತಂತ್ರ್ಯದ ಬಗೆಗೆ ಇಟ್ಟುಕೊಂಡಂತೆ, ಸ್ವಾತಂತ್ರ್ಯನಂರತವೂ ರಾಷ್ಟ್ರವನ್ನು ಕಟ್ಟುವ ನವಭಾರತ ನಿರ್ಮಾಣದ ಅಭಿಲಾಷೆ, ಅಭೀಪ್ಸೆಯನ್ನು, ಕಳಕಳಿಯನ್ನು, ದೇಶದ ಹಿತಾಸಕ್ತಿಯನ್ನು ಹೊಂದಿತ್ತು.

ಜಿ.ಎಸ್. ಶಿವರುದ್ರಪ್ಪನವರು 'ನಮ್ಮ ಬಾವುಟ' ಕವನದಲ್ಲಿ ಸ್ವಾತಂತ್ರೋದಯ ದಿನ ಹಾರಿಸಿದ 'ಬಾವುಟ'ದ ವರ್ಣನೆ, ಉತ್ಸವದ ಸಂಭ್ರಮ ಇದೆ. ಅಂದು ಹಾರಿದ ತ್ರಿವರ್ಣ ಧ್ವಜವು "ಮುಗಿಲಿನಲೆವ ಗರುಡನಂತೆ, ಯಜ್ಞ, ಕುಂಡ ದುಂಡೆಯಂತೆ"–ತೋರುತ್ತಿತ್ತು. ಇದು ಬಾನಿನಲ್ಲಿ ದಿಕ್ಕು ದಿಕ್ಕಿಗೂ ಸ್ವಾತಂತ್ರತೆಯ ಪಸರಿಸಲು ದಾಳಿ ಮಾಡುತ್ತದೆ. ಬಾವುಟ ಏರಿದ ನಿಲುವಿಗೆ ಬೆಳ್ಳಿ ಬೆಟ್ಟವೂ (ಮೋಡ ಅಥವಾ ಹಿಮಾಲಯ) ಸಹಿತ ಕುಬ್ಜವಾಗಿತ್ತು. ಇದನ್ನು ದಿಙ್ಮಂಡಲವೇ ಬೆರಗಾಗಿ ನೋಡುತ್ತಿದ್ದರೆ; ಇದರ ಕೆಳಗಡೆ ಭೂಮಂಡಲೇ ಒಂದಾಗಿರುತ್ತಿತ್ತೆಂದು ಅದಕ್ಕೆ ಜನತೆ ಸಂಭ್ರಮದಿಂದ ಸೇರಿರುವದನ್ನು ವರ್ಣಿಸಿರುವರು.

ಇದಕ್ಕೆ, ಸೂರ್ಯ, ಚಂದ್ರ, ನಕ್ಷತ್ರಗಳು, ಆಕಾಶದಲ್ಲಿ ವಂದನೆಗಳನ್ನು ಸಲ್ಲಿಸಿದವು. ತಾಯಿ ಪೃಥ್ವಿಶಾಮಲೆ ಬೆರಗಾಗಿ ನೋಡುತ್ತಿದ್ದಾಳೆ. ಇನ್ನು ಹಾರಾಡುವ ಈ ಬಾವುಟ ಯಾವುದರ ಪ್ರತಿಮೆ–ಪ್ರತೀಕವಾಗಿ, ತೋರುತ್ತಿದೆ ಎಂಬುದನ್ನು–

"ವೇದ ಋಷಿಯ ಮಂತ್ರಪವನ
ತೀಡುತ್ತಿತ್ತು ಮೇಲ್ಗಡೆ.
ದಿವ್ಯಯಜ್ಞ ದೀಪ್ತಿಯಂತೆ
ಜಗದಿಚ್ಛಾ ಚಕ್ರದಂತೆ
ಮೆರೆವಶೋಕ ಚಕ್ರವಾಯ್ತು
ದೇವತೆಗಳ ನಿಲುಗಡೆ."

(ಶಿವರುದ್ರಪ್ಪಜಿ.ಎಸ್, ೧೯೯೧, ಪುಟ–೧೪೯)

–ಮೇಲೆ ಪಟ ಪಟನೆ ಹಾರಾಡುವ ಬಾವುಟದಲ್ಲಿ ಗಾಳಿಯು ಈ ಯಜ್ಞಕ್ಕಾಗಿ ವೇದದ ಋಷಿಯ ಮಂತ್ರ ಬರೆಯುವಂತೆ ತೋರಿದರೆ, ಯಜ್ಞದ ದೀಪ್ತಿಯಂತಿರುವ, ಕಾಲಚಕ್ರದಂತೆ ಶೋಭಿಸುವ ಅಶೋಕ ಚಕ್ರವು ದೇವತೆಗಳು ಸ್ವರ್ಗದಿಂದಿಳಿದು ಬರುವಾಗ ಅವರಿಗೆ ನಿಲ್ದಾಣವಾಯಿತು– ಹೀಗೆ ಬಾವುಟವನ್ನು ಕಲ್ಪನಾತ್ಮಕವಾಗಿ, ಮನೋಹರವಾಗಿ ವರ್ಣಿಸಿರುವರು.

ಇವರು 'ಬಿಡುಗಡೆಯ ನೆನಪು'–ಕವನದಲ್ಲಿ ಸ್ವಾತಂತ್ರ್ಯೋತ್ಸವದ ಸಂದರ್ಭದಲ್ಲಿ ಹನ್ನೊಂದು ವರ್ಷದ ಹಿಂದೆ ದೇಶವು ಬಿಡುಗಡೆಗೊಂಡುದನ್ನು ನೆನಪಿಸಿಕೊಂಡಿದ್ದಾರೆ. ಕವಿಗೆ ಹಲವಾರು ಜಂಜಾಟಗಳಲ್ಲಿ ಆ ಬಿಡುಗಡೆಯ ದಿನ ನೆನಪು ಮಾಡಿಕೊಳ್ಳಲು ಸಮಯವೇ ಇರುವದಿಲ್ಲ. ಹಾಗಾದರೆ ಬಿಡುಗಡೆಯ ದಿನವನ್ನು ನೆನಪು ಮಾಡಿಕೊಳ್ಳುವುದು ಯಾವಾಗೆಂದರೆ– ಪ್ರತಿ ವರ್ಷ ಆಚರಿಸುವ ಸ್ವಾತಂತ್ರ್ಯೋತ್ಸವದ ಸಂದರ್ಭದಲ್ಲಿ.

"ಸಾಲು ಸೈನ್ಯಗಳ ಗೌರವ ರಕ್ಷಣೆಯನ್ನಿತ್ತು, ನಭಕೆ ಬಾವುಟವೆತ್ತಿ,
ಬಾನುಲಿಯ ಬಾಯಿ ಕವಿ ಹೊಸೆದ ಸ್ವಾತಂತ್ರ್ಯ ಗೀತವನು
ಕಿವಿಗೆ ಹಿಡಿದಾಗ................"

(ಶಿವರುದ್ರಪ್ಪಜಿ.ಎಸ್, ೧೯೯೧, ಪುಟ–೨೧೫)

ಹನ್ನೊಂದು ವರ್ಷದ ಹಿಂದೆ ನಡೆದ ಬಿಡುಗಡೆಯ ಆ ದಿನ 'ನಟ್ಟ ನಡುರಾತ್ರಿ ಹನ್ನೆರಡು ಗಂಟೆ'–ಎಂದು ನೆನಪಿನ ಸುರುಳಿಯನ್ನು ಸ್ಮೃತಿಪಟಲದಲ್ಲಿ ಒಂದೊಂದನ್ನಾಗಿ ಬಿಚ್ಚಿ ಕೊಳ್ಳುತ್ತಾನೆ. ಅಂದು–'ಬಿದ್ದ ಬಾವುಟವೆದ್ದು ಧರ್ಮಚಕ್ರದ ಮೇಲೆ ಸಿಂಹ ಪೌರುಷದಿಂದ ಕೊರಳೆತ್ತಿ ಗುಡುಗಿತು' ಹೀಗೆ ಅಂದು ಭಾರತ ಸಾರ್ವಭೌಮ ಸ್ವತಂತ್ರ ರಾಷ್ಟ್ರವಾಗಿ ತಲೆಯೆತ್ತಿದುದನ್ನು ಬಣ್ಣಿಸಿರುವರು. ಆ ಉತ್ಸವ ಸಮಾರಂಭವು ಸಾಮಾನ್ಯವಾದುದಲ್ಲ. ಇದರ ಅತಿಥಿ–ಅಭ್ಯಾಗತರು ಸಾಮಾನ್ಯರಲ್ಲ 'ಚಿಕ್ಕಕೆ, ಚಪ್ಪಾಳೆ, ಚಂದ್ರಮನುದ್ಘಾಟಿಸಿದ ಹೊಸತು ಬೆಡಗು'–ಎಂದು ಬಾನಲ್ಲಿ ಮೂಡಿದ ಚಂದ್ರನು ಈ ಸಮಾರಂಭ ಉದ್ಘಾಟಿಸಿದರೆ, ನಕ್ಷತ್ರಗಳು ಚಪ್ಪಾಳೆ ತಟ್ಟಿ ಹರ್ಷವ್ಯಕ್ತಪಡಿಸಿದವು–ಎಂಬ ಕಲ್ಪನೆಯನ್ನು ಕಟ್ಟಿಕೊಟ್ಟು ಮನೋಜ್ಞವಾಗಿ ವರ್ಣಿಸಿರುವರು.

ಚನ್ನವೀರ ಕಣವಿಯವರು "ಪ್ರಜಾಪ್ರಭುತ್ವ"ಕವನದಲ್ಲಿ ಬ್ರಿಟೀಷರ ಸರ್ವಾಧಿಕಾರತ್ವದ ಕೊನೆಯನ್ನೂ, ದೇಶದ ಸ್ವಾತಂತ್ರ್ಯ, ಪ್ರಜಾಪ್ರಭುತ್ವದ ಉದಯವನ್ನು ಸಾರಿ ಹೇಳುವ, ರೂಪಕ–ಉಪಮೆಗಳಿಂದ ಒಂದು ಮನೋಹರವಾದ ಚಿತ್ರಣವನ್ನು ಕೊಟ್ಟಿರುವರು.

"ಮುಳುಗಿತಿಹ ನೇಸರನು ಮುದಿಸಿಂಹನಂತಾಗಿ
ಪಶ್ಚಿಮಾದ್ರಿಯ ಗವಿಯ ಸೇರುತಿಹನು
ತನ್ನ ಸರ್ವಾಧಿಕಾರತ್ವ ಕೊನೆಗೊಳ್ಳುತಿರೆ
ಲೋಗರೆಡೆ ಕೆಕ್ಕರಿಸಿ ನೋಡುತಿಹನು"

(ಚನ್ನವೀರ ಕಣವಿ, ೧೯೯೬, ಪುಟ–೭೪)

ಸೂರ್ಯ ಮುಳುಗದ ಸಾಮ್ರಾಜ್ಯದವರೆಂದು ಖ್ಯಾತರಾದ ಬ್ರಿಟೀಷರ ಸರ್ವಾಧಿಕಾರವೆಂಬ ಈ ಸೂರ್ಯನು, ಮುದಿಸಿಂಹದಂತೆ, ನಿಸ್ತೇಜವಾಗಿದ್ದಾನೆ. ಈ ನಿಸ್ತೇಜವಾದ ಮುದಿಸಿಂಹವು ಸೂರ್ಯನು ಪಶ್ಚಿಮದ ಸಮುದ್ರದಲ್ಲಿ ಮುಳುಗುವಂತೆ ತನ್ನ ಗವಿ ಸೇರುತ್ತಿದೆ. ಸೇರುವಾಗ ತನ್ನ ಸರ್ವಾಧಿಕಾರತ್ವ ಕೊನೆಗೊಳ್ಳುತ್ತಿರುವದರಿಂದ ನಮ್ಮನ್ನು ಅಸಮಾಧಾನದಿಂದ, ತಿರಸ್ಕಾರದಿಂದ, ಸಿಟ್ಟಿನಿಂದ ಕೆಕ್ಕರಿಸಿ ನೋಡುತ್ತಿದೆ. ಇಲ್ಲಿ ಬ್ರಿಟೀಷರನ್ನು–ಸೂರ್ಯನಿಗೂ; ಸೂರ್ಯನನ್ನು–ಸಿಂಹಕ್ಕೂ, ಬ್ರಿಟೀಷರು ತಮ್ಮ ದೇಶಕ್ಕೆ ಹಿಂತಿರುಗುವದನ್ನು ಸೂರ್ಯನು ಪಶ್ಚಿಮದ ಸಮುದ್ರದಲ್ಲಿ ಅಸ್ತಂಗತನಾಗುವದಕ್ಕೂ, ಸೂರ್ಯ ಅಸ್ತಂಗತನಾಗುವದನ್ನು ಮುದಿಸಿಂಹ ಗವಿಸೇರುವುದಕ್ಕೂ ಹೋಲಿಸಿರುವುದು ಬಹಳ ಅರ್ಥಗರ್ಭಿತವಾಗಿದೆ. ಬ್ರಿಟೀಷರೆಂಬ ಸೂರ್ಯನು ಅಸ್ತಂಗತವಾಗುತ್ತಿದ್ದಾನೆ. ಪ್ರಜಾಪ್ರಭುತ್ವವೆಂಬ ಚಂದ್ರೋದಯವಾಗುತ್ತಿದೆ. ಈ ಬಿತ್ತರದ ಬಾನಿನಲ್ಲಿ ಚಿಕ್ಕೆಯ ಪ್ರಜಾಪ್ರಭುತ್ವ, ಚಂದ್ರನೇ ಮುಖ್ಯಮಂತ್ರಿ, ಬುಧ, ಬ್ರಹಸ್ಪತಿ, ಶುಕ್ರ,ಶನಿ, ಮಂಗಳ–ಇವರೆಲ್ಲ ಮಂತ್ರಿಗಳು. ಆಕಾಶಗಂಗೆಯೆ ಶಾಸನಸಭೆ. ಕೃತ್ತಿಕೆ, ಮೃಗಶಿರ, ಸಪ್ತ ಋಷಿಮಂಡಲಗಳೇ ವಿವಿಧ ರಾಜಕೀಯ ಪಕ್ಷಗಳು, ದಕ್ಷಿಣೋತ್ತರ ಧ್ರುವಗಳೆ ರಾಯಭಾರತ್ವ ವಹಿಸಿವೆ. ಹೀಗೆ ಬ್ರಿಟೀಷರ ಸರ್ವಾಧಿಕಾರತ್ವದ ಕೊನೆಯನ್ನು ಸೂರ್ಯಾಸ್ತಕ್ಕೂ ದೇಶದ ಸ್ವಾತಂತ್ರ್ಯ, ಪ್ರಜಾಪ್ರಭುತ್ವದ ಉದಯವನ್ನು ಚಂದ್ರೋದಯಕ್ಕೂ ಹೋಲಿಸಿ ಸೊಗಸಾಗಿ ವರ್ಣಿಸಿದ್ದಾರೆ.

ಇವರ 'ನಾಳಿನ ನವೋದಯ' ಕವನವು ದೇಶವು ಸ್ವತಂತ್ರಗೊಂಡಿರುವದನ್ನು ವರ್ಣಿಸುತ್ತದೆ, ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಇಡೀ ದೇಶಕ್ಕೆ ಸ್ವಾತಂತ್ರ್ಯದ ಸೂರ್ಯೋದಯವಾಗಿ–

"ಹೊಂಬಿಸಿಲು ಸೂಸಿ ಹೂಗಾಳಿ ಹರಿದಾಡಿತು
ನೀಲಿಯಾಗಸದ ತೊಳೆದ ಪಾಟಿಯ ಮೇಲೆ
ಹಕ್ಕಿ ಧ್ವನಿ ತೀಡಿತು ಹೊಸದೊಂದು ವರ್ಣಮಾಲೆ!
(ಚನ್ನವೀರ ಕಣವಿ, ೧೯೯೬, ಪುಟ–೨೦೮)

ಭಾರತವು ಶುಭ್ರವಾದ ನೀಲಿಯಾಗಸದಂತೆ ಇರುವದರಿಂದ ಸ್ವಾತಂತ್ರ್ಯೋದಯದ ಸೂರ್ಯರಶ್ಮಿಗಳು ಎಲ್ಲೆಲ್ಲೂ ಪಸರಿಸಿವೆ. ಪ್ರಾಥಮಿಕ ಶಾಲಾ ಬಾಲಕ ತೊಳೆದ ಪಾಟಿಯ ಮೇಲೆ ಅಕ್ಷರಭ್ಯಾಸ ಮಾಡುತ್ತಿರುವಂತೆ ದೇಶವು ಸ್ವಾತಂತ್ರ್ಯ, ಪ್ರಜಾಪ್ರಭುತ್ವದ ತತ್ತ್ವ, ಆಡಳಿತವನ್ನು ರೂಢಿಸಿಕೊಳ್ಳುತ್ತಿರುವದನ್ನು ಸೂಚಿಸುತ್ತದೆ. ಅಲ್ಲದೆ ದೇಶದ ಕೀರ್ತಿಯ ಪ್ರತೀಕವಾದ ಕೆಂಪು ಕೋಟೆಯ ಭುಜಕೆ ತ್ರಿವರ್ಣ ಧ್ವಜವನ್ನಿಟ್ಟು ಅಂಥಹ ಕೀರ್ತಿಯನ್ನು, ಪ್ರೀತಿಯ ಸಂಕೇತದ ಸ್ಮಾರಕವಾದ ತಾಜ ಮಹಲಿನಂತಹ ಪ್ರೀತಿ, ಶ್ರವಣಬೆಳಗೊಳದ ಗೊಮ್ಮಟೇಶ್ವರನ ಮಂದಸ್ಮಿತ, ಈ ನಾಡಿನ ಪವಿತ್ರ ನದಿಗಳ ಮೇಲೆ ಸೂಸಿ ಬರುವ ತಂಗಾಳಿ–ಇವುಗಳನ್ನು ಅಳವಡಿಸಿಕೊಳ್ಳಲಾಗುತ್ತಿದೆ.

ಕೆ.ಎಸ್. ನಿಸಾರ್ ಅಹಮದ್‌ರು 'ಸ್ವಾತಂತ್ರ್ಯದ ಹಣತೆ' ಕವನದಲ್ಲಿ ಸ್ವಾತಂತ್ರ್ಯವನ್ನು ಉರಿಯುತ್ತಿರುವ ನಂದಾದೀಪಕ್ಕೆ ಹೋಲಿಸಿ, ಅದು ನಮಗೆ ದೊರೆತ ಬಗೆಯನ್ನು ವಿಶದಪಡಿಸಿದ್ದಾರೆ.

"ಸದಾ ಉರಿಯುತಿರುವ ಹಾಗೆ ಸ್ವಾತಂತ್ರ್ಯದ ಹಣತೆ
ದುಡಿಮೆ ತೈಲವೆರೆಯುತಿರಲು ಬಿಡುವಿಲ್ಲದೆ ಘನತೆ
ಮುಳ್ಳಿನಿಂದ ಅರಿವೆ ಬಿಡಿಸಿದಂತೆ ಮುಕ್ತಿ!
ಹುಲಿಯ ಬಾಯ ಮೇವ ಕಸಿಯುವಂತೆ ಧೀರ ಶಕ್ತಿ?
(ನಿಸಾರ್ ಅಹಮ್ಮದ್, ಕೆ.ಎಸ್. ೧೯೯೧, ಪುಟ-೨೩)

ಸ್ವಾತಂತ್ರ್ಯವು ಸುಲಭವಾಗಿ ಬಂದುದಲ್ಲ; ಹುಲಿಯ ಬಾಯಿಯಲ್ಲಿ ಸಿಕ್ಕಮೇವನ್ನು ಕಸಿದುಕೊಳ್ಳುವಂತೆ ಧೈರ್ಯ, ಸಾಹಸ, ಶೌರ್ಯಗಳಿಂದ ಹೋರಾಡಿ ಬ್ರಿಟೀಷರಿಂದ ಪಡೆದುಕೊಂಡಿದ್ದೇವೆ. ಹೋರಾಟದಲ್ಲಿ ಮಡಿದವರಿಗೆ ಕವಿ ನಮನ ಸಲ್ಲಿಸಿರುವರು. ಸ್ವಾತಂತ್ರ್ಯವನ್ನು ಉಳಿಸಿ-ರಕ್ಷಿಸಿಕೊಂಡು ಹೋಗುವುದು ನಮ್ಮ ಆದ್ಯ ಕರ್ತವ್ಯ. ಅಂತೆಯೇ ಸ್ವಾತಂತ್ರ್ಯದ ಈ ನಂದಾದೀಪ ಸದಾ ಬೆಳಗುತ್ತಿರಲೆಂದು ದುಡಿಮೆಯ ತೈಲ ಹಾಕುತ್ತಿದ್ದೇವೆ; ಅದು ಘನತೆಯಿಂದ ಬೆಳಗುತ್ತಿದೆ.-ಹೀಗೆ ನವೋದಯ ಕಾವ್ಯಗಳಲ್ಲಿ ಸ್ವಾತಂತ್ರ್ಯೋದಯ ಸ್ವಾತಂತ್ರ್ಯೋತ್ಸವ, ಜಯಂತಿ, ಆಚರಣೆ, ಆಯಾ ಸಾಂದರ್ಭಿಕ ವಿಷಯವನ್ನು ವ್ಯಕ್ತಪಡಿಸುವಲ್ಲಿಯೂ ರಾಷ್ಟ್ರೀಯತೆಯನ್ನು ಅಭಿವ್ಯಕ್ತಪಡಿಸಿರುವರು.

**೪.೭. ಸ್ವಾತಂತ್ರ್ಯೋತ್ತರ ಭಾರತದ ಆಶೋತ್ತರಗಳು :**

ಸ್ವಾತಂತ್ರವೇ ದೇಶದ ಸರ್ವರೋಗ ನಿವಾರಣೆಗೆ ದಿವ್ಯೌಷಧಿಯೆಂದು ನಂಬಲಾಗಿತ್ತು. ಆದರೆ ಇದು ಸ್ವಾತಂತ್ರ್ಯ ಬಂದನಂತರ ಹುಸಿಯಾಯಿತು. ಸ್ವಾತಂತ್ರ್ಯನಂತರ ಸಾಮಾಜಿಕ-ಧಾರ್ಮಿಕ-ಭೌಗೋಳಿಕ-ಜನಾಂಗಿಕ-ಭಾಷಿಕ-ರಾಜಕೀಯ ಸಮಸ್ಯೆಗಳು ದೇಶವನ್ನು ಕಾಡತೊಡಗಿದವು. ಈ ಮೊದಲು ಬ್ರಿಟೀಷರ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಪ್ರೇರಪಿಸಬೇಕಾಯಿತು. ಆಗ ವೈರಿ ಹೊರಗಿನವನಾಗಿದ್ದರೆ, ಈಗ ವೈರಿ (ಸಮಸ್ಯೆಗಳು) ಒಳಗಿನವನೇ ಆಗಿರುವನು. ಸ್ವಾತಂತ್ರ್ಯೋತ್ತರ ದೇಶದ ಹಿತಾಸಕ್ತಿ, ಆಶೋತ್ತರಗಳನ್ನು, ಸ್ಥಿತಿ-ಗತಿಗಳನ್ನು ಕುರಿತು ನವೋದಯ ಕವಿಗಳು ಕಾವ್ಯ ರಚಿಸಿರುವರು. ಅವುಗಳಲ್ಲಿ ಪ್ರಮುಖವಾದವುಗಳನ್ನು ಈ ಮುಂದೆ ನೋಡಲಾಗಿದೆ.

ಗೋವಿಂದ ಪೈಯವರು-'ಭಾರತಾಂಬೆಯ ಮಹಿಮೆ'-ಕವನದಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದ ಹನ್ನೊಂದು ವರ್ಷದಲ್ಲಿ ದೇಶದ ಸಮಸ್ಯೆಗಳನ್ನು ಕುರಿತು ಹೀಗೆ ಮನಮಿಡಿದಿದ್ದಾರೆ:

"ಹೊಂಗಾಲ ಬಂತೆಂದು ನಲಿದೆಮಗೆ ತಂದೆ
ರಾಹುವನು ತೊಲಗಿಸಿದೆಯಾ ಕೇತುವನು ತಂದೆ

ಇದನ್ನೆಲ್ಲವ ತಿದ್ದಿ ಭಾರತವ ಕಾಯೊಡೆಯಾ
ಕಾಯು ಭಾರತಕೆ ನೀನಿತ್ತ ಬಿಡುಗಡೆಯ!"
(ನಾಯಕ ಹಾ.ಮಾ. (ಸಂ); ೧೯೮೩, ಪುಟ-೧೭

ದೇಶಕ್ಕೆ ಸ್ವಾತಂತ್ರ್ಯ ಬಂತೆಂದು ಸಂತೋಷಗೊಂಡೆವು; ಆದರೆ ಇದರ ಬೆನ್ನ ಹಿಂದೆಯೇ ರಾಷ್ಟ್ರ ಜೀವನಕ್ಕೆ ಗಂಡಾಂತರವಾದ ಹಲವಾರು ಸಮಸ್ಯೆಗಳು ಉದ್ಭವವಾದವು. ಇವುಗಳನ್ನೆಲ್ಲಾ ಪರಿಹರಿಸಿ ನೀನು ಕೊಟ್ಟ ಸ್ವಾತಂತ್ರ್ಯವನ್ನು ಕಾಯಬೇಕೆಂದು ಪೈಯವರು ದೇವರಲ್ಲಿ ಬೇಡಿಕೊಂಡಿರುವರು

ಕಡೆಂಗೋಡ್ಲು ಶಂಕರಭಟ್ಟರು ಪತ್ರ ಪುಷ್ಪದಲ್ಲಿಯ-"ಕಟ್ಟುವಿರ ಭಾರತವ?"-ಕಾವ್ಯದಲ್ಲಿ ನವಭಾರತದ ನಿರ್ಮಾಣಕ್ಕೆ ಪ್ರೇಮ ರಸದ ಕೋಡಿ ಹರಿಸಿ, ಧರ್ಮ-ಜಾತಿ-ಜನಾಂಗ-ಪ್ರದೇಶ-ಭಾಷೆ-ಮೊದಲಾದ ಭೇದಗಳಿಂದ ಹಾಳು ಹೋಳಾದ ಎದೆಯಲ್ಲಿ ರಾಷ್ಟ್ರ ನಿರ್ಮಾಣದ ಆಸೆಯನ್ನು ಚಿಗುರಿಸಿರುವರು.

"ಸಂಧಾನ ಸೇತು ಬಂಧವ ರಚಿಸುವಿರ? ಧರ್ಮ
ಜಡತೆಯಂಚಿನಲಿ ಕುಂಟುತಿದೆ ಜೀವನನಾಡಿ.
ಮಿಂಚು ಹೆಜ್ಜೆಯ ಕೂಡಿ ಹೂಡಿ ಹಿಗ್ಗಿಸುವಿರಾ?
ವಜ್ರಧಾತುಗಳ ವೀರ ಪ್ರತಿಷ್ಠೆಯಲಿ, ಸೇ-
-ವಾ ಪುಣ್ಯ ನಿಷ್ಠೆಯಲಿ, ಕಟ್ಟುವಿರ ಭಾರತವ?"
(ಕಡೆಂಗೋಡ್ಲುಶಂಕರಭಟ್ಟ, ೧೯೮೩, ಪುಟ-೩೪)

-ಹೀಗೆ ಭವ್ಯ ಭಾರತದ ನಿರ್ಮಾಣದ ಚಿಂತನೆಗಳನ್ನು ವ್ಯಕ್ತಪಡಿಸಿರುವರು. ಇದೇ ರೀತಿ 'ಪಂತ', 'ಕಡಲ ಹಾಡು', 'ಬಲಿ'-ಮುಂತಾದ ಕವನಗಳಲ್ಲೂ ದೇಶದ ಹಿತಾಸಕ್ತಿ ಅಶೋತ್ತರ ಭಾವನೆಗಳನ್ನು ವ್ಯಕ್ತಪಡಿಸಿರುವರು.

ಆನಂದ ಕಂದರು 'ಉತ್ಸಾಹಗಾಥಾ' ಸಂಕಲನದ ಇದೇ ಶೀರ್ಷಿಕೆಯ ಕವನದಲ್ಲಿ ಸಾತಂತ್ರ್ಯೋತ್ತರ ಭಾರತದ ನಿರ್ಮಾಣಕ್ಕೆ ಪ್ರತಿಯೊಬ್ಬ ಭಾರತೀಯನ ನರ-ನಾಡಿಗಳಲ್ಲಿ "ಉತ್ಸಾಹ ರಸವೊಂದೇ ದುಮು-ದುಮ್ಮಿಸುತಿರಲಿ!"-ಎಂದಿರುವರು. ಎಷ್ಟೋ ಶತಮಾನಗಳ ಪರದಾಸ್ಯದಿಂದ ಭಾರತ-ಮಾತೆ ಮುಕ್ತಳಾಗಿದ್ದಾಳೆ. ಇನ್ನು ಮುಂದೆಯೂ, ಅಪೇಕ್ಷೆಯೂ ಆಗಿದೆ. ಅಂತೆಯೇ-"ಭಾರತದ ಸ್ವಾತಂತ್ರ್ಯ ರಕ್ಷಣೆಯೆ ನನ್ನ ಗುರಿ, ಬೇರೆಯಿನ್ನಾವುದೂ ಬೇಡವೆನಗೈಸಿರಿ!"(ಬೆಟಗೇರಿಕೃಷ್ಣಶರ್ಮ,೧೯೭೨, ಪುಟ-೧) ಎಂದಿರುವರು.

ನಾವೆಲ್ಲರೂ ಒಂದೇ ಎಂದು ನಮ್ಮ ನಮ್ಮಲ್ಲಿಯ ದ್ವೇಷವನು ಬಿಟ್ಟು ಕೂಡಿಯೇ ಬಾಳುವ, ಉಣ್ಣುವ,ವೀರಕಾರ್ಯಗಳಲ್ಲಿ ತೊಡಗಿ ಕತ್ತಲಿಲ್ಲದ ಬೆಳಕಿನಕಡೆ ನಡೆಯೋಣ. ನಮ್ಮಜನ ಪೂರ್ವದ ಋಷಿವಾಣಿ ಮರೆತು ಭಾರತಮಾತೆಯನ್ನು ಪರಕೀಯರಿಗೆ ಆಳಾಗಿರಿಸಿದ್ದರು. ಇಂದೂ ಅದೇ ವಾಣಿ

ಮೊಳಗುತ್ತದೆ. ಹಿಂದಿನವರಂತೆ ನಾವು ಅಲಕ್ಷಿಸದೆ ಅದನ್ನು ಕಿವಿ ತೆರೆದು, ಮನಗೊಟ್ಟು ಕೇಳಬೇಕು. ಅದನ್ನು ಅರಿತು ನಡೆದರೆ ನಮಗೆ ಯಾವ ಭಯವೂ ಇಲ್ಲ.

ಸ್ವಾತಂತ್ರ್ಯೋತ್ತರ ಭಾರತದ ನಿರ್ಮಾಣಕ್ಕೆ ಒಳ್ಳೆಯ ಭಾವ-ಬುದ್ಧಿ, ಸ್ನೇಹ-ನಡೆಗಳನ್ನು ಹೊಂದಿದರೆ ನಮ್ಮ ಭಾವದ ಬೆಸುಗೆಯು ಹಿಮಗಿರಿಯ ಎತ್ತರವನ್ನು ಮೀರುತ್ತದೆ. ನಮ್ಮೆದೆಯ ಕೂಟ ಕಡಲ ತೆರೆಗಳನ್ನು ಏರುತ್ತದೆಂದು ಭಾವಿಸಿರುವರು. ನಾವು ಬಾರಿಸುವ ವಾದ್ಯ, ನೂರ ವಿಧವಾದರೂ ಒಂದೇ ಲಯ-ಗತಿ ಹೊರಡಿಸಲಿ; ನಾವು ಊದುವ ಕಹಳೆ, ಶಂಖ, ಬೇರೆ, ಬೇರೆಯಾದರೂ ಅವುಗಳಿಂದ ಓಂಕಾರ ಒಂದೇ ಮೊಳಗಲಿ; ನಡೆಯುವ ಪಾದಗಳು ಎಷ್ಟೋ ಕೋಟಿಗಳಾದರೂ ಎಲ್ಲರೂ ಒಂದೇ ಗುರಿ ಕಡೆಸಾಗುತಿಹಲಿ. ಹೀಗೆ ನಡೆದರೆ ದೇಶದ ಏರು-ಪೇರು, ಭೇದ-ಭಾವಗಳನ್ನು ಸಮಗೊಳಿಸಿ ಭಾವೈಕ್ಯತೆಯನ್ನು ಮೂಡಿಸಬಹುದು. ಆಗ "ಹರಡಬಹುದೆಲ್ಲೆಡೆಗೆ ಭಾರತೀಯರ ಸುಕೀರ್ತಿ ಭಾರತಾಂಬೆಯಾಗುವಳು ವಿಶ್ವದಾರಾಧ್ಯಮೂರ್ತಿ!"(ಬೆಟಗೇರಿಕೃಷ್ಣಶರ್ಮ,೧೯೭೨, ಪುಟ-೩)ಇದಕ್ಕಾಗಿ ಭಾರತೀಯರಲ್ಲಿ ಇಂದು ಉತ್ಸಾಹಭಾವ ಮೊಳೆತು ಬೆಳೆಯಬೇಕೆಂದು ಆಶಿಸಿರುವರು.

ಇದೇ ಸಂಕಲನದ 'ನಾಳೆಯ ಭಾರತ' ಕವನದಲ್ಲಿ ದೇಶದ ಭವಿಷ್ಯತ್ತಿನ ಸ್ಥಿತಿ-ಗತಿ ಬಗೆಗೆ ಚಿಂತಿಸಿದ್ದಾರೆ. ಉಪದೇಶಿಸಿದ್ದಾರೆ. ತಂದೆಯ ಗುಣಕರ್ಮಾದಿಗಳಿಗೆ ಮಗ ಬಲಿಯಾಗುತ್ತಾನೆ. ತಂದೆ ಬೆಳೆಸಿದ ಬೆಳೆಗಳು ಮಗನಿಗೆ ಫಲ ನೀಡುತ್ತವೆ. ಅದರಂತೆಯೇ ದೇಶದ ಇಂದಿನ ಜನತೆಯ ಒಳ್ಳೆಯ ಕರ್ಮದ ಫಲದಿಂದ ನಾಳೆಯ ಭಾರತ ಬೆಳಗುತ್ತದೆ. ಇಂದಿನ ಜನತೆಯ ಕೆಟ್ಟ ಕರ್ಮದ ಫಲಗಳೇ ನಾಳೆಯ ಭಾರತದ ಸುಖ-ಶಾಂತಿ-ನೆಮ್ಮದಿಯನ್ನು ತುಳಿದು ಅಳೆಯುತ್ತಿಯೆಂದು ತಿಳಿಸಿರುವರು.

ಪೂರ್ವಜರ ಕರ್ಮದ ಫಲಗಳು ನಮಗೆ ಸ್ವಾತಂತ್ರ್ಯವನ್ನು ತಂದು ಕೊಟ್ಟಿವೆ. ದೇಶದ ಆಡಳಿತ ಸೂತ್ರಗಳೆಲ್ಲವೂ ನಮ್ಮ ಕೈಯಲ್ಲಿವೆ. ದೇಶದ ಭವಿಷ್ಯದ ಮೇಲು-ಕೀಳುಗಳನ್ನು ನಾವೇ ಬರೆಯಬೇಕಾಗಿದೆ. ದೇಶದ ಇಂದಿನ ಜನರ ಮನದ ಮೊಗ್ಗು ಅರಳಿದರೆ, ಹೃದಯ ಕರಗಿಸಿ ಸ್ನೇಹ ಹರಿಸಿದರೆ, ಕರ್ಮಧರ್ಮವಾದರೆ, ಪ್ರಜ್ಞೆ ಬೆಳಗಿದರೆ, ದೇಶದ ನಾಳೆಯ ಜನತೆಗೆ ಗಂಧ, ಅಮೃತ, ಚೆಲುವು-ಚಂದ, ಬೆಳಕು ದೊರೆಯುತ್ತವೆ. ಇಂದಿನ ಜನತೆಯ ಬಾಳಿನಲ್ಲಿ ಯಜ್ಞ-ದಾನ-ತಪವಿರಬೇಕು. ಹಗೆಯನ್ನು ಕರುಣೆ-ಸ್ನೇಹಗಳಿಂದ ಗೆಲ್ಲಬೇಕು. ಪರಿಶ್ರಮದಿಂದ ದುಡಿದು ಘನತೆ ಪಡೆಯಬೇಕು. ನಾಳೆಯ ಭವ್ಯ-ಭಾರತದ ನಿರ್ಮಾಣಕ್ಕೆ ಇಂದು ನಾವು ಯಾವ ರೂಪ, ಅನುಭವ, ಕೃತಿ-ಕಾರ್ಯಗಳನ್ನು ಅಳವಡಿಸಿಕೊಳ್ಳಬೇಕೆಂಬುದನ್ನು ಸಂಕೇತ-ಪ್ರತೀಕ-ಪ್ರತಿಮೆಗಳ ಮೂಲಕ ಶಬ್ದಚಿತ್ರಣವನ್ನು ಬಹಳ ಮನೋಜ್ಞವಾಗಿ ಕಟ್ಟಿ ಕೊಟ್ಟಿರುವರು.

"ಇಂದಿನೀ ಬರುಬುರುಡೆ ಸದ್‌ಭಾವ ಸಂಗೀತ
ಮಿಡಿವ ವೀಣೆಗಳ ರೂಪವ ತಳೆಯಯಬೇಕು,

> ಇಂದಿನೀ ಬರಿಯೋಲೆ ಸತ್ಯಾನುಭವರಸದ
> ಕೃತಿಗಳನ್ನು ಮೈಮೇಲೆ ಬರೆದುಕೊಳ್ಳಬೇಕು!
> ಅಲ್ಲಲ್ಲಿ ಬಿದ್ದಿರುವ ಕಲ್ಲುಬಂಡೆಗಳೆಲ್ಲ
> ಶಿಲ್ಪಿಗಳ ಶಿವಕಲೆಯ ನೆಲೆಯಾಗಬೇಕು."

(ಬೆಟಗೇರಿಕೃಷ್ಣಶರ್ಮ,೧೯೭೨, ಪುಟ-೧೬)

–ಅದೇ ರೀತಿ ನಾಳೆವರೆಗೂ ದೇಶದ ಜನತೆ ದುಡಿಯುತಲಿದ್ದರೆ ಭಾರತವು ದೇವಲೋಕವಾಗುತ್ತದೆ. 'ಬಸಿರತುಂಬ ಅಮೃತಪಾಕ!' ತುಂಬಿಕೊಳ್ಳುತ್ತದೆ–ಎಂಬ ಆಶಾಭಾವನೆಯನ್ನು ವ್ಯಕ್ತಪಡಿಸಿರುವರು.

ಬೇಂದ್ರೆಯವರು (ಯಕ್ಷ–ಯಕ್ಷಿಣಿ ಸಂಕಲನದ) 'ನಾಡ ಜಾಣರಿಗೆ ನಾಕು ಮಾತು'–ಕವನದಲ್ಲಿ ಯಾವುದು ಬೇಕು, ಯಾವುದು ಬೇಡವೆಂಬ ಹಿತೋಪದೇಶ ಹೇಳುವ ಸಂದರ್ಭದಲ್ಲಿ ದೇಶವನ್ನು ಕುರಿತು–'ಭಾರತವೇ ಮುಂದಾಗಬೇಕು, ರಾಷ್ಟ್ರವೂ ಒಂದಾಗಬೇಕು' ಎಂದಿರುವರು. ಸರಕಾರವನ್ನು ಕುರಿತು–"ಪ್ರಗತಿಯಲ್ಲಿ ಸಹಕಾರ ಬೇಕು, ಒಕ್ಕಟ್ಟಿನ ಸರಕಾರಬೇಕು"–ಎಂದಿರುವರು.

ಕುವೆಂಪುರವರು (ಕೃತ್ತಿಕೆ ಸಂಕಲನದ) 'ಸ್ವಾತಂತ್ರ್ಯ'–ಕವನದಲ್ಲಿ, ಸ್ವಾತಂತ್ರ್ಯ ಪೂರ್ವದಲ್ಲಿಯೇ ಸ್ವಾತಂತ್ರ್ಯೋತ್ತರದ ಸ್ಥಿತಿ–ಗತಿಗಳನ್ನು ಮುಂದಾಲೋಚಿಸಿದ್ದಾರೆ. ಸ್ವಾತಂತ್ರ್ಯಕ್ಕಿಂತಲೂ ಮೊದಲು ಅದನ್ನು ನಡೆಸುವ ಸದ್ವಿನಿಯೋಗ ಮಾಡಿಕೊಳ್ಳುವ ಯುಕ್ತಿ–ಶಕ್ತಿಯನ್ನು ಕೊಡಲು ಕೇಳಿಕೊಂಡಿದ್ದಾರೆ. ಇಲ್ಲದಿದ್ದರೆ ಹಾಗೆ ಸ್ವಾತಂತ್ರ್ಯ ಕೊಟ್ಟರೆ, ತಪ್ಪು ಬಟ್ಟೆಗೆ ಬಿದ್ದು ಮಡಿಯುವೆನೆಂದು ಆತಂಕ ವ್ಯಕ್ತಪಡಿಸಿರುವರು.

ಸ್ವಾತಂತ್ರ್ಯದ ದುರುಪಯೋಗ, ಸದ್‌ವಿನಿಯೋಗ ಮಾಡಲಾರದ ಅಪರಾಧಕ್ಕಿಂತಲೂ 'ಧರ್ಮದೀ ದಾಸ್ಯವೇ ಲೇಸೆನಗೆ ನೂರು ಮಡಿ'–ಎಂಬ ನಿಲುಮೆಯನ್ನು ತಾಳಿರುವರು. ನಮ್ಮಲ್ಲಿ ಅಂಧಕಾರ–ಅಜ್ಞಾನ ತುಂಬಿರುವಾಗ ಬಿಡುಗಡೆ ಆಸೆಯೇ ಭಾರ.

> "ಸುತ್ತಲೂ ಜ್ಯೋತಿಯಿದೆ; ಹೃದಯ ಮಂದಿರದಲಿ
> ಕತ್ತಲೆಯು ಹರಿಯದಿದೆ; ಬಿಡುಗಡೆಯ ಹಿರಿಹೊರೆಯೆ
> ಭಾರವಾಗಿದೆ......................"

(ಕುವೆಂಪು,೧೯೬೩, ಪುಟ-೮೨)

–ಹೀಗೆ ಈ ಕವನದಲ್ಲಿ ಮುಂದೆ ಸ್ವಾತಂತ್ರ್ಯೋತ್ತರ ಕಾಲದಲ್ಲಿ ದೇಶವನ್ನು ಮುನ್ನಡೆಸಲು ಬೇಕಾದ ಶಕ್ತಿ–ಯುಕ್ತಿ–ಸಾಮರ್ಥ್ಯಗಳನ್ನು ಪಡೆಯೋಣ. ಆಮೇಲೆ ಸ್ವಾತಂತ್ರ್ಯ ಬರಲೆಂದು ಆಶಿಸಿರುವರು.

ಜಿ.ಪಿ. ರಾಜರತ್ನಂ ಅವರು(ಜಪಾನಿನ ಹಿಮಗಿರಿ ಮತ್ತು ಇತರ ಕವನಗಳು ಸಂಕಲನದ) 'ಜಾಗೃತ ಭಾರತ'–ಕವನದ ಕೊನೆಯ ಭಾಗದಲ್ಲಿ ಸ್ವಾತಂತ್ರ್ಯೋತ್ತರದ ಕಾಲದಲ್ಲಿ ದೇಶವು

ಕೈಗೊಳ್ಳಬೇಕಾದ, ಕೈಗೊಂಡ ಕಾರ್ಯಗಳನ್ನು ಕುರಿತು ಹೇಳಿದ್ದಾರೆ. ಜನತೆಗೆ ಅನ್ನ, ಮನೆ, ಆರೋಗ್ಯ ಕೊಡಬೇಕು. ಇದನ್ನು ಪಡೆಯುವದು ಪ್ರತಿಯೊಬ್ಬನ ಹಕ್ಕು. ಅನಂತರ ಶಿಕ್ಷಣ ಕೊಡಬೇಕು.

ಸ್ವಾತಂತ್ರ್ಯಾನಂತರ ಪಂಚವಾರ್ಷಿಕ ಯೋಜನೆ ಕೈಗೊಂಡು ಕೃಷಿಗೆ ಆದ್ಯತೆ ಕೊಡಲಾಯಿತು. ದೇಶದ ತುಂಬಾ ಹಲವಾರು ಆಣೆಕಟ್ಟು ಕಟ್ಟಿ ನೀರಾವರಿ ಸೌಲಭ್ಯ ಒದಗಿಸಲಾಯಿತು; ವಿದ್ಯುತ್ ಉತ್ಪಾದಿಸಲಾಯಿತು. ಕೈಗಾರಿಕೆಗಳು ಪ್ರಾರಂಭವಾದವು, ಸಾರಿಗೆ ಸೌಲಭ್ಯ ಒದಗಿಸಲಾಯಿತು; ಸಾಮಾಜಿಕ ಸುಧಾರಣೆಯೂ ನಡೆಯಿತು. ಅಂತೆಯೇ ಇಂದು ಇದು–'ಜಾಗೃತ ಭಾರತ!' ಎಂದು ಬಣ್ಣಿಸಿರುವರು.

ಪು.ತಿ. ನರಸಿಂಹಾಚಾರ್ಯರು 'ಮತಿಧೃತಿ' ಕವನದಲ್ಲಿ ಪರಕೀಯ ಸಂಸ್ಕೃತಿಯ ಅಂಧಾನುಕರಣೆಯ ವ್ಯಾಮೋಹಕ್ಕೆ ಸಿಲುಕಿದ ಜನತೆಗೆ 'ಮತಿ' ಎಂಬುದಿಲ್ಲ. 'ಪರಚಿತ್ತದ ಗಾಳಿಗೆ ಕೊರಳಿತ್ತೂಳುವದೇ ಪ್ರಗತಿ?"–ಎಂದು ವಿಡಂಬಿಸಿದ್ದಾರೆ. ಭಾರತೀಯನು ತನ್ನ ತನವನ್ನುಳಿಸಿಕೊಂಡು ಭಾರತೀಯನಾಗಿರಬೇಕೆಂಬುದು ಕವಿಯ ಅಪೇಕ್ಷೆ. ಸ್ವಾತಂತ್ರ್ಯೋತ್ತರ ಭಾರತವು ಪಾಶ್ಚಾತ್ಯ ಸಂಸ್ಕೃತಿ ವಿಚಾರಧಾರೆಗಳಿಂದ ದೂರವಿದ್ದೂ ತನ್ನದೇ ಆದ ಸ್ವರೂಪವನ್ನು ಸುಖ–ಸಮೃದ್ಧಿಯನ್ನು ಹೊಂದಬೇಕೆಂಬ ಹಂಬಲವನ್ನು ವ್ಯಕ್ತಪಡಿಸಿದ್ದಾರೆ.

"ಸ್ವತಂತ್ರ ಭಾರತದ ಸೂರ್ಯನಿದಿರು ಸಿರಿ
ಜೀವನದಮೃತದ ಮಳೆಗರೆಸು
ಆ ತೇಜದಿ ಮೂಡುವ ಮಳೆ ಬಿಲ್ಲೊಳು
ತಾಯ್ನಾಡಿನ ಬಣ್ಣವನು ಬಿಡಿಸು"
(ನರಸಿಂಹಾಚಾರ್ಯ ಪು.ತಿ. ೧೯೭೮, ಪುಟ–೪೬೪)

ಪುತಿನ ಅವರು 'ಹಿರಿಯಕ್ಕರೆ'–ಕವನದಲ್ಲಿ ದೇಶವು ಪ್ರಗತಿ ಪಥದತ್ತ ಮುನ್ನಡೆಯುತ್ತಿರುವದನ್ನು ಕಂಡು ಅಕ್ಕರೆಯಿಂದ ಪ್ರಶಂಸಿಸಿದ್ದಾರೆ. ಪಾಶ್ಚಾತ್ಯ ವಿಜ್ಞಾನದ ಜ್ಞಾನವನ್ನು ಬಳಸಿಕೊಂಡು ಉದ್ಯಮಶೀಲತೆ ಕೈಗಾರಿಕೆಗಳಿಂದ ಸಮೃದ್ಧಿಯತ್ತ ಮುನ್ನಡೆದಿದೆ. ಔದಾರ್ಯದಿಂದ ನಾಡು ದಿನ ದಿನಕ್ಕೂ ಕಳೆಗೊಳ್ಳುತ್ತಿರುವುದನ್ನು "ಕೊಡುಗೆಯಲ್ಲೆ ಕೊಳ್ಳುಗೈಯಿರದಂದ ಸಿರಿಗರೆವುದ್ಯಮ ಕರವಿಡಿಯೆ'–ಎಂದಿರುವರು. ನೆರೆ ಹೊರೆಯ ದೇಶಗಳೊಂದಿಗೆ ಸ್ನೇಹದಿಂದಿರುವ ಅಂದಿನ ವಿದೇಶಾಂಗ ನೀತಿಯನ್ನು ಮೆಚ್ಚಿಕೊಂಡಿದ್ದಾರೆ.

ವಿ.ಸೀತಾರಾಮಯ್ಯನವರು 'ಭಾಗ್ಯತಾರೆ' ಕವನದಲ್ಲಿ ಭಾರತವು ಸುಖ–ಸಮೃದ್ಧಿಯಿಂದ ಮುನ್ನಡೆಯುತ್ತಿರುವದನ್ನು ಬಿಂಬಿಸಿದ್ದಾರೆ.

"ಭಾರತೀಯ ಭಾಗ್ಯತಾರೆ
ನಡೆಯುತಿದೆ ಮುಂದೆ
ಬೆನ್ನ ಹಿಂದೆ ಬನ್ನಿರೆಂದು"
(ಸೀತಾರಾಮಯ್ಯ ವಿ. ೧೯೯೦, ಪುಟ-೨೧೬)

ಭಾರತದ ಸುಖ-ಸಂಪತ್ತು, ಐಶ್ವರ್ಯವೆಂಬ ಪ್ರಗತಿಯ ಭಾಗ್ಯದ ನಕ್ಷತ್ರವು ಬೆಳಗುತ್ತಾ ಮುಂದೆ ಮುಂದೆ ಸಾಗುತ್ತಿದೆ. ಅದನ್ನು ನಾವು ಹಿಂಬಾಲಿಸಬೇಕೆಂದಿರುವರು. 'ಗಡಿ ದಾಟು' ಕವನದಲ್ಲಿ ಸ್ವಾತಂತ್ರ್ಯನಂತರ ದೇಶವು ಪ್ರಗತಿಪಥದಲ್ಲಿ ಸಾಗಿರುವದನ್ನು ಬಣ್ಣಿಸಿರುವರು. ಇಲ್ಲಿಯವರೆಗೆ ನಮ್ಮ ಆಸೆ-ಆಕಾಂಕ್ಷೆಗಳಿಗೆ, ಇತಿ-ಮಿತಿಗಳಿದ್ದವು. ಇನ್ನು ಸ್ವತಂತ್ರಗೊಂಡ ನಂತರ ಇವುಗಳಿಗೆ ನಿರ್ಬಂಧ ಹಾಕುವವರು ಯಾರು?. ಇನ್ನು ಮುಗಿಲೆತ್ತರ, ಉತ್ತರೋತ್ತರ ಅಭಿವೃದ್ಧಿ ಹೊಂದಬಹುದೆಂಬ ಆಶಾಭಾವನೆಯನ್ನು ವ್ಯಕ್ತಪಡಿಸಿರುವರು. ಹೆಣ್ಣು-ಗಂಡೆಂಬ ಭೇದವಿಲ್ಲದೆ ಗಡಿದಾಟುವ ಮನೋಭಾವವನ್ನು "ನಡೆದಿವೆ ಹೆಣ್‌ಗಂಡಿನ ಕಾಲುಗಳು ನೋಡದೋ ನಿಲ್ಲದೆ ಎಂದೆಂದೂ ಮುಂದೆ ಮುಂದೆ!"(ಸೀತಾರಾಮಯ್ಯ ವಿ. ೧೯೯೦, ಪುಟ-೧೬೯)ಎಂದು ವರ್ಣಿಸಿರುವರು. ನಾಡಿನ ಜನ ಬಾನಂಚಿನ ಕೊನೆ ದಾಟಿ ಇದುವರೆಗೂ ಕಾಣದ ಯಾವುದೋ ನೋಟಕ್ಕಾಗಿ ಕೌತುಕದಿಂದ ಕೈ ಚಾಚಿಕೊಂಡು ಮುನ್ನುಗುತ್ತಿದ್ದಾರೆ. ಈ ರೀತಿ ಮುನ್ನುಗ್ಗುವದು ಏತಕ್ಕಾಗಿ ಎಂಬುದಕ್ಕೆ ಕವಿಯ ಉತ್ತರ ಹೀಗಿದೆ-"ಹಲನಾಡಿನ ಸುಖ ಶಾಂತಿಗೆ ಸತತ ಮುನ್ನುಗ್ಗುವರು, ಶುಭ ಶಾಂತಿಯ ಸೌಜನ್ಯವನೆಲ್ಲೆಲ್ಲಿಯೂ ಬಿತ್ತುವರು"(ಸೀತಾರಾಮಯ್ಯ ವಿ. ೧೯೯೦, ಪುಟ-೧೭೧)ಎಂದು ಹೀಗೆ ದೇಶವು ಸ್ವತಂತ್ರಗೊಂಡ ನಂತರದ ಕಾಲದಲ್ಲಿ ಏನೆಲ್ಲಾ ಸಾಧಿಸಬಹುದೆಂಬ ಹುಮ್ಮಸ್ಸು, ಆಶೆ, ಆಕಾಂಕ್ಷೆ ಭರವಸೆಗಳೇ ತುಂಬಿ ತುಳುಕುತ್ತಿದ್ದ ಮನೋಭಾವನೆಯನ್ನು ಇದರಲ್ಲಿ ವ್ಯಕ್ತಪಡಿಸಿರುವರು.

ವಿ.ಸೀ.ಯವರು 'ಜಾಗೃತ ಭಾರತ' ಕವನದಲ್ಲಿ, ದೇಶ ಸ್ವಾತಂತ್ರ್ಯಗೊಂಡನಂತರ ನಾಡನ್ನು ಕಟ್ಟಲು ಎಲ್ಲರೂ ಕಾಡನ್ನು ಕಡಿದು ವ್ಯವಸಾಯ ಯೋಗ್ಯ ಭೂಮಿಯನ್ನಾಗಿ ಮಾಡುವಂತೆ ಪರಿಶ್ರಮ ಪಟ್ಟರು. ನಾಡನ್ನು ಕಟ್ಟುವಲ್ಲಿ ಎದುರಾದ ಸಮಸ್ಯೆಗಳನ್ನು ಕವಿ ಹೀಗೆ ಹೇಳಿದ್ದಾರೆ:

"ನೆರೆ ಬಂದ ಕಾಲದಲಿ ಕಸಕಡ್ಡಿ ಕೊಳೆಗಳೇ ಮೊದಲು ಕಂಡಾವು
ತಾಳು, ತಿಳಿವುದು ನೀರು, ನೊರೆ ಮೊರೆಗಳಿಳಿದು ಕೊಳೆಗಳನು ಕೊಚ್ಚಿ ಕಳೆದು
ನಿದ್ರೆಯಿಂ ದಾಸ್ಯದಿಂದೆಚ್ಚರಿಸಿದಾ ಅವರೇ ಈ ಎಚ್ಚರವನ್ನೂ ಜಗಕೆ ಪೇಳುತಿಹರು."
(ಸೀತಾರಾಮಯ್ಯ ವಿ. ೧೯೯೦, ಪುಟ-೫೨೧)

ದೇಶವು ಸ್ವಾತಂತ್ರ್ಯಗೊಂಡ ಹೊಸದರಲ್ಲಿ ಉದ್ಭವಗೊಂಡ ಹಲವಾರು ಸಮಸ್ಯೆಗಳನ್ನು ನದಿಗೆ ಒಮ್ಮೆಲೇ ನೆರೆಬಂದಾಗ ಕಸ-ಕಡ್ಡಿ-ಕೊಳೆಗಳೇ ಮೊದಲು ತೇಲಿಬರುವದಕ್ಕೆ ಹೋಲಿಸಿದ್ದಾರೆ. ಸ್ವಲ್ಪ ಸಮಯ ತಾಳಿದರೆ ನೆರೆ ಇಳಿದು ನೀರು ತಿಳಿಯಾದಂತೆ, ಸ್ವಲ್ಪ ದಿನಕಳೆದರೆ ಸಮಸ್ಯೆಗಳು ಪರಿಹಾರವಾಗಿ ಸರಿಹೋಗುತ್ತದೆಂದು ಪರದಾಸ್ಯದಿಂದ ಬಿಡುಗಡೆ ಮಾಡಿಸಿದ ಹಿರಿಯರೇ ಜನರಿಗೆ

ಎಚ್ಚರಿಕೆ ಕೊಡುತ್ತಿದ್ದಾರೆ-ಎಂಬುದು ಸ್ವತಂತ್ರಗೊಂಡಾಗ ದೇಶದಲ್ಲಿ ಮತೀಯ-ಜನಾಂಗಿಕ-ಗಲಭೆ, ಗಡಿಗಾಗಿ ಹೊಡೆದಾಟ-ಬಡಿದಾಟ-ಮುಂತಾದ ಸಮಸ್ಯೆಗಳ, ತೊಳಲಾಟದಲ್ಲಿದ್ದ ಜನತೆಗೆ ಸ್ವಾತಂತ್ರ್ಯ ಚಳುವಳಿಯಲ್ಲಿದ್ದ ರಾಷ್ಟ್ರೀಯ ನಾಯಕರೇ ಶಾಂತಿ, ಸಹನೆಯಿಂದ ಇರಲು ಕರೆಕೊಡುವದನ್ನು, ಸಾಂತ್ವನ ಹೇಳಿರುವದನ್ನು ಸೂಚಿಸುತ್ತದೆ.

ಈಗ ನಾಡನ್ನು ಕಟ್ಟುವ ಕಾರ್ಯ ನಡೆದಿದೆ. ಇದು ಮುಂದೆ ಭವಿಷ್ಯದಲ್ಲಿ ಪೂರ್ಣಗೊಳ್ಳುವ ಕನಸಿನ ಭಾರತವನ್ನು ಹೀಗೆ ಕಂಡಿದ್ದಾರೆ. "ನಾಳೆ ಭಾರತದಲ್ಲಿ ಒಬ್ಬರೊಬ್ಬರ ಸುಲಿವ ದಾಸ್ಯತನವಿಲ್ಲ ಅತಿಧನಕೆ ಬಿಗಿ ಸೊಕ್ಕಿ ನುಡಿವಂಕೆ ಅಬ್ಬರಗಳಿಲ್ಲ ಕೆಲರ್ಗಾಗಿ ಹಲರನ್ನು ಬಲಿಯೀವ ದುಡಿಸಲಿಹ ರಕ್ಕಸತೆಯಿಲ್ಲ"(ಸೀತಾರಾಮಯ್ಯ ವಿ. ೧೯೯೦, ಪುಟ-೫೨೦) ಎಂದು ಈ ಕವನ ನವ ಭಾರತದ ನಿರ್ಮಾಣಕ್ಕೆ ಜನಜಾಗೃತವಾಗಲಿ ಎಂಬ ಸಂದೇಶ ಸಾರುತ್ತದೆ. 'ನಮ್ಮ ನಾಡು'-ಕವನದಲ್ಲಿಯೂ ವಿ.ಸೀ. ಯವರು ನಾಡನ್ನು ಕಟ್ಟಿದ ಬಗೆಯನ್ನು ಸೊಗಸಾಗಿ ಬಣ್ಣಿಸಿದ್ದಾರೆ. ಕಾಡನ್ನು ಕಡಿದು ಹಸನುಮಾಡಿ ಕಾಳು, ಕಾಯಿ, ಬೀಜ ಬಿತ್ತಿ ಬೆಳೆಸಿ, ಹಾಲು-ಹಣ್ಣು ಜೇನು, ಹೂ ಹುಲುಸಾಗಿ ಬೆಳೆಯುವಂತೆ ಮಾಡಿರುವದಾಗಿ ಬಿಂಬಿಸಿದ್ದಾರೆ. ನಾಡೆಂದರೆ ಬೇರೆ ಯಾರೋ ಆಗಿರದೆ ನಾವು-ನೀವೇ ಆಗಿದ್ದೇವೆ. ಈ ನಾಡು ಇದರ ಸೌಭಾಗ್ಯ ಕೂಡಾ.

"ಇದು ನಿಮ್ಮದು, ಇದು ನಮ್ಮದು
ಇದು ನಮ್ಮೆಲ್ಲರದು
ಭಾರತರದು ಸೌಭಾಗ್ಯ
ಅಂದಿಂದಿಗು ಎಂದೂ"

(ಸೀತಾರಾಮಯ್ಯ ವಿ. ೧೯೯೦, ಪುಟ-೩೩೮)

ವಿನಾಕಾರಣ ನಮ್ಮ ನಾಡನ್ನು ಅನ್ಯರು ಹಿಂದು-ಮುಂದೆ ಮೂದಲಿಸಿ ಕೂಗುವರು, ಕೂಗಲಿ, ಅದಕ್ಕೆ ನಾವು ಕಿವಿಗೊಡುವುದಿಲ್ಲ ಆದರೆ ಅವರು ನಮ್ಮ ದೇಶದ ಒಂದು ಹೆಜ್ಜೆ ನೆಲವನ್ನು ತುಳಿದರೆ ಬದುಕಿ ಹೋಗಲಾರರು-ಎಂದು ಕವಿ ಗುಡಗಿದ್ದಾರೆ.

ಸಿದ್ಧಯ್ಯ ಪುರಾಣಿಕರು ಮಕ್ಕಳಿಗಾಗಿ ರಚಿಸಿದ 'ಮುಂದಕ್ಕೆ ಸಾಗು'-ಕವನದಲ್ಲಿ ಮಕ್ಕಳಿಗೆ- 'ಮುಂದಕ್ಕೆ ಮುಂದಕ್ಕೆ ಮುಂದಕ್ಕೆ ಸಾಗು ಭಾರತದ ನಿರ್ಮಾಣದಲಿ ಭಾಗಿಯಾಗು"-ಎದು ಹೇಳಿರುವರು, ಅದೇ ರೀತಿ ನಮ್ಮ ನವ್ಯ ಭಾರತ'-ಕವನದಲ್ಲಿಯೂ ಮಕ್ಕಳಿಗೆ-

"ಕಟ್ಟು ಬನ್ನಿ ಕೆಳೆಯರೆ
ನಮ್ಮ ನವ್ಯ ಭಾರತ
ಭವ್ಯ ದಿವ್ಯ ಭಾರತ
ಸರ್ವಶಕ್ತ ಭಾರತ

ಸಾರ್ವಭೌಮ ಭಾರತ"
(ಮರುಳಯ್ಯಸಾ.ಶಿ. (ಸಂ); ೧೯೮೧, ಪುಟ-೫೧೮)

-ಎಂದು ಸ್ವಾತಂತ್ರ್ಯೋತ್ತರ ನವಭಾರತ ನಿರ್ಮಾಣಕ್ಕೆ ಕರೆಕೊಟ್ಟಿದ್ದಾರೆ. ಸತ್ಯ, ಪ್ರೀತಿ, ಶಿವಪಥ-ತತ್ತ್ವಗಳಿಂದ ನಡೆದು, ರಾಷ್ಟ್ರದ ಸಮಸ್ಯೆಗಳ ವಿರುದ್ಧ ಹೋರಾಡಿ, ಪರಿಹರಿಸಿ ನವ್ಯ ಭಾರತ ನಿರ್ಮಾಣ ಮಾಡಬೇಕು. ಹಾಗೆ ನಿರ್ಮಾಣ ಮಾಡಿದ ಭಾರತವು-

"ಜಗಕೆ ಶಾಂತಿ ಸಾರುತ
ಜಗಕೆ ಬೆಳಕು ಬೀರುತ
ಮೆರೆಯಲೆಮ್ಮ ಭಾರತ"
(ಮರುಳಯ್ಯಸಾ.ಶಿ. (ಸಂ); ೧೯೮೧, ಪುಟ-೫೧೮)

-ಎಂದು ಆಶಿಸಿದ್ದಾರೆ. ಇಂದಿನ ಮಕ್ಕಳೇ ನಾಳಿನ ದೇಶದ ಪ್ರಜೆಗಳು; ಅಂತೆಯೇ ಅವರಿಗೆ ದೇಶದ ಬಗೆಗೆ ಅಭಿಮಾನ ಹೆಮ್ಮೆ ಮೂಡಿಸಿದ್ದಾರೆ. ಮಾನಸ ಸರೋವರ ಸಂಕಲನದ 'ರಾಷ್ಟ್ರ ರಾಜೇಶ್ವರಿ' ಕವನದಲ್ಲಿ ದಸರೆಯ ದಿನ ಕನ್ನಡ ರಾಜೇಶ್ವರಿಯನ್ನು ಆರಾಧಿಸುವ ಸಂದರ್ಭದಲ್ಲಿ ಭಾರತ ಮಾತೆಯ ಆರಾಧನೆಯನ್ನು ಮಾಡಿದ್ದಾರೆ. ಭಾರತದ ಪ್ರಜೆಗಳು ಮಣ್ಣು ಬೊಂಬೆಗಳಲ್ಲ, ವಜ್ರದೇಹಿಗಳು. ಭಾರತಮಾತೆಯ ನೆರಳಲಿ ದೊರೆಯುವ ನರಕವೂ ಸ್ವರ್ಗವೆನ್ನಿಸಿದೆ. ಸ್ವಾತಂತ್ರ್ಯ ಬಂದರೂ ಏನೆಲ್ಲಾ ಸಾಧಿಸಿದಂತಾಗಿಲ್ಲ. ಸಾಧನೆ ಮಾಡಬೇಕಾದದ್ದು ಇನ್ನೂ ಬಹಳವಿದೆ. ನಿಜವಾದ ಸ್ವಾತಂತ್ರ್ಯ ಹೋರಾಟ ಇನ್ನು ಮೇಲೆ ನಡೆಯಲಿದೆ. ಈ ಹೋರಾಟದಲ್ಲಿ ಎದುರಿಸಬೇಕಾದ-

"ವೈರಿಗಳು ಹೊರಗಿಲ್ಲ ಒಳಗಿಹರು,
ಅಡಗಿಹರು ನಮ್ಮಲ್ಲೆ ಎಲ್ಲೆಲ್ಲೂ
ಅವರೊಡನೆ ಯುದ್ಧ! ಬರಿಮೈಯು!
ಬರಿಹೊಟ್ಟೆ ಬರಿದಲೆಯು ಬರಿಮನೆಯು
ಬರಿ-ನೆರೆಯು ರುಜೆಯೊಡನೆ ತುಮುಲ ಯುದ್ಧ"
(ಮರುಳಯ್ಯಸಾ.ಶಿ. (ಸಂ); ೧೯೮೧, ಪುಟ-೫೫೦)

ಈ ಹೋರಾಟ ವ್ಯಕ್ತಿ ವಿರುದ್ಧವಲ್ಲ; ದಬ್ಬಾಳಿಕೆ, ಶೋಷಣೆ, ಬಡತನ, ವರ್ಗ-ಜಾತಿ-ಮತ ಕಲಹಗಳು, ಬರ-ನೆರೆಗಳ, ವಾಸ-ಉಪವಾಸಗಳ, ರೋಗ-ರುಜಿನುಗಳ-ಮುಂತಾದವುಗಳ ವಿರುದ್ಧ ನಿತ್ಯವೂ ಹೋರಾಟ ನಡೆಯಬೇಕಾಗಿದೆ.

ಸಿದ್ಧಯ್ಯ ಪುರಾಣಿಕರು (ಚರಗ ಸಂಕಲನದ) 'ಅಜೇಯವಾಗು ಭಾರತ!'-ಕವನದಲ್ಲಿ ದೇಶವನ್ನು ಗುಣಾಢ್ಯ, ಬಲಾಢ್ಯ, ಸಮೃದ್ಧ, ಅಬೇಧ್ಯ-ಅದಮ್ಯವಾಗಲೆಂದು ಹಾಡಿ ಹರಸಿದ್ದಾರೆ. ಇಲ್ಲಿಯ ಜಾತಿ, ದ್ವೇಷಾಗ್ನಿ, ಮೌಢ್ಯತಮ-ಇವುಗಳನ್ನು ಹೋಗಲಾಡಿಸಲು ಗರುಡ-ವರುಣ-ಅರುಣನಾಗಬೇಕೆಂದು ಕೇಳಿಕೊಂಡಿದ್ದಾರೆ. ಸ್ವಾತಂತ್ರ್ಯ ಯುಗದ ಸಮಾನತೆಯ ಭೇರಿಯಾಗಿ ದಲಿತರಿಗೆ

ಹರುಷವಾಗು, ಬಾಲವನಕೆ ವಸಂತವಾಗು, ಸಾಧನೆಯಲಿ ಅನಂತವಾಗಿ, ಶಕ್ತಿ-ಸಾಮರ್ಥ್ಯ ಹೊಂದಿ, ಉತ್ತರೋತ್ತರ ಅಭಿವೃದ್ಧಿಹೊಂದಿ 'ಅಜೇಯವಾಗು ಭಾರತ' ಎಂದು ಆಶಿಸಿದ್ದಾರೆ. 'ಅವಿಭಾಜ್ಯವಿರಲಿ ದೇಶ'-ಕವನದಲ್ಲಿ ಪ್ರತ್ಯೇಕತೆಯ ಕೂಗೆಬ್ಬಿಸುವವರನ್ನು ಖಂಡಿಸಿದ್ದಾರೆ. ಈಗಾಗಲೇ ಹಿಂದೊಮ್ಮೆ ಗಿರಿ ಸಮುದ್ರಗಳೇ ಒಂದುಗೂಡಿದ ದೇಶವನ್ನು ಕೊಯ್ದು ಎರಡು ರಾಷ್ಟ್ರಗಳನ್ನಾಗಿ ಮಾಡಿದೆವು. ಇನ್ನು ಪುನಃ ಆ ರೀತಿ ಮಾಡುವದು ಬೇಡ. ದೇಶದ್ರೋಹಿಗಳ, ವಿಧ್ವಂಸಕಾರಿ ಮತೀಯ, ದೇಶ ಭಕ್ಷರ-ಮುಂತಾದ ದೇಶ ಒಡೆಯುವ ವಿಚ್ಛಿದ್ರಕಾರಿ ಶಕ್ತಿಗಳನ್ನು ಸರ್ವನಾಶಮಾಡಬೇಕು. ಈಗಾಗಲೇ ಹಿಂದೆ ದಾಸ್ಯವನ್ನು ಅನುಭವಿಸಿದ್ದೇವೆ; ಇನ್ನು ಹೊಸದಾಸ್ಯ-ಪಾಶ ಬರುವದು ಬೇಡ. ಹಲವು ಧರ್ಮ ಭಾಷೆ-ಜನಾಂಗವಿದ್ದರೂ 'ನಾವೆಲ್ಲ ಒಂದೇ ಎನ್ನಿ', 'ಒಂದೇ ದೇಶವೆನ್ನಿ' ಅಲ್ಲದೇ 'ರಾಜ್ಯ ರಾಜ್ಯದಲಿ ವ್ಯಾಜ್ಯಸಹಜ': ಆದರೂ 'ಅವಿಬಾಜ್ಯವಿರಲಿ ದೇಶ!'-ಎಂದು ಈ ಕವನದಲ್ಲಿ ಭಾರತದ ಒಕ್ಕಟ್ಟನ್ನು, ಸಾರ್ವಭೌಮತ್ವನ್ನು ಕಾಯ್ದುಕೊಳ್ಳಲು ಸಾರಿದ್ದಾರೆ.

# ಅಧ್ಯಾಯ–ಐದು

## ನವೋದಯ ಕಾವ್ಯಗಳಲ್ಲಿ ಕನ್ನಡ ನಾಡು–ನುಡಿ

'ಕನ್ನಡ' ಎಂಬುದು ಒಂದು ಪ್ರದೇಶದ, ಭಾಷೆಯ ಹಾಗೂ ನಾಡಿನ ಹೆಸರೂ ಆಗಬಲ್ಲದು. ನವೋದಯ ಕಾವ್ಯಗಳಲ್ಲಿ ದೇಶಭಕ್ತಿ ವಿನ್ಯಾಸಗಳನ್ನು ನೋಡುವ ಸಂದರ್ಭದಲ್ಲಿ ದೇಶಭಕ್ತಿ ಅದು ನಾಡಭಕ್ತಿಯಾಗಿ ಪ್ರಾದೇಶಿಕ ಪರಿಧಿಯೊಳಗೆ ಅಂತರ್ಗತವಾಗುತ್ತದೆ. ನವೋದಯ ಕವಿಗಳ ಕಲ್ಪನೆಯಲ್ಲಿ 'ಜೈ ಭಾರತ ಜನನಿಯ ತನುಜಾತೆ ಜಯಹೆ ಕರ್ನಾಟಕ ಮಾತೆ' ಎಂಬಂಥ ಪದ್ಯಗಳನ್ನು ಗಮನಿಸಿದರೆ ಪ್ರಾದೇಶಿಕತೆಯ ನೆಲೆಯನ್ನು ಹೊಂದಿರುವುದು ಸ್ಪಷ್ಟವಾಗುತ್ತದೆ. 'ದೇಶ' ಎಂಬುದಕ್ಕೆ ನಾಡು ಪ್ರದೇಶಗಳೆಂಬ ಅರ್ಥಗಳಿರುವುದನ್ನು ನಾವಿಲ್ಲಿ ಸ್ಮರಿಸಿಕೊಳ್ಳಬಹುದು ಹಾಗಾಗಿ ನಾಡ ಪ್ರೇಮ, ದೇಶಪ್ರೇಮ, ದೇಶಭಕ್ತಿಗಳಿಗೆ ಕರುಳುಬಳ್ಳಿಯ ಸಂಬಂಧವಿದೆ. 'ನಾಡು ನನ್ನದು ಎನ್ನದ ಮಾನವನೆದೆಯದು ಸುಡುಗಾಡು' ಎನ್ನುವ ಕುವೆಂಪು ಅವರ ಮಾತುಗಳಲ್ಲಿ ನಾಡನಿಷ್ಠೆಯೇ ಇದೆ.

ಭಾರತ ಒಕ್ಕೂಟ ಪ್ರಜ್ಞೆಯ ಪ್ರತೀಕ ಈ ಪ್ರಜ್ಞೆಯಲ್ಲಿ ದೇಶ–ನಾಡುಗಳ (ದೇಶ–ರಾಜ್ಯಗಳ ಪ್ರತ್ಯೇಕವಿದೆ) ಮಧುರ ಬೆಸುಗೆಯ ಸಂಬಂಧಕ್ಕೆ ಮಾತ್ರ ಬೆಲೆಯಿದೆ. ಪರಸ್ಪರ ಪ್ರತ್ಯೇಕವಾಗಿ ವಿಭಜನೆಗೊಂಡು ನಿಂತುದು ನವೋದಯ ಕವಿಗಳಲ್ಲಿ ಕಾಣಸಿಗುವುದು. ಬೇಕಾದರೆ ವ್ಯವಸ್ಥೆಯ ವಿರುದ್ಧ ಆಕ್ರೋಶ ಮೊದಲಾದ ಅಭಿವ್ಯಕ್ತಿಗಳಲ್ಲಿ ವ್ಯಂಗ್ಯರ ನಡಿಗೆ ಇರಬಹುದು. ನವೋದಯ ಕವಿಗಳು ಕನ್ನಡ ನಾಡನ್ನು ಭಾರತಾಂಬೆಯ ಪಕ್ಕದಲ್ಲಿಟ್ಟು ನೋಡಬಯಸುತ್ತಾರೆ. ಈ ಹಿನ್ನೆಲೆಯಲ್ಲಿ ದೇಶಭಕ್ತಿ ಹಾಗೂ ನಾಡಪ್ರೇಮಗಳನ್ನು ನನ್ನ ಅಧ್ಯಯನದಲ್ಲಿ ಪ್ರೇರಕ, ಪೂರಕ, ಪೋಷಕವಾದವುಗಳೆಂದೆ ಪರಿಗಣಿಸಿ ಅಧ್ಯಯನ ಮಾಡಿರುವುದುಂಟು.

ಕನ್ನಡ ಮತ್ತು ಕರ್ನಾಟಕಕ್ಕೆ ಭವ್ಯ ಪರಂಪರೆ ಇದೆ. ಅವುಗಳ ಪ್ರಾಚೀನತೆ ದೊಡ್ಡದು. ಈ ಭೂಮಿಯ ಮೇಲೆ ಬದುಕುವುದನ್ನು ಬೆಳೆಯುವುದನ್ನು ಅವು ತೋರಿಸಿಕೊಟ್ಟಿವೆ. ಕನ್ನಡ ಭಾಷೆಯ ಜತೆಗೆ ಅದರ ಇತಿಹಾಸ ಹಾಗೂ ಸಂಸ್ಕೃತಿ ಬೆಳೆದುಕೊಂಡು ಬಂದಿವೆ. ಮನುಜ ಕುಲ ಒಂದೇ ಎನ್ನುವ ಆದರ್ಶವನ್ನು ಅದಿಕವಿ ಪಂಪನು ಕನ್ನಡ ಜನರ ಮನಸ್ಸಿನಲ್ಲಿ ಮೂಡಿಸಿದ್ದನು. ಜನರು ಎಲ್ಲಿಯೇ ಇದ್ದರೂ ಅವರು ಬೆಳೆಯಬೇಕೆಂಬ ಭಾವನೆ ಇರಿಸಿಕೊಂಡು ಕನ್ನಡಿಗರು ಬೆಳೆದಿದ್ದಾರೆ. ಶರಣರು, ದಾಸರು, ಕವಿಗಳು, ಸಮಾಜವನ್ನು ನಿರ್ಮಿಸುವ ಬೆಳಕನ್ನು ತೋರಿಸಿದರು.

"ಕನ್ನಡವೆನಿಪ್ಪಾ ನಾಡು ಚೆಲ್ವಾದುದು" ಎಂದು ಕವಿ ಅಂಡಯ್ಯ ಹಾಡಿದ್ದಾನೆ. ಈ ಕನ್ನಡ ನಾಡನ್ನು ಚೆಲುವಾಗಿ ಇರಿಸಿಕೊಂಡರೆ ಅದು ಚೆಲುವಾಗಿ ಉಳಿಯುತ್ತದೆ. ಅದು ಸುಂದರವಾಗಿ ಇರುವಂತೆ, ಉಳಿಯುವಂತೆ ನಾವು ಪ್ರಜ್ಞಾಪೂರ್ವಕ ಪ್ರಯತ್ನಗಳನ್ನು ಕೈಗೊಳ್ಳುತ್ತಲೇ ಹೋಗಬೇಕು. ಸೌಂದರ್ಯವನ್ನು ಕಾಪಾಡಿಕೊಳ್ಳುವುದು ಕೂಡಾ ಒಂದು ಕಲೆ ಆಗಿದೆ. ಕರ್ನಾಟಕದ ಸೌಂದರ್ಯವು ಅದರ ಸಮಗ್ರ ಅಭಿವೃದ್ಧಿಯಲ್ಲಿಯೇ ಇದೆ.

ಕರ್ನಾಟಕ ಎನ್ನುವುದು ಇಂದು ನಿನ್ನೆಯದಲ್ಲ ಕವಿಗಳು ಕವನಕಟ್ಟಿ ಹಾಡಿದ್ದಾರೆ. ದೊರೆಗಳು ರಾಜ್ಯ ಕಟ್ಟಿ ಆಳಿದ್ದಾರೆ. ಕನ್ನಡಿಗರು ನಾಗರಿಕ ಜೀವನವನ್ನು ಕಟ್ಟಿಕೊಂಡು ಬಂದಂದಿನಿಂದಲೂ, ಅದು ಅವರ ಬದುಕಿನಲ್ಲಿ, ಭಾವನೆಯಲ್ಲಿ, ಬೆಳೆದುಕೊಂಡು ಬಂದಿದೆ. ಅದು ಅವರ ಉಸಿರಿನ ಉಸಿರು, ರಕ್ತದ ರಕ್ತ, ಜೀವದ ಜೀವ, ಕನ್ನಡ ವಾಹಿನಿಯು ಜೀವವಾಹಿನಿಯಾಗಿ ಅವರ ಧಮನಿಗಳಲ್ಲಿ ಹರಿದು ಬಂದಿದೆ. ಈ ನೆಲದಲ್ಲಿ, ನಾಡಿನ ಬದುಕಿನಲ್ಲಿ ಕರ್ನಾಟಕದ ಹೆಸರು ಹಾಸುಹೊಕ್ಕಾಗಿ ಹೆಣೆದುಕೊಂಡಿದೆ.

ಪ್ರಾಚೀನ ಕಾಲದಲ್ಲಿ ಅಖಂಡ ಭಾರತೀಯ ಸಂಸ್ಕೃತಿ ಹೊಂದಿದ ಭಾರತೀಯರಿದ್ದರೇ ಹೊರತು ರಾಜಕೀಯವಾಗಿ, ಆಡಳಿತಾತ್ಮಕವಾಗಿ ಭಾರತ ಒಂದು ದೇಶವಾಗಿ ಅಸ್ತಿತ್ವವಿದ್ದಿರಲಿಲ್ಲ. ಅಂದಿನ ಕನ್ನಡ ನಾಡಿನ ರಾಜ್ಯ-ಸಾಮ್ರಾಜ್ಯಗಳು ಸ್ವತಂತ್ರ ದೇಶಗಳಾಗಿ, ಸಾರ್ವಭೌಮತ್ವ ಹೊಂದಿದ್ದವು. ಇಂದಿನಂತೆ ಒಕ್ಕೂಟ ವ್ಯವಸ್ಥೆಯಲ್ಲಿರುವ ರಾಜ್ಯಗಳಂತೆ ರಾಷ್ಟ್ರೀಯತೆ ಮತ್ತು ಪ್ರಾಂತಿಯತೆಗಳ ದ್ವಂದ್ವವಿದ್ದಿರಲಿಲ್ಲ.ಅಂದು ಇವೆರಡೂ ಅಲ್ಲದ 'ರಾಜಭಕ್ತಿ' ಇತ್ತು. ಪ್ರಾಚೀನ ಕನ್ನಡ ಕವಿಗಳು ತಮ್ಮನ್ನಾಳ್ವ ರಾಜರಿಗೆ, ರಾಜ್ಯಕ್ಕೆ, ಸಾಮ್ರಾಜ್ಯಕ್ಕೆ, ರಾಜಭಕ್ತಿ-ರಾಜನಿಷ್ಠೆಯನ್ನು ತೋರಿಸುವದರ, ಮೂಲಕ, ನಾಡು-ನುಡಿಯ ಅಭಿಮಾನ ಪ್ರೇಮವನ್ನು ಹೊಂದಿದ್ದರು. ಇದನ್ನು ನಾವು ಕನ್ನಡದ ಮೊದಲ ಕೃತಿಯಾದ ಕವಿರಾಜಮಾರ್ಗದಲ್ಲಿ "ಕಾವೇರಿಯಿಂದಮಾ ಗೋದಾವರಿ ವರಮಿರ್ದ ನಾಡದಾ ಕನ್ನಡದೊಳ್"-ಎನ್ನುವಲ್ಲಿ ತನ್ನ ಕಾಲದಕನ್ನಡ ನಾಡಿನ ಮೇರೆಗಳನ್ನು ಹೇಳಿದ್ದಾನೆಯೇ ಹೊರತು ಇಡೀ ಭಾರತವನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳಿಲ್ಲಾ. ಕನ್ನಡ ನಾಡಿನ ಅರಸರು, ಉತ್ತರದಲ್ಲಿ ಹಿಮಾಲಯದವರೆಗೂ, ಪಶ್ಚಿಮದ ಸಮುದ್ರದವರೆಗೂ ದಿಗ್ವಿಜಯ ಸಾಧಿಸಿರುವದನ್ನು ಅಥವಾ ರಾಜ್ಯದ ಗಡಿ ವಿಸ್ತರಿಸುವುದನ್ನು ಕನ್ನಡಿಗರ ಸಾಹಸ, ಶೌರ್ಯ, ಹಿರಿಮೆ, ಎಂದು, ಕನ್ನಡ ನಾಡಿನ ಮೇರೆಗಳೆಂದೂ ವರ್ಣಿಸಿರುದುಂಟು. ಕನ್ನಡ ಕವಿಗಳು ಅಖಂಡ ಭಾರತೀಯ ಸಂಸ್ಕೃತಿಯ ಪರಂಪರೆಗೆ ಸೇರಿದ ಪೌರಾಣಿಕ ವಸ್ತುವನ್ನು ತಮ್ಮನ್ನಾಳ್ವ ರಾಜರು, ಸಾಮಂತರಿರಲಿ, ಚಕ್ರವರ್ತಿಗಳಿರಲಿ, ಅವರಿಗೆ ಆ ರಾಜ್ಯಕ್ಕೆ ಸಮಿಕರಿಸಿಯೋ, ಆರೋಪಿಸಿಯೋ ರೂಪಾಂತರಿಸಿಯೋ ಕಾವ್ಯ ರಚಿಸಿರುವುದುಂಟು. ಮೂಲ ವಸ್ತುವಿನಲ್ಲಿಯ ಉತ್ತರ ಭಾರತದ ನದಿಯನ್ನೊ, ಪ್ರದೇಶವನ್ನೊ, ಕನ್ನಡ ನಾಡಿನ ಪ್ರದೇಶಕ್ಕೊ, ನದಿಗೋ ಆರೋಪಿಸಿ ವರ್ಣಿಸಿರುವರು. ಇಲ್ಲವೆ ಆ ಪಾತ್ರ, ಆ ಸನ್ನಿವೇಶವನ್ನೊ, ಕನ್ನಡ ನಾಡಿನ ಇಂಥಹ ನದಿಗೆ, ಇಂಥಹ

ಪ್ರದೇಶಕ್ಕೆ ಬಂದಿತ್ತೆಂದು ವರ್ಣಿಸಿರುವುದುಂಟು. ಹೀಗೆ ಮೂಲವಸ್ತುವನ್ನು ಸ್ವೀಕರಿಸಿರುವುದರ ಮೂಲಕ ಸಾಂಸ್ಕೃತಿಕವಾಗಿ ಭಾರತೀಯತ್ವವನ್ನು ಒಪ್ಪಿಕೊಂಡು ಅದನ್ನು ತಮ್ಮ ನಾಡಿಗೆ, ಪ್ರದೇಶಕ್ಕೆ, ಭಾಷೆಗೆ ರೂಪಾಂತರಿಸಿ ಸೀಮಿತಗೊಳಿಸಿಕೊಳ್ಳುವಲ್ಲಿ ತಮ್ಮ ನಾಡು–ನುಡಿಯ ಪ್ರೇಮವನ್ನು ಮೆರೆದಿರುವರು. ಈ ರೀತಿಯ ಕನ್ನಡದ ಆದಿ ಕವಿ ಪಂಪನು ಮಹಾಭಾರತದ ವಸ್ತುವನ್ನು ಕನ್ನಡ ನಾಡಿನ ತನ್ನ ಆಶ್ರಯದಾತ ಅರಸನಾದ ಅರಿಕೇಸರಿಗೆ ಸಮೀಕರಿಸಿ 'ವಿಕ್ರಮಾರ್ಜುನ ವಿಜಯ'ವನ್ನು ರಚಿಸಿರುವನು. ಇದೇ ರೀತಿ ಮುಂದೆ ಬಂದ ಕನ್ನಡ ಕವಿಗಳ ಕಾವ್ಯ ಪರಂಪರೆಯಲ್ಲಿ ನಾಡು–ನುಡಿಯ ಬಗೆಗೆ ತಮ್ಮ ಅಭಿಮಾನವನ್ನು ವ್ಯಕ್ತಪಡಿಸಿರುವದನ್ನು ಕಾಣುತ್ತೇವೆ.

ಆಧುನಿಕ ಕನ್ನಡ ಸಾಹಿತ್ಯ ಅದರಲ್ಲೂ ನವೋದಯ ಸಾಹಿತ್ಯ ಇದಕ್ಕೆ ಹೊರತಾಗಿಲ್ಲ. ಕನ್ನಡ ನಾಡು–ನುಡಿಯ ಅಭಿಮಾನ, ಕಾಳಜಿ, ಹಿತಾಸಕ್ತಿಯನ್ನು ನವೋದಯ ಕಾವ್ಯವೂ ಹೊಂದಿತ್ತು. ನವೋದಯ ಸಾಹಿತ್ಯದ ಕಾಲಘಟ್ಟವು ಬಹಳ ಸಂದಿಗ್ಧಕಾಲ. ಏಕಕಾಲದಲ್ಲಿಯೇ ರಾಷ್ಟ್ರೀಯ ಚಳುವಳಿಯೊಂದಿಗೆ ಕರ್ನಾಟಕ ಏಕೀಕರಣ ಚಳುವಳಿಯೂ ಈ ಕಾಲದಲ್ಲಿಯೇ ನಡೆದಿತ್ತೆಂಬುದನ್ನು ಮರೆಯುವಂತಿಲ್ಲ. ಬ್ರಿಟಿಷರು ಹೈದರಾಬಾದ್ ನಿಜಾಮ್ ಮತ್ತು ಮರಾಠರೊಂದಿಗೆ ಮೈತ್ರಿಮಾಡಿಕೊಂಡು ಕ್ರಿ.ಶ. ೧೭೯೯ ರಲ್ಲಿ ಟಿಪ್ಪು ಸುಲ್ತಾನನನ್ನು ಸೋಲಿಸಿ, ಮೈಸೂರ ರಾಜ್ಯವನ್ನು ಗೆದ್ದುಕೊಂಡು, ಇದನ್ನು ಹೈದರಾಬಾದ ನಿಜಾಮನಿಗೆ ಮತ್ತು ಮರಾಠರಿಗೆ ಹಂಚಿ ಮೈಸೂರು ಅರಸರಿಗೆ ಬಿಟ್ಟು ಕೊಟ್ಟರು. ಅಂದಿನಿಂದ ಕರ್ನಾಟಕವು ಉಳಿದ ಮೈಸೂರ ಭಾಗವನ್ನು ಮುಂಬೈ, ಹೈದ್ರಾಬಾದ, ಮೈಸೂರ, ಮದ್ರಾಸ್,–ಎಂದೂ ವಿಭಜನೆಗೊಂಡುದನ್ನು ಕಾಣುತ್ತೇವೆ. ಇಷ್ಟೇ ಅಲ್ಲದೇ ಇನ್ನೂ ಮುಂದೆ ಒಟ್ಟು ಸುಮಾರು ೨೦ ಆಡಳಿತ ವಿಭಾಗಗಳಲ್ಲಿ ಹರಿದು ಹಂಚಿಹೋಗಿತ್ತು.

ಕನ್ನಡ ಪ್ರದೇಶವಾದ ಮುಂಬೈ ಕರ್ನಾಟಕದಲ್ಲಿ ಆಡಳಿತ, ಶಿಕ್ಷಣ ಮಾಧ್ಯಮ ಎಲ್ಲವೂ ಮರಾಠಿಮಯವಾಗಿತ್ತು. ಇದನ್ನು 'ದಕ್ಷಿಣ ಮರಾಠಾ ದೇಶ'ವೆಂದು ಕರೆಯುತ್ತಿದ್ದರು. ಹೈದರಾಬಾದ ಕರ್ನಾಟಕದಲ್ಲಿ ತೆಲುಗು, ಉರ್ದು ಭಾಷೆಗಳ ಪ್ರಾಬಲ್ಯವುಂಟಾಗಿತ್ತು. ಮದ್ರಾಸ್ ಕರ್ನಾಟಕದಲ್ಲಿ ತಮಿಳು, ಇನ್ನೂ ಹಲವು ಭಾಗಗಳಲ್ಲಿ ಕೊಂಕಣಿ, ಮಲೆಯಾಳಂ, ಭಾಷೆಗಳ ಹಾವಳಿಯಾಗಿತ್ತು. ಕನ್ನಡ ಭಾಷೆ, ಕನ್ನಡಿಗರ ಅಳಿವು ಉಳಿಯುವಿನ ಅಸ್ತಿತ್ವದ ಪ್ರಶ್ನೆವುಂಟಾಯಿತು. ಈ ಸಮಯದಲ್ಲಿ ಕನ್ನಡಿಗರಿದ್ದರೇ ಹೊರತು ಅವರದೇ ಆದ ನಾಡು ಅಸ್ತಿತ್ವದಲ್ಲಿರಲಿಲ್ಲ. ಆಗ ಕನ್ನಡದ ಬುದ್ಧಿಜೀವಿಗಳು, ರಾಷ್ಟ್ರೀಯ ಹೋರಾಟದಲ್ಲಿಯ ರಾಜಕೀಯ ಮುಂದಾಳುಗಳು, ವಿದ್ಯಾಂವತರು, ಸಾಹಿತಿಗಳು, ಯೋಚಿಸಿ ಬ್ರಿಟೀಷರ ಆಧೀನದಲ್ಲಿರುವ ಕನ್ನಡದ ಮಾತನಾಡುವ ಪ್ರದೇಶಗಳನ್ನೆಲ್ಲಾ ಒಂದೇ ಆಡಳಿತದಲ್ಲಿ ತರಬೇಕೆಂದು ಬೇಡಿಕೆ ಸಲ್ಲಿಸಿದರು; ಹೋರಾಟವನ್ನು ಆರಂಭಿಸಿದರು. ಇದಕ್ಕಾಗಿ ಹಲವಾರು ಸಂಘ ಸಂಸ್ಥೆಗಳನ್ನು ಆರಂಬಿಸಿದರು, ಪತ್ರಿಕೆಗಳ ಮೂಲಕ, ಸಭೆ–ಸಮಾರಂಭಗಳ ಮೂಲಕ ಜನತೆಯನ್ನು ಹೋರಾಟಕ್ಕೆ ಸಂಘಟಿಸಿದರು. ಡಾ॥ ಆರ್.ಆರ್. ದಿವಾಕರರು ಹೇಳುವಂತೆ

ಅಂದು–"ಕರ್ನಾಟಕದ ಕಾರ್ಯಕರ್ತರು ಎರಡು ಕನಸು ಕಂಡಿದ್ದರು, ಎರಡು ಗುರಿ ಹೊಂದಿದ್ದರು; ಮತ್ತು ಎರಡು ಭೂಪಟಗಳನ್ನು ತಮ್ಮ ಮುಂದೆ ಹೊಂದಿದ್ದರು. ಒಂದು ಸ್ವತಂತ್ರ ಭಾರತ ಮತ್ತೊಂದು ಕರ್ನಾಟಕದ ಏಕೀಕರಣ."(ರಾಮಲಿಂಗಪ್ಪ ಎಚ್, ೧೯೯೭, ಪುಟ–೫೫೦)

ದೇಶದ ಸ್ವಾತಂತ್ರ್ಯ ಚಳುವಳಿಯೊಂದಿಗೆ ಅದಕ್ಕೆ ಪೂರಕವಾಗಿಯೇ ಕರ್ನಾಟಕ ಏಕೀಕರಣ ಚಳುವಳಿಯನ್ನು ನಡೆಸಿಕೊಂಡು ಬಂದರು. ಇದು ರಾಷ್ಟ್ರೀಯ ಚಳುವಳಿಗೆ ಚ್ಯುತಿಯನ್ನಾಗಲಿ, ನ್ಯೂನತೆಯನ್ನಾಗಲಿ, ತರಲಿಲ್ಲ. ಅದಕ್ಕೆ ವಿರೋಧವಾಗಿಯೂ ಇದ್ದಿರಲಿಲ್ಲ. ಸ್ವಾತಂತ್ರ್ಯ ಚಳುವಳಿಯ ಒಂದು ಭಾಗವಾಗಿಯೇ ನಡೆಸಿಕೊಂಡು ಬಂದರು. ಒಡೆದು ಆಳುವ ನೀತಿಯನ್ನು ಅನುಸರಿಸಿಕೊಂಡು ಬಂದು ಇಡೀ ದೇಶವನ್ನೇ ಆಕ್ರಮಿಸಿಕೊಂಡಿದ್ದ ಬ್ರಿಟೀಷರು ತಾವಿರುವವರೆಗೂ ಏಕಿಕರಣಗೊಳಿಸಲಿಲ್ಲ.

ಸ್ವಾತಂತ್ರ್ಯ ಪೂರ್ವದಲ್ಲಿ ರಾಷ್ಟ್ರೀಯ ಕಾಂಗ್ರೆಸ್‌ನ ನಾಯಕರು ಏಕೀಕರಣ ಚಳುವಳಿಯ ಪರವಾಗಿದ್ದರು ಮತ್ತು ಸ್ವಾತಂತ್ರ್ಯಗೊಂಡನಂತರ ತಮ್ಮ ಮೊದಲ ಆದ್ಯತೆಯ ಕೆಲಸವೆಂದರೆ–ಭಾಷಾವಾರು ಪ್ರಾಂತ್ಯಗಳನ್ನು ಪುನರ್ರಚಿಸುವದಾಗಿ ಭರವಸೆ ಕೊಟ್ಟಿದ್ದರು. ಆದರೆ ದೇಶ ಸ್ವತಂತ್ರಗೊಂಡ ಮೇಲೆ, ಈಗೊಮ್ಮೆ ಮತೀಯ ಆಧಾರದ ಮೇಲೆ ದೇಶ ವಿಭಜನೆ ಆಗಿದೆ. ಇನ್ನು ಭಾಷೆಯ ಆಧಾರದ ಮೇಲೆ ಮತ್ತೆ ದೇಶ ವಿಭಜನೆಗೆ ಪ್ರಚೋದನೆಯಾದಿತೆಂಬ ಭಯದಿಂದ ಈ ಕಾರ್ಯವನ್ನು ಕೈಕೊಳ್ಳಲು ಧೈರ್ಯಮಾಡಲಿಲ್ಲ. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಕನ್ನಡಿಗರು ಏಕೀಕರಣ ಚಳುವಳಿಯನ್ನು ತೀವ್ರಗೊಳಿಸಿದರು. ಕೊನೆಗೆ ಜನರ ಹೋರಾಟಕ್ಕೆ ಮಣಿದ ಕೇಂದ್ರಸರಕಾರ, ಫಜಲ–ಅಲಿ ಆಯೋಗದ ಶಿಫಾರಸ್ಸಿನ ಮೇರೆಗೆ ೧೯೫೬ ನವ್ಹಂಬರ೧ ರಂದು ಕರ್ನಾಟಕ ರಾಜ್ಯೋದಯವಾಯಿತು. ಆದರೆ ಮೈಸೂರಿನ ರಾಜನಿಷ್ಠೆಯುಳ್ಳ ಕೆಲವರ ಹಠಮಾರಿತನದಿಂದಾಗಿ ರಾಜ್ಯಕ್ಕೆ 'ವಿಶಾಲ ಮೈಸೂರ'–ಎಂಬ ಹೆಸರನ್ನೇ ಇಡಲಾಯಿತು. ಮತ್ತು ಮೈಸೂರ ಮಹಾರಾಜರನ್ನೇ ರಾಜಪಾಲರನ್ನಾಗಿ ಮಾಡಲಾಯಿತು. ಮುಂದೆ ಸಂವಿಧಾನ ಬದ್ಧವಾಗಿ ರಾಜ್ಯಪಾಲರನ್ನು ನೇಮಿಸಿಲಾಯಿತು. ಜನತೆಯ ಅಪೇಕ್ಷೆ ಹೋರಾಟದ ಮೇರೆಗೆ ೧೯೭೩ರ ನವ್ಹಂಬರ ೧ ರಂದು ರಾಜ್ಯಕ್ಕೆ 'ಕರ್ನಾಟಕ'ವೆಂದು ನಾಮಕರಣ ಮಾಡಲಾಯಿತು.

ರಾಜ್ಯೋದಯವಾದ ಮೇಲೂ ಕನ್ನಡ ನಾಡು–ನುಡಿ–ಗಡಿಯ ಹಲವಾರು ಜ್ವಲಂತ ಸಮಸ್ಯೆಗಳನ್ನು ಪರಿಹರಿಸಿ ನಾಡನ್ನು ಕಟ್ಟುವ ಕೆಲಸ ಮುಂದುವರೆಯಿತು. ರಾಜ್ಯೋದಯವಾಗುವಾಗ ಹಲವಾರು ಕನ್ನಡ ಪ್ರದೇಶಗಳು ಕೈಬಿಟ್ಟುಹೋಗಿದ್ದವು. ಮಹಾರಾಷ್ಟ್ರದೊಂದಿಗೆ ಗಡಿವಿವಾದವುಂಟಾಯಿತು. ಕೇಂದ್ರಸರಕಾರ ಗಡಿವಿವಾದ ಬಗೆಹರಿಸಲು ೧೯೬೬ ರಲ್ಲಿ ಮಹಾಜನ್ ಆಯೋಗ ನೇಮಿಸಲಾಯಿತು. ಇದು ೧೯೬೭ ರಲ್ಲಿ ಒಪ್ಪಿಸಿದ ವರದಿಯಲ್ಲಿ ಈ ರೀತಿ ಶಿಫಾರಸ್ಸು ಮಾಡಿದೆ. ಮಹಾರಾಷ್ಟ್ರವು ಕೇಳಿದ್ದ ೮೧೪ ಗ್ರಾಮಗಳ ಪೈಕಿ ೨೬೪ ಗ್ರಾಮಗಳನ್ನು ಕರ್ನಾಟಕವು ಮಹಾರಾಷ್ಟ್ರಕ್ಕೆ ವರ್ಗಾಯಿಸಬೇಕು (ಇವುಗಳ ಒಟ್ಟು ಕ್ಷೇತ್ರ ೬೫೬.೩ ಚದರ ಮೈಲಿ, ಒಟ್ಟು ಜನಸಂಖ್ಯೆ

೩.೫೦ ಲಕ್ಷ). ಹೀಗೆ ಮಹಾಜನ ಆಯೋಗದ ಶಿಫಾರಸ್ಸಿನಂತೆ ಮಹಾರಾಷ್ಟ್ರವು ಪಡೆಯುವದಕ್ಕಿಂತ ಕೊಡುವದೇ ಹೆಚ್ಚಾಯಿತು. ಇದರ ಒತ್ತಡದಿಂದಾಗಿ ಕೇಂದ್ರ ಸರಕಾರ ಅದನ್ನು ಅನುಷ್ಠಾನಗೊಳಿಸಲಿಲ್ಲ.

ಕರ್ನಾಟಕ ರಾಜ್ಯೋದಯವಾದರೂ ಕನ್ನಡ ಭಾಷೆ ಇದರ ಉಸಿರಾಗಿಲ್ಲ. ಇದಕ್ಕಾಗಿ ಕನ್ನಡ ಪರ ಹೋರಾಟಗಳು ನಡೆದವು. ಪ್ರೌಢಶಾಲೆಗಳಲ್ಲಿ ಸಂಸ್ಕೃತವನ್ನು ಪ್ರಥಮ ಭಾಷೆಯಾಗಿ ಕಲಿಸಲಾಗುತ್ತಿತ್ತು. ಇದರ ಬಗ್ಗೆ ವಿವಾದ, ವಿರುದ್ಧ ಹೊರಾಟ ಆರಂಭವಾದವು. ಇದನ್ನು ಪರಿಹರಿಸಲು ರಾಜ್ಯ ಸರಕಾರವು, ೧೯೮೦ ರಲ್ಲಿ ಗೋಕಾಕ್ ಆಯೋಗ ರಚಿಸುತ್ತದೆ. ಇದು ತ್ರಿಭಾಷಾ ಸೂತ್ರಗಳಲ್ಲಿ ಕನ್ನಡಕ್ಕೆ ಕಡ್ಡಾಗೊಳಿಸಿ ಪ್ರಥಮ ಭಾಷೆಯ ಸ್ಥಾನಕ್ಕೆ ಶಿಫಾರಸ್ಸು ಮಾಡುತ್ತದೆ. ಇದರ ಅನುಷ್ಠಾನಕ್ಕೂ ಹೋರಾಟ ನಡೆಯುತ್ತದೆ. ೧೯೮೨ರಲ್ಲಿ ಇದನ್ನು ಜಾರಿಗೆ ತರುತ್ತದೆ. ಸಂಸ್ಕೃತ ಪರವಾದಿಗಳು ಮತ್ತು ಕೆಲವು ಅಲ್ಪಸಂಖ್ಯಾತರು ಇದರ ವಿರುದ್ಧ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಲ್ಲಿಸುತ್ತಾರೆ. ೧೯೮೯ ರಲ್ಲಿ ಶಾಲೆಗಳಲ್ಲಿ ಕನ್ನಡ ಕಡ್ಡಾಯಕ್ಕೆ ಹೈಕೋರ್ಟನಿಂದ ಒಪ್ಪಿಗೆ, ೧೯೯೩ ರಲ್ಲಿ ಮಾತೃಭಾಷಾ ಮಾಧ್ಯಮ ಕಡ್ಡಾಯಕ್ಕೆ ಸುಪ್ರೀಂ ಕೊರ್ಟ ಒಪ್ಪಿಗೆ ಕೊಡುತ್ತದೆ.

ಕರ್ನಾಟಕಕ್ಕೆ ನೆರೆರಾಜ್ಯಗಳಿಂದ ವಲಸೆ ಬರುತ್ತಿರುವುದು ಇತ್ತಿಚೆಗೆ ಹೆಚ್ಚಾಗಿದೆ. ಇವರು ಬೆಂಗಳೂರಿನಂತಹ ನಗರಗಳಿಗೆ ಬಂದು ಉದ್ಯೋಗ ದೊರಕಿಸಿಕೊಂಡು ಕನ್ನಡಿಗರಿಗೆ ಉದ್ಯೋಗ ದೊರೆಯದಂತೆ ಮಾಡಿದ್ದಾರೆ. ಇದಕ್ಕಾಗಿ ೧೯೮೪ ರಲ್ಲಿ ಸರೋಜಿನಿ ಮಹಿಷಿಸಮಿತಿ ರಚಿಸಲಾಯಿತು. ಇದು ಕೈಗಾರಿಕಾ ಘಟಕಗಳಲ್ಲಿ ಮತ್ತು ಇತರ ಸಂಸ್ಥೆಗಳಲ್ಲಿನ ಉದ್ಯೋಗಗಳಲ್ಲಿ ಕನ್ನಡಿಗರಿಗೆ ಆದ್ಯತೆ ಕೊಡಬೇಕೆಂದು ಶಿಫಾರಸ್ಸು ಮಾಡಲಾಯಿತು. ೧೯೮೮ರಲ್ಲಿ ಕನ್ನಡಿಗರ ಉದ್ಯೋಗ ಸಮಿತಿಯನ್ನು ರಚಿಸಿಲಾಯಿತು. ಮಹಿಷಿ ವರದಿಯನ್ನು ೧೯೯೫ ರಲ್ಲಿ ಜಾರಿಗೆ ತರಲಾಯಿತು. ಇತ್ತೀಚೆಗೆ ಕನ್ನಡ ಅಭಿವೃದ್ಧಿ ಪ್ರಾಧಿಕಾರ ಶಿಫಾರಸ್ಸಿನಂತೆ ಸರಕಾರಿ ಹುದ್ದೆಗಳಲ್ಲಿ ೧ರಿಂದ ೧೦ನೇ ತರಗತಿಯವರೆಗೆ ಕನ್ನಡ ಮಾದ್ಯಮದಲ್ಲಿ ಕಲಿತ ಕನ್ನಡಿಗರಿಗೆ ಶೇ.೫. ರಷ್ಟು ಹುದ್ದೆಗಳನ್ನು ಕಾಯ್ದಿರಿಸಲಾಗುವುದೆಂದು ಹೇಳಿದೆ. ಸರಕಾರವು ಆಡಳಿತದಲ್ಲಿಯೂ ಕನ್ನಡ ಭಾಷೆಯನ್ನು ತರಲು ಮುಂದಾಯಿತು. ೧೯೬೩ ರಲ್ಲಿ ಕರ್ನಾಟಕ ರಾಜ್ಯ ಭಾಷಾ ಅಧಿನಿಯಮ ಜಾರಿಯಾಯಾತು. ಇಲ್ಲಿಂದ ಮುಂದೆ ಆಡಳಿತದ ವಿವಿಧ ಹಂತಗಳಲ್ಲಿ ಕನ್ನಡವನ್ನು ಅನುಷ್ಠಾನಗೊಳಿಸಲಾಯಿತು. ೧೯೬೮ರಲ್ಲಿ ತಾಲೂಕು ಮಟ್ಟದಲ್ಲಿ, ೧೯೭೦ರಲ್ಲಿ ಉಪವಿಭಾಗ ಮಟ್ಟದಲ್ಲಿ, ೧೯೭೨ ರಲ್ಲಿ ಜಿಲ್ಲಾ ಮಟ್ಟದಲ್ಲಿ, ೧೯೭೪ರಲ್ಲಿ ಮ್ಯಾಜಿಸ್ಟ್ರೇಟ ನ್ಯಾಯಾಲಗಳಲ್ಲಿ, ೧೯೭೮ ರಲ್ಲಿ ಸಿವಿಲ್ ನ್ಯಾಯಾಲಯಗಳಲ್ಲಿ, ೧೯೭೯ರಲ್ಲಿ ಸೆಶನ್ಸ್ ನ್ಯಾಯಾಲಯಗಳಲ್ಲಿ ಕನ್ನಡ ಭಾಷಾ ಬಳಕೆಗೆ ಆದೇಶಿಸಲಾಯಿತು. ೧೯೮೩ ರಲ್ಲಿ ಸಚಿವಾಲಯದ ಆಡಳಿತದಲ್ಲಿ ಕನ್ನಡ ಕಡ್ಡಾಯ ಮಾಡಲಾಯಿತು. ವರ್ಷ ಕನ್ನಡ ಭಾಷಾ ಸಮಿತಿ ರಚಿಸಲಾಯಿತು. ೧೯೮೫ರಲ್ಲಿ ಸಮಗ್ರ ಕನ್ನಡ ಆಡಳಿತ ಭಾಷಾ ವರ್ಷ ಪ್ರಾರಂಭ ಮಾಡಲಾಯಿತು. ೧೯೯೦ರಲ್ಲಿ ರಾಜ್ಯ ಸರಕಾರ ಆಜ್ಞೆ ಹೊರತುಪಡಿಸಿ, ಕೇಂದ್ರ ಸರಕಾರದ ಕಛೇರಿ ಮತ್ತು ಹೊರ ರಾಜ್ಯದ

ಕಛೇರಿಗಳೊಡನೆಯೂ ಪತ್ರವ್ಯವಹಾರಗಳನ್ನು ಹೊರತುಪಡಿಸಿ ಉಳಿದೆಲ್ಲಾ ಆಡಳಿತ ವ್ಯವಹಾರ ಕನ್ನಡದಲ್ಲಿರಬೇಕು; ಇದನ್ನು ಉಲ್ಲಂಘಸಿದವರ ಮೇಲೆ ಕಾನೂನು ಕ್ರಮತೆಗೆದುಕೊಳ್ಳಲಾಗುವದೆಂದು ಆದೇಶಿಸಲಾಯಿತು. ೧೯೮೫ ರಲ್ಲಿ ಕರ್ನಾಟಕದಲ್ಲಿರುವ ಎಲ್ಲ ವಾಣಿಜ್ಯ ಮತ್ತು ವ್ಯವಹಾರ ಸಂಸ್ಥೆಗಳ ನಾಮಫಲಕಗಳು ಕನ್ನಡದಲ್ಲಿ ಇರಬೇಕೆಂದು ಆಜ್ಞೆ ಹೊರಡಿಸಲಾಯಿತು.

ಗಡಿನಾಡಿನ ಸಮಸ್ಯೆಗಳನ್ನು ಬಗೆಹರಿಸಲು ಸರಕಾರ ೧೯೮೪ರಲ್ಲಿ ಗಡಿಸಲಹಾಸಮಿತಿ ರಚಿಸಲಾಯಿತು. ಇದನ್ನು ಮುಂದೆ ೧೯೮೫ರಲ್ಲಿ, ಕನ್ನಡ ಕಾವಲು ಸಮಿತಿಯಲ್ಲಿ ವಿಲೀನಗೊಳಿಸಲಾಯಿತು. ಬೇರೆ ಬೇರೆ ಇಲಾಖೆಗಳು, ಸಾರ್ವಜನಿಕ ಉದ್ದಿಮೆಗಳು, ಸ್ಥಳೀಯ ಸಂಸ್ಥೆಗಳು–ಮುಂತಾದವುಗಳು ಸರಕಾರದ ಭಾಷಾ ನೀತಿಯನ್ನು ಅನುಷ್ಠಾನಗೊಳಿಸಿರುವದರ ಪರಿಶೀಲನೆ ನಡೆಸಲು, ಆಡಳಿತ ಭಾಷೆಯಾಗಿ ಕನ್ನಡವನ್ನು ಜಾರಿಗೆ ತರುವಲ್ಲಿ ಇರುವ ಸಮಸ್ಯೆಗಳಿಗೆ ಪರಿಹಾರ ಸಲಹೆ ಸೂಚಿಸಲು, ಆಡಳಿತದ ಪೂರಕ ಸಾಹಿತ್ಯ ರಚಿಸಲು, ಅಧಿಕಾರಿಗಳಿಗೆ ಕನ್ನಡ ತರಬೇತಿ ಮತ್ತು ಸೇವಾ ಪರೀಕ್ಷೆಗಳ ಪಠ್ಯ ರಚಿಸಲು–ಮುಂತಾದ ವಿಷಯಗಳಲ್ಲಿ ಸರಕಾರಕ್ಕೆ ಸಲಹೆ ಸೂಚನೆ ನೀಡಲು, ಸರಕಾರ ೧೯೯೨ ರಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರ ರಚಿಸಿತು. ಇದು ಕನ್ನಡ ಭಾಷೆಯನ್ನು ಬೆಳೆಸುವಲ್ಲಿ ಉಳಿಸುವಲ್ಲಿ ಉತ್ತಮ ಕೆಲಸಮಾಡುತ್ತಿದೆ.

ಹೀಗೆ ರಾಜ್ಯ ಸರಕಾರ, ಸಂಸ್ಥೆ–ಸಮಿತಿ–ಪ್ರಾಧಿಕಾರ–ಕಾನೂನು, ಸ್ಥಾಪಿಸುವ–ರಚಿಸುವ ಮೂಲಕ, ಅನುಷ್ಠಾನ–ಆಜ್ಞೆ–ಆದೇಶ ಹೊರಡಿಸುವುದರ ಮೂಲಕ ತನ್ನ ರಾಜಕೀಯ ಇಚ್ಛಾಶಕ್ತಿಯನ್ನು ಕನ್ನಡ ಭಾಷೆಯ ಬೆಳವಣಿಗೆಗೆ, ಉತ್ತಮ ಕಾರ್ಯಗಳನ್ನು ಕೈಗೊಂಡು ಕನ್ನಡಿಗರ ಆಸೆ–ಅಪೇಕ್ಷೆಗೆ, ಜನಪರ ಕಾಳಜಿಗೆ ಸ್ಪಂದಿಸುತ್ತ ಬಂದಿದೆ.

ಇವುಗಳಷ್ಟೆ ಅಲ್ಲದೆ ಕನ್ನಡ ಸಾಹಿತ್ಯ ಪರಿಷತ್ತು, ಅಕಾಡೆಮಿಗಳು, ಕರ್ನಾಟಕ ವಿದ್ಯಾವರ್ಧಕ ಸಂಘ, ಕನ್ನಡ ಶಕ್ತಿಕೇಂದ್ರ, ಇನ್ನು ಹಲವಾರು ಕನ್ನಡ ಪರ ಸಂಘ ಸಂಸ್ಥೆಗಳು, ವ್ಯಕ್ತಿಗಳು, ಬುದ್ಧಿಜೀವಿಗಳು, ಸಮಸ್ತ ಕನ್ನಡಿಗರೂ ಹೋರಾಟ ನಡೆಸಿರುವರು, ಸ್ಪಂದಿಸಿರುವರು; ನಾಡು ನುಡಿಗಾಗಿ ಶ್ರಮಿಸಿರುವರು.

ನವೋದಯ ಸಾಹಿತಿಗಳು ಇದಕ್ಕೆ ಹೊರತಾಗಿರಲಿಲ್ಲ. ಈ ಹಿಂದೆ ನೋಡಿದಂತೆ ತಮ್ಮ ಕಾವ್ಯಗಳಲ್ಲಿ ನವೋದಯ ಸಾಹಿತಿಗಳು. ದೇಶಾಭಿಮಾನ, ದೇಶಭಕ್ತಿ, ದೇಶಪ್ರೇಮ, ರಾಷ್ಟ್ರೀಯ ಚಳುವಳಿ, ರಾಷ್ಟ್ರದ ಹಿತಾಸಕ್ತಿ, ಕಾಳಜಿಯನ್ನು ಇಟ್ಟುಕೊಂಡು ಅಪ್ಪಟ ರಾಷ್ಟ್ರೀಯತೆಯನ್ನು ತೋರ್ಪಡಿಸಿದಂತೆಯೇ, ಕನ್ನಡ ನಾಡು–ನುಡಿಯ ಅಭಿಮಾನ ಪ್ರೇಮ, ಭಕ್ತಿಯನ್ನು ಮೆರೆದಿರುವರು. ಕರ್ನಾಟಕ ಏಕೀಕರಣ ಚಳುವಳಿಗೆ ಸಾಹಿತ್ಯದ ಮೂಲಕ ಜನತೆಗೆ ಕರೆಕೊಟ್ಟಿರುವುದಲ್ಲದೆ ನೇರವಾಗಿ ಹೋರಾಟವನ್ನು ಮಾಡಿರುವರು. ಸಾಹಿತ್ಯವು ಜನತೆಗೆ ಸ್ಫೂರ್ತಿಯಾದಂತೆ, ಹೋರಾಟವೂ

ಸಾಹಿತಿಗಳಿಗೆ ಪ್ರೇರಣೆಯಾಯಿತು. ನಂತರವೂ ಕನ್ನಡ ನಾಡು-ನುಡಿಪರ ಹೋರಾಟಕ್ಕೂ ಇದೇ ರೀತಿ ಸ್ಪಂದಿಸಿದ್ದಾರೆ. ನಾಡು-ನುಡಿಯ ಬಗೆಗೆ ಅಪಾರ ಕಾಳಜಿ ಹಿತಾಸಕ್ತಿಯನ್ನು, ಶ್ರೇಯೋಭಿವೃದ್ಧಿಗಾಗಿ ಹೋರಾಡಿರುವರು. ಹೋರಾಟಕ್ಕೆ ಸಾಹಿತ್ಯದ ಮೂಲಕ ಜನತೆಗೆ ಪ್ರಚೋದಿಸಿರುವರು; ಕನಸನ್ನು ಕಂಡಿರುವರು. ಅದನ್ನು ನನಸು ಮಾಡಲು ಶ್ರಮಿಸಿರುವರು. ಶ್ರಮಿಸುವಂತೆ ಜನತೆಗೆ ತಮ್ಮ ಸಾಹಿತ್ಯದ ಮೂಲಕ ಕರೆಕೊಟ್ಟಿರುವರು. ಹೀಗೆ ರಾಷ್ಟ್ರೀಯತೆಯೊಂದಿಗೆ ಈ 'ಉಪರಾಷ್ಟ್ರೀಯತೆ' ಅಥವಾ 'ಪ್ರಾಂತೀಯತೆ'ಯನ್ನು ಹೊಂದಿರುವರು. ಇದು ರಾಷ್ಟ್ರೀಯತೆಗೆ ವಿರೋಧವಾಗಿ ಇದ್ದಿರಲಿಲ್ಲ. ಕನ್ನಡ ನವೋದಯ ಕವಿಗಳು ನಾಡನ್ನು ಭಾರತದ ಒಂದು ಅಂಗವೆಂದೇ, ಕಂಡಿದ್ದಾರೆಯೇ ಹೊರತು ಪ್ರತ್ಯೇಕವಾಗಿಯಲ್ಲ. ಇನ್ನು ಮುಂದುವರೆದು ಕನ್ನಡ ನಾಡನ್ನು ಭಾರತದ ಹಿರಿಯ ಮಗಳೆಂದು, ತಾಯಿ-ಮಗಳ ಅನ್ಯೋನ್ಯ ಸಂಬಂಧವನ್ನು ಕಲ್ಪಿಸಿರುವರು. ಆ ರೀತಿಯ ಭಾವನೆಯನ್ನು ಹೊಂದಿರುವರು. ಈ ಆರೋಗ್ಯಕರವಾದ ಪ್ರಾಂತೀಯತೆ ಅಥವಾ ಉಪರಾಷ್ಟ್ರೀಯತೆ ಇಲ್ಲದೆ ರಾಷ್ಟ್ರೀಯತೆ ಭಾವನೆ ಮೂಡದು. ರಾಷ್ಟ್ರೀಯತೆಗೆ ಇದೇ ಮೊದಲ ಸೋಪಾನ. ಕನ್ನಡಿಗರ ಭಾರತೀಯತ್ವಕ್ಕೆ ಕರ್ನಾಟಕತ್ವ ಪೂರಕವೂ, ಪ್ರೇರಕವೂ ಆಗಿದೆ.

ನವೋದಯ ಕವಿಗಳ ಕಾವ್ಯಗಳಲ್ಲಿ ಈ ರೀತಿಯ ಕನ್ನಡ ನಾಡು- ನುಡಿಯ ಅಭಿಮಾನ, ಕಾಳಜಿ, ಹಿತಾಸಕ್ತಿಯನ್ನು ನಾಡು-ನುಡಿಯನ್ನು ಕಟ್ಟುವ ಹಂಬಲ, ಅಪೇಕ್ಷೆಯನ್ನು ಯಾವ ರೀತಿ ವ್ಯಕ್ತಪಡಿಸಿದ್ದಾರೆಂಬುದನ್ನು ಈ ಮುಂದೆ ನೋಡಲಾಗಿದೆ.

ಪಂಜೆ ಮಂಗೇಶರಾಯರ 'ಹುತ್ತರಿಯ ಹಾಡು' ಕೊಡಗಿನ ನಾಡಗೀತೆಯೆನಿಸಿಕೊಂಡಿದೆ. ಏಕೀಕರಣ ಸಂದರ್ಭದಲ್ಲಿ, (ಈಗಲೂ ಆಗಾಗ) ಪ್ರತ್ಯೇಕ ರಾಜ್ಯಕ್ಕಾಗಿ ಕೂಗೆಬ್ಬಿಸುತ್ತಿದ್ದ ಕೊಡಗಿನವರನ್ನು ಅಖಂಡ ಕರ್ನಾಟಕದಲ್ಲಿ ಉಳಿಸಿಕೊಳ್ಳಲು ಭಾವೈಕ್ಯತೆಯನ್ನು ಈ ಪದ್ಯದಲ್ಲಿ ಬೆಸೆದಿದ್ದಾರೆ.

"ನಮ್ಮೊಡಲ್ ಬಿಡಲಮ್ಮದು
ವಿಧಿಯ ಮಾಟದ ಕೊಡಗಿದು
ಮೊದಲೆ ನಮ್ಮದು ಕೊಡಗಿದು
ಕದಲದೆಮ್ಮನು ಬೆಡಗಿದು"
(ಶ್ರೀಕಂಠಯ್ಯ ಬಿ.ಎಂ. (ಸಂ); ೧೯೬೫, ಪುಟ-೧೨೦)

ಇದನ್ನೇ ಸಮಗ್ರ ಕರ್ನಾಟಕ ದೃಷ್ಟಿಯಿಟ್ಟುಕೊಂಡು ರಚಿಸಿದ್ದರೆ ಇನ್ನು ಉತ್ತಮವೆನಿಸುತ್ತಿತ್ತು. ಗೋವಿಂದ ಪೈಯವರು "ಕನ್ನಡಿಗರತಾಯಿ" ಕವನದಲ್ಲಿ ಕನ್ನಡ ತಾಯಿಗೆ ಪ್ರತ್ಯಕ್ಷಳಾಗಿ ಹರಸಬೇಕೆಂದೂ, ತನು-ಮನ-ನುಡಿಗಳೆಲ್ಲವೂ ಕನ್ನಡಮಯವಾದ ನಮ್ಮನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿಕೊಂಡಿರುವರು. ಪರಭಾಷಾ ವ್ಯಾಮೋಹಿಗಳನ್ನು ಕುರಿತು-

"ತನ್ನ ಮರೆಯ ಕಂಪನಯದವನೆ ಹೊರಗೆ ಹುಡುಕುವ
ಮೃಗದ ಸೇಡು ನಮ್ಮ ಪಾಡು ಪರರ ನುಡಿಗೆ ಮಿಡುಕುವ!
ಕನ್ನಡ ಕಸ್ತೂರಿಯನ್ನ
ಹೊಸತುಸಿರಿಂ ತೀಡಿದನ್ನ
..........................................................................
ಹೊಸ ಸುಗಂಧದೊಸಗೆಯಿಂದ ಜಗದಿ ಹೆಸರ ಹಬ್ಬಿಸು!"
(ಶ್ರೀಕಂಠಯ್ಯ ಬಿ.ಎಂ. (ಸಂ); ೧೯೯೫, ಪುಟ-೧೦೭)

ಪರಭಾಷಾ ವ್ಯಾಮೋಹಿಗಳಿಗೆ ಕನ್ನಡ ಕಸ್ತೂರಿಯ ಉಸಿರನ್ನು ನೀಡಿ ನಿನ್ನ ಸುಗಂಧದ ಪರಿಮಳವನ್ನು ಜಗತ್ತಿನಲ್ಲಿ ಬಿತ್ತುವಂತೆ ಹರಸಬೇಕೆಂದು ಕೇಳಿಕೊಂಡಿದ್ದಾರೆ. ಮಾತೃಭಾಷೆ ಕನ್ನಡದಲ್ಲಿ ಕಲಿತದ್ದು ಮಾತ್ರ ವಿದ್ಯೆ, ಪರಭಾಷೆಯಲ್ಲಿ ಕಲಿಯುವದು ಪರರ ನಾಲಗೆಯ ಎಂಜಲು ಸವಿದಂತೆ. ಇದು ಬಹಳ ಸವಿಯೆ? ಎಂದು ಪ್ರಶ್ನಿಸಿರುವರು.

ಶಾಂತ ಕವಿಗಳು (ಸಕ್ಕರಿ ಬಾಳಾಚಾರ್ಯ) ಕನ್ನಡ ನಾಡು-ನುಡಿಯ ಬಗೆಗೆ ಹಗಲಿರುಳೂ ಶ್ರಮಿಸಿದ್ದಾರೆ. ಹಲವಾರು ಕೀರ್ತನೆ, ಪದ್ಯಗಳಲ್ಲಿ ನಾಡು-ನುಡಿಯ ಚಿಂತಿಸಿದ್ದಾರೆ. ಜನತೆಯಲ್ಲಿ ಅಭಿಮಾನ ತುಂಬಲು ಗತಕಾಲದ ವೈಭವವನ್ನು ಕುರಿತು ವರ್ಣಿಸಿರುವರು. ಜನತೆಯನ್ನು ನಾಡು-ನುಡಿಗಾಗಿ ಶ್ರಮಿಸಲು ಪ್ರೇರೆಪಿಸಿದ್ದಾರೆ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಐತಿಹಾಸಿಕ ವಸ್ತುವನ್ನು ಸಮಕಾಲೀನ ಕರ್ನಾಟಕ ಏಕೀಕರಣ ಹೋರಾಟಕ್ಕೆ ಸಮೀಕರಿಸಿ "ಶ್ರೀ ವಿದ್ಯಾರಣ್ಯ ವಿಜಯ" ಕೀರ್ತನೆ ರಚಿಸಿರುವರು. ಇದರಲ್ಲಿಯ ವಿದ್ಯಾರಣ್ಯ, ಹರಿಹರ ಪಾತ್ರಗಳ ಮೂಲಕ ಗತಕಾಲದ ವೈಭವವನ್ನು ನೆನಪಿಸಿ ನಾಡು-ನುಡಿಯ ಪ್ರೇಮವನ್ನು ಜಾಗೃತಮಾಡಿದ್ದಾರೆ. ಇದರಲ್ಲಿ ಕೇಳಪ್ಪ, ಪಾತ್ರಗಳು ಸಮಕಾಲೀನ ನಾಡಿನ ಹೆಳಪ್ಪ ಜನತೆಯ ಪ್ರತಿಮೆಗಳಾಗಿದ್ದಾರೆ. 'ಕೇಳಪ್ಪ' ಉತ್ಕಟಾಭಿಮಾನಿಯಾದರೆ 'ಹೇಳಪ್ಪ' ಕೂಪಮಂಡೂಕ. ಇವರ ಪ್ರಸಿದ್ಧ ಕವನ "ರಕ್ಷಿಸು ಕರ್ನಾಟಕದೇವಿ" ಪದ್ಯವೂ ಇದರಲ್ಲಿದೆ.

ಕೀರ್ತನೆಯ ಆರಂಭದ ಉಪದೇಶದಲ್ಲಿ 'ನಿನ್ನ ವಸ್ತುವಂನೋಡಂ ನೋಡಂ"-ಎಂದು ನಾಡಿನ ಸೊಬಗನ್ನು ಬಣ್ಣಿಸಿರುವರು. ಕೇಳಪ್ಪನು, ನಿನ್ನ ವಸ್ತುವನ್ನು ನೋಡಿ ತಿಳಿಸಲು ಹೇಳಪ್ಪನಿಗೆ ಸೂಚಿಸುತ್ತಾನೆ. ಆಗ ಹೇಳಪ್ಪನು ಹೊಲ, ಮನೆ, ಹೆಂಡತಿ, ಮಕ್ಕಳು, ಧನ, ಧಾನ್ಯಗಳು-ಇವೇ- ತನ್ನ ವಸ್ತುವುವೆಂಬುದನ್ನು ತಿಳಿಸುತ್ತಾನೆ. ಊರು ನಿನ್ನ ವಸ್ತು, ಊರು ದೇಶದಲ್ಲಿರುವದರಿಂದ ದೇಶ ನಿನ್ನ ವಸ್ತು, ದೇಶ ಯಾವುದೆಂದರೆ ಭಾರತ ದೇಶ, ಇದು ಯಾರದೆಂದರೆ 'ನಮ್ಮದೀ ಭಾರತ', ಇದು ಎಂಥದೆಂದರೆ ಭಾವೀ ಸುಖ ಸಾಮ್ರಾಜ್ಯವೆಂಬ ಸತ್ ಫಲಗಳನ್ನು ಕೊಡುವ-'ಸರ್ವೋತ್ಕೃಷ್ಟ ನಂದನವನಂ' ಆದ ಈ ಭಾರತ ದೇಶದಲ್ಲಿಯೇ ನಿನ್ನ ವಸ್ತುವನ್ನು ತೋರಿಸುವ ವಸ್ತು (ಕನ್ನಡ ನಾಡು) ಇರುವದು. ಅದನ್ನು ದರ್ಶನದಿಂದಲೇ ಕಂಡುಕೊಳ್ಳಲು ಹೇಳಪ್ಪನಿಗೆ ಹೇಳುತ್ತಾನೆ. ಹೇಳಪ್ಪನು ವಿಶಾಲವಾದ ಈ ದೇಶದಲ್ಲಿ ಅಸಂಖ್ಯಾತ ವಸ್ತುಗಳಿವೆ. ಅದರಲ್ಲಿ ಹುಡುಕುವದು ಅಸಾಧ್ಯ. ಆ ವಸ್ತುವಿನ

ವಿಶೇಷ ಲಕ್ಷಣಗಳನ್ನು ಸೂಚಿಸಲು ತಿಳಿಸುತ್ತಾನೆ. ಕೇಳಪ್ಪನು-'ಪಂಚವರ್ಣಗಳ, ಪಂಚರೂಪಗಳ, ಪಂಚಸ್ಥಲಗಳ-ವೆಂದು-ಮುಂತಾಗಿ ಹೇಳಿದರೂ ಹೇಳಪ್ಪನಿಗೆ ತಿಳಿದುಕೊಳ್ಳಲು ಸಾಧ್ಯವಾಗುವದಿಲ್ಲ. ನೀನೇ ಹೇಳಬೇಕೆನ್ನುತ್ತಾನೆ. ಆಗ ಕೇಳಪ್ಪನು "ದಕ್ಷಿಣಕ್ಕೆ ಕಾವೇರಿ, ಉತ್ತರಕ್ಕೆ ಗೋದಾವರಿ, ಪಶ್ಚಿಮಕ್ಕೆ ಸಮುದ್ರ",-ವೆಂದು, ಹಿಂದೆ ಕವಿರಾಜಮಾರ್ಗಕಾರನು ಹೇಳಿದಂತೆ ಕನ್ನಡನಾಡಿನ ಮೇರೆಗಳನ್ನು ಹೇಳುತ್ತಾನೆ. ಭಾವೀ ಏಕೀಕೃತವಾಗುವ ಕರ್ನಾಟಕದ ಭೌಗೋಳಿಕ ರೂಪವನ್ನು ಶಾಂತಕವಿಗಳು ಕಲ್ಪಿಸಿಕೊಂಡಿರುವರು. ಈ ರೀತಿ ಹೇಳಿದ ಮೇರೆಗಳೊಳಗಿನ ಕನ್ನಡ ನಾಡು, ಮುಂಬೈ ಕರ್ನಾಟಕ, ಮದ್ರಾಸ್ ಕರ್ನಾಟಕ, ಹೈದರಾಬಾದ್ ಕರ್ನಾಟಕ, ಮೈಸೂರು, ಕೊಡಗು-ಹೀಗೆ ಹಲವಾರು ವಿಭಾಗಗಳಲ್ಲಿ ಹರಿದು ತುಂಡು ತುಂಡಾಗಿದೆ, ಇವುಗಳೆಲ್ಲವೂ ಕೂಡಿದಾಗ ನಿನ್ನ ಕನ್ನಡಿಯು ರೂಪಗೊಳ್ಳುತ್ತದೆ. ಹೀಗೆ ಒಟ್ಟುಗೂಡಿದಾಗ ಅದು-

"ಕರ್ನಾಟಕಮಿದು
ವರ್ಣನೀಯಮಿದೆ
ಕರ್ನಾಟಕ ದೇವಿಗೆ ನಮಿಸು"
(ಧಾರವಾಡಕರ ರಾ.ಯ. (ಸಂ); ೧೯೮೩, ಪುಟ-೬)

ಎಂದು ಹೇಳಪ್ಪನಿಗೆ ಹೇಳುತ್ತಾನೆ. ಇದೇ ಸಂದರ್ಭದಲ್ಲಿ "ರಕ್ಷಿಸು ಕರ್ನಾಟಕದೇವಿ ಸಂರಕ್ಷಿಸು ಕರ್ನಾಟಕದೇವಿ"-ಪ್ರಸಿದ್ಧ ಪದ್ಯದ ಮೂಲಕ ಕನ್ನಡ ನಾಡಿನ ಗತವೈಭವ, ಇತಿಹಾಸ, ಚರಿತ್ರೆ, ಸಂಸ್ಕೃತಿ, ರಾಜ್ಯ ನಾಡನ್ನು ಆಳಿದ ಅರಸು ಮನೆತನಗಳನ್ನು ಹೇಳುವುದರ ಜೊತೆಗೆ ಕನ್ನಡ ಮಾತೆಯನ್ನು ಹೀಗೆ ವರ್ಣಿಸಲಾಗಿದೆ:

"ಕದಂಬಾದಿ ಸಂಪೂಜಿತ ಚರಣೆ।
............................................
ಚಾಲುಕ್ಯಾಂಶುಕ ಶೋಭಾವರಣೆ
ಯಾದವ ಮಣಿ ಕಂಕಣಾಂಶು ಸುಂದರಿ"
(ಧಾರವಾಡಕರ ರಾ.ಯ. (ಸಂ); ೧೯೮೩, ಪುಟ-೧೦)

ಕೇಳಪ್ಪನು ಹೇಳಪ್ಪನಿಗೆ ಈಗಲಾದರೂ ನಿನ್ನ ಕನ್ನಡಿಯ ಭಾಗವನ್ನು ನೋಡಿ ಏನೇನು ಕಾಣುತ್ತದೆ-ಹೇಳೆನ್ನುತ್ತಾನೆ. ಹೇಳಪ್ಪನು, ಪುರಗಳು, ಗುಡಿಗೋಪುರಗಳು, ಪೂರ್ವದ ಅರಮನೆಗಳು, ಶೂರರ ಮನೆಗಳು, ಗರುಡಿ ಮನೆಗಳು, ನಾಗರಿಕರ ಮನೆಗಳು-ಇವುಗಳೆಲ್ಲ ಕುರುಹಿನ ರೂಪದಲ್ಲಿ ಕಾಣುತ್ತವೆ ಎನ್ನುವನು. ಕೇಳಪ್ಪನಿಗೆ ತಾನು ಇದುವರೆಗೆ ಆತನಲ್ಲಿ ಕನ್ನಡ ನಾಡಿನ ಬಗೆಗೆ ಅರಿವು ಮೂಡಿಸಬೇಕೆಂಬ ಸಂಕಲ್ಪ ಸಿದ್ಧಿಸಿತೆಂದು ಸಂತೋಷವಾಗುತ್ತದೆ. ಕನ್ನಡ ನಾಡು ಹಿಂದೊಮ್ಮೆ ವೈಭವದಿಂದ ಬಾಳಿ ಬದುಕಿದ ವಿಜಯನಗರ ಸಾಮ್ರಾಜ್ಯದ ಹೆಗ್ಗುರುತುಗಳನ್ನು ಕಂಡು ಹಿಡಿದನಲ್ಲಾ, ಕನ್ನಡ ನಾಡೆನ್ನುವದೊಂದು ಹಿಂದೆ ಇತ್ತು, ಈಗ ಇರಬೇಕೆಂಬ ಆಕಾಂಕ್ಷೆಯುಂಟಾಯಿತೆಂದು

ಹರ್ಷವಾಗುತ್ತದೆ. ಕೇಳಪ್ಪನು ಹಿಂದೆ ವೈಭವದಿಂದ ಮೆರೆದ ವಿಜಯನಗರ ಸಾಮ್ರಾಜ್ಯ ಸ್ಥಾಪಿಸಿದ ಘಟನೆಯನ್ನು ತಮ್ಮ ದಿವ್ಯ ದರ್ಶನದಿಂದ ಅದನ್ನು ಕಂಡುಕೊಳ್ಳುತ್ತಾನೆ. ಇಲ್ಲಿಂದ ಮುಂದೆ ವಿದ್ಯಾರಣ್ಯ, ಹರಿಹರರರ ಸಂಭಾಷಣೆ ನಡೆಯುತ್ತದೆ. ಹರಿಹರನು ವಿದ್ಯಾರಣ್ಯರಲ್ಲಿಗೆ ಹೋಗಿ ಮುಸ್ಲಿಂ ಅರಸರು ಭಾರತೀಯ ಅರಸರ ಮೇಲೆ ದಾಳಿ ಮಾಡಿ ಇಲ್ಲಿಯ ಸ್ತ್ರೀಯರ ಮೇಲೆ ನಾಗರಿಕರ ಮೇಲೆ ಶೋಷಣೆ-ದಬ್ಬಾಳಿಕೆ ಮಾಡಿ, ಗುಡಿ ಗೋಪುರ, ದೇವಾಲಯ, ಸಂಸ್ಕೃತಿಯನ್ನು ನಾಶಮಾಡುತ್ತಿರುವದನ್ನು ನಿವೇದಿಸಿಕೊಳ್ಳುತ್ತಾನೆ. ಇದು ತಪಸ್ಸು, ಮೋಕ್ಷಕ್ಕಿಂತ ನಮ್ಮತನವನ್ನು ಉಳಿಸಿಕೊಳ್ಳಲು ಪಾರತಂತ್ರ್ಯದ ಸಂಹಾರವೇ ಮುಖ್ಯ. ಅದಕ್ಕಾಗಿ ಸಾಮ್ರಾಜ್ಯ ಸ್ಥಾಪಿಸಲು-

"ಏಳು ಸಾಯಣ ಕಟ್ಟು ಗ್ರಂಥವ
ನೇಳು ಪಂಪಾಕ್ಷೇತ್ರಕೆ
ಗಾಳಿಗಂಟುಗಳೋದಿದೇತಕೆ
ಏಳು ಈ ಕ್ಷಣ ಮಾತ್ರಕೆ॥"
(ಧಾರವಾಡಕರ ರಾ.ಯ. (ಸಂ); ೧೯೮೩, ಪುಟ-೨೨)

ಎಂದು ಹರಿಹರನ ಮಂತ್ರಿ, ಸಾಹಿತಿ, ವಿದ್ವಾಂಸನು ಆದ ಸಾಯಣನಿಗೆ ವಿಜಯನಗರ ಸಾಮ್ರಾಜ್ಯ ಸ್ಥಾಪಿಸಲು ಪಂಪಾಕ್ಷೇತ್ರಕ್ಕೆ ನಡೆಯಲು ಹೇಳುತ್ತಾನೆ. ಇದು ಅಂದು ಸಾಹಿತಿಗಳಿಗೆ, ವಿದ್ವಾಂಸರಿಗೆ, ಯುವಕರಿಗೆ, ವಿದ್ಯಾರ್ಥಿಗಳಿಗೆ ಓದನ್ನು ತೊರೆದು ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಮತ್ತು ಏಕೀಕರಣ ಚಳುವಳಿಯಲ್ಲಿ ತೊಡಗಲು ಕರೆಯೊಡುತ್ತಿದ್ದುದನ್ನು ಧ್ವನಿಸುತ್ತದೆ.

ಸಾಮ್ರಾಜ್ಯ ಸ್ಥಾಪಿಸುವ ಕಾರ್ಯಸಿದ್ಧಿಯಾದ ಮೇಲೆ ವಿದ್ಯಾರಣ್ಯರು ಹರಿಹರನಿಗೆ ಇದು- "ಕರ್ನಾಟಕದ ಸಿಂಹಾಸನವಿದನೇರೈ, ಇದು ಸ್ವರಾಜ್ಯದ ಸದಭಿಮಾನ ಮಣಿ"-ಎಂದು ಹೇಳುತ್ತಾರೆ.

ಹೀಗೆ ಶಾಂತಕವಿಗಳು ಐತಿಹಾಸಿಕ ವಸ್ತುವನ್ನೊಳಗೊಂಡ ಈ ಕೀರ್ತನೆಯಲ್ಲಿ ಕನ್ನಡ ನಾಡನ್ನು ಕಟ್ಟುವ, ಏಕೀಕೃತ ಕರ್ನಾಟಕದ ಕನಸನ್ನು ಕಂಡಿರುವರು. ಮುಂದೆ ಅವರ ಕನಸು ನನಸಾಯಿತು.

ಶಾಂತಕವಿಗಳು ನಾಡು-ನುಡಿಯ ಬಗೆಗೆ ಅಪಾರ ಶ್ರಮಿಸಿದ್ದಾರೆ. ಧಾರವಾಡದಲ್ಲಿ ನಾಲ್ಕನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನ ನಡೆಸಲು ಊರೂರು ಅಲೆದಾಡಿ ಹಣ ಸಂಗ್ರಹಿಸಿದರು. ಆ ಸಂದರ್ಭದಲ್ಲಿ ರಚಿಸಿದ 'ಕನ್ನಡ ದಾಸಯ್ಯ'-ಪದ್ಯವು ಪ್ರಸಿದ್ಧವಾಗಿದೆ. 'ಬೇಡಲು ಕನ್ನಡ ದಾಸಯ್ಯ ಬಂದಿಹ ನೀಡಿರಮ್ಮಾ ತಡ ಮಾಡದಲ್ಲೆ-ಎಂದು ಹಾಡಿ ಹಣ ಸಂಗ್ರಹಿಸಿದರು. ತನಗಾಗಿ ಸ್ವಂತ ಹೊಟ್ಟೆ ಬಟ್ಟೆಗಾಗಿ ಭಿಕ್ಷೆ ಬೇಡಲು ಬಂದವನಲ್ಲ, ಅನ್ಯ ಭಾಷೆಗಳಂತೆ ಕನ್ನಡ ಭಾಷೆಗೂ ಸ್ಥಾನ ಮಾನ ಹೆಚ್ಚಿಸಲು ಹಣ ಕೂಡಿಸಲು ಬಂದವನು. ನೀವೆಲ್ಲ ಕನ್ನಡ ನಾಡಿನಲ್ಲಿ ಹುಟ್ಟಿ, ಕನ್ನಡದ ತೊಟ್ಟಿಲಲ್ಲಿ ಆಡಿ, ಕನ್ನಡದ ಜೋಗುಳವ ಕೇಳಿ ಬೆಳೆದವರು, ಕನ್ನಡದ ವಿದ್ಯೆಗಳಿಸಿ ಸಿರಿ-ಸಂಪತ್ತನ್ನು ಪಡೆದವರು. ಹೀಗಿರಲು ನೀವು ಕನ್ನಡಕ್ಕಾಗಿ ಹಣ ಕೊಡಬೇಕು. ನೀವು ಕೊಡದೇ ನಾನು ಹೋಗುವವನಲ್ಲವೆಂದು

ದಿಟ್ಟತನವನ್ನು ತೋರಿಸಿರುವರು. ಕೊಡುವವರು ಹೆಚ್ಚಿನ ಹಣ ಕೊಡಲೆಂದು "ಕೊಡ ಬಂದ ಕೈಗಳ ದಿಟ್ಟಿಸಿ ದಿಟ್ಟಿಸಿ ನೋಡಿ,ಪದಕಟ್ಟುವವನು"-ಎಂದಿರುವರು. ಈ ಸಂದರ್ಭದಲ್ಲಿ ಎಂಥೆಂಥವರು ಹಣ ಕೊಟ್ಟರೆಂಬುದನ್ನು ಹೀಗೆ ಬಣ್ಣಿಸಿರುವರು.

"ಚಿನ್ನದ ಕಡಗದ ಕೈ ಕಾಸನ್ನಿತ್ತಿತು
ರನ್ನದುಂಗುರದ ಕೈ ಇಲ್ಲೆಂದಿತು
ಹೊನ್ನವಂಕಿಯ ಕೈ ಸುಮ್ಮನೆ ಕುಳಿತಿತು
ಇನ್ನೊಂದು ಬಳೆಗೈ ಹಣ ಕೊಟ್ಟಿತು"
(ಶ್ರೀಕಂಠಯ್ಯ ಬಿ.ಎಂ. (ಸಂ); ೧೯೫೫, ಪುಟ-೧೪೩)

ಮಧ್ಯಮ ವರ್ಗದವರು ಮತ್ತು ಬಡವರು ಹಣ ಕೊಟ್ಟರು. ಶ್ರೀಮಂತರು ಕೊಡಲಿಲ್ಲ. ಅಂದರೆ ಕನ್ನಡ ನಾಡು-ನುಡಿಯ ಬಗೆಗೆ ಬಡವರಿಗೆ ಮತ್ತು ಮಧ್ಯಮ ವರ್ಗದವರಿಗೆ ಹೆಚ್ಚಿನ ಅಭಿಮಾನವಿತ್ತೆಂದು ಶಾಂತಕವಿಗಳು ತಮ್ಮ ಅನುಭವದಿಂದ ಕಂಡು ಕೊಂಡಿದ್ದಾರೆ.

ಆಂಗ್ಲ ಪದವೀಧರರು ಇಂಗ್ಲೀಷ್‌ನ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿ ಕನ್ನಡದ ಜ್ಞಾನ ಭಂಡಾರವನ್ನು ಕಾವ್ಯದ ಕ್ಷಿತಿಜವನ್ನು ವಿಸ್ತರಿಸಬೇಕೆಂಬುದು ಶಾಂತಕವಿಗಳ ಅಪೇಕ್ಷೆ. ಆದರೆ ಇಂಗ್ಲೀಷ್ ಓದು-ಬರಹ ಬಲ್ಲ ಕೆಲವು ವಿದ್ಯಾವಂತರು ಸಭೆ ಸಮಾರಂಭಗಳಲ್ಲಿ ಮಾತ್ರ ಪಾಲ್ಗೊಂಡು ನಾಡು-ನುಡಿಯ ಬಗೆಗೆ ದೊಡ್ಡ ದೊಡ್ಡ ಮಾತನಾಡುವ ಡಾಂಭಿಕ ಪ್ರಚಾರ ಪ್ರಿಯರನ್ನು ಕುರಿತು ಹೀಗೆ ಹೇಳಿರುವರು:

"ಎಲ್ಲಿರುವುದಭಿಮಾನ? ಕನ್ನಡಿಗರೇ! ಪೇಳಿ
ಸುಳ್ಳೆ ಬಡ ಬಡಿಸುವಿರಿ ಸಭೆಗಳಲ್ಲಿ॥
ಗುರು ಪರಿಶ್ರಮದಿನಾಂಗ್ಲೇಯ ಭಾಷೆಯ ಕಲಿತು
ಧರಿಸಿ ಪದವಿಗಳನುಪಜೀಸುವಿರೇ॥
ಹೊರತು ತದ್ಭಾಷೆಯುದ್ಗ್ರಂಥಗಳ ಕನ್ನಡದಿ
ಪರಿವರ್ತನೆಂಗೊಳಿಸಲಿಲ್ಲವಲ್ಲಾ."
(ಅನಂತನಾರಾಯಣ, ಎಸ್. ೧೯೯೧, ಪುಟ-೭೩)

೧೮-೧೯ನೇ ಶತಮಾನದಲ್ಲಿ ಕನ್ನಡ ಸಾಹಿತ್ಯವು ಬರಡು ಯುಗವನ್ನನುಭವಿಸಿತ್ತು. ಇದನ್ನು ಪರಿಹರಿಸಿಕೊಳ್ಳಲು ಅನ್ಯಭಾಷಿಗಳಿಂದ ಅನುವಾದ-ರೂಪಾಂತರ ಅವಶ್ಯವೆಂದು ಅರಿತ ಶಾಂತಕವಿಗಳಂತಹ ಹಿರಿಯ ಬುದ್ಧಿ ಜೀವಿಗಳು, ಅನ್ಯ ಭಾಷೆ ಬಲ್ಲವರು ಅದರಲ್ಲೂ ಇಂಗ್ಲೀಷ್ ಕಲಿತವರು ಆ ಭಾಷೆಯಲ್ಲಿನ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಲು, ರೂಪಾಂತರಿಸಲು ಹೇಳಿರುವರು. ಇವರ ಪ್ರಭಾವ, ಪ್ರೇರಣೆ, ಪ್ರೋತ್ಸಾಹದಿಂದಾಗಿ ೨೦ನೇ ಶತಮಾನದ ಆರಂಭದಲ್ಲಿ ಅನುವಾದ ರೂಪಾಂತರದ ಸುಗ್ಗಿಯೇ ನಡೆದು ಕನ್ನಡ ಸಾಹಿತ್ಯದ ದಿಗಂತ ವಿಸ್ತಾರವಾಯಿತು. ಕ್ರಿ.ಶ. ೧೮೮೦ರ

ಸುಮಾರಿನಲ್ಲಿ ಉತ್ತರ ಕರ್ನಾಟಕದಲ್ಲಿ ಮರಾಠಿ ಭಾಷೆಯ ಪ್ರಾಬಲ್ಯವಿದ್ದು ಇಲ್ಲಿ ಪ್ರದರ್ಶನಗೊಳ್ಳುವ ನಾಟಕ, ನಟರು, ಭಾಷೆ, ಎಲ್ಲವೂ ಮರಾಠಿಮಯವಾಗಿರುವದನ್ನು ಕಂಡು ಶಾಂತಕವಿಗಳು ೧೯೧೦ ರಲ್ಲಿ ರಚಿಸಿದ ಕವಿತೆಯಲ್ಲಿ ನೊಂದು ಹೀಗೆ ಹೇಳಿದ್ದಾರೆ.

"ಎಲ್ಲಿ ನೋಡಲು ಮರಾಠಿಯರ ನಾಟಕ ಕೀರ್ತಿ
ಎಲ್ಲಿ ನೋಡಲು ಮರಾಠಿಯರ ನಾಟಕದರ್ಥಿ
ಎಲ್ಲಿ ನೋಡಲು ಮರಾಠಿಯರ ನಾಟಕ ನಟರ ಮೂರ್ತಿಗಳ ಸಂಚಾರವು।
ಎಲ್ಲಿನೋಡಲು ನೋಡಲು ಮರಾಠಿಯರ ನಾಟಕದಾಟ
ಎಲ್ಲಿನೋಡಲು ನೋಡಲು ಮರಾಠಿಯರ ನಾಟಕದೂಟ
ಎಲ್ಲಿನೋಡಲು ನೋಡಲು ಮರಾಠಿಯರ ನಾಟಕಮಯಂ ತಾನಾಯ್ತು
ಕರ್ನಾಟಕಂ"
(ಧಾರವಾಡಕರ ರಾ.ಯ. (ಸಂ); ೧೯೮೩, ಪುಟ-೪)

ಸ್ವತಃ ನಾಟಕಕಾರರಾದ ಶಾಂತಕವಿಗಳು ಕನ್ನಡ ನಾಡಿನಲ್ಲಿಯೇ ತಮ್ಮಂತಹ ಕನ್ನಡ ನಾಟಕಕಾರರಿಗೆ, ನಾಟಕಗಳಿಗೆ, ನಟರಿಗೆ ಪ್ರಾಶಸ್ತ್ಯವಿಲ್ಲದಿರುವದನ್ನು ಕಂಡು, ಅನುಭವಿಸಿ ವ್ಯಥೆಪಟ್ಟಿರುವರು.

ಅಂದು ಇಂಗ್ಲೀಷ್‌ನ್ನು ಕಲಿತು ವಿದ್ಯಾವಂತರಾದ ಆಂಗ್ಲ ಪದವೀಧರರಾದ ಕನ್ನಡಿಗರೇ ಕನ್ನಡ ಭಾಷೆಯ ಬಗೆಗೆ ತಾತ್ಸರ ಹೊಂದಿದ ಕಾಲವದು. ಆ ವೇಳೆಯಲ್ಲಿ ಶಾಂತಕವಿಗಳ ಪ್ರಭಾವದಿಂದ ಆಂಗ್ಲ ಪದವೀಧರರಾದ ಕನ್ನಡಿಗರು ಕನ್ನಡ ನಾಡು-ನುಡಿಯ ಸೇವೆಗೆ ತೊಡಗುತ್ತಾರೆ. ಅಂಥವರಲ್ಲಿ ಪ್ರಮುಖರಾದವರೆಂದರೆ-ಆಲೂರ ವೆಂಕಟರಾಯರು, ಕಡಪಾ ರಾಘವೇಂದ್ರರಾಯರು, ನರಗುಂದ ರಾಮರಾಯರು-ಮುಂತಾದವರು. ಶಾಂತಕವಿಗಳು ಇದು ಕನ್ನಡ ನಾಡಿನ ಉದಯದ ಶುಭ ಲಕ್ಷಣವೆಂದೂ, ಇದನ್ನು-"ಬಯಬಯಸಿ ಮುದಕನಾದೆನ್ನ ಸಂಪ್ರಾರ್ಥನೆಗೆ ಪರಮಾತ್ಮನಿಂದೊಲಿದನೆನ್ನ ಭಾಗ್ಯಂ"-ಎಂದು ಕೊನೆಗೂ ದೇವರು ತನ್ನ ಪ್ರಾರ್ಥನೆಗೆ ಒಲಿದನೆಂದು ಹರ್ಷಗೊಂಡರು.

ಹುಯಿಲಗೊಳ ನಾರಾಯಣರಾಯರು ೧೯೨೪ ರಲ್ಲಿ ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಹಾಡಲು "ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು" ಎಂಬ ಗೀತೆಯನ್ನು ರಚಿಸಿದರು. ಇದನ್ನು ಅಧಿವೇಶನದಲ್ಲಿ ಧಾರವಾಡ ಗವಾಯಿ ಸುಬ್ಬರಾಯರು ಹಾಡಿದರು. ಇದು ನಾಡಿನ ಜನಮನ ಸೂರೆಗೊಂಡು ನಾಡಗೀತೆಯೊಂದು ಪ್ರಸಿದ್ಧವಾಯಿತು. ಕರ್ನಾಟಕ ಏಕೀಕರಣ ಚಳುವಳಿಯ ಸಂದರ್ಭದಲ್ಲಂತೂ ಕನ್ನಡಿಗರಿಗೆ ಉದ್ಘೋಷ ಮಂತ್ರವಾಗಿತ್ತು.

"ರಾಜನ್ಯ ರಿಪು ಪರಶುರಾಮನಮ್ಮನ ನಾಡು
ಆ ಜಲಧಿಯನೆ ಜಿಗಿದ ಹನುಮನುದಿಸಿದ ನಾಡು
ಪಾವನೆಯರಾ ಕೃಷ್ಣೆ-ಭೀಮೆಯರ ತಾಯ್ನಾಡು

ಕಾವೇರಿ–ಗೋದೆಯರು ಮೈದೊಳೆಯುವ ನಲು ನಾಡು
ಆವಗಂ ಸ್ಫೂರ್ತಿಸುವ ಕಬ್ಬಿಗರ ನಡೆಮಾಡು
ಕಾವ ಗದುಗಿನ ವೀರನಾರಾಯಣನ ಬೀಡು"
(ಶ್ರೀಕಂಠಯ್ಯ ಬಿ.ಎಂ. (ಸಂ); ೧೯೫೫, ಪುಟ–೧೧೦)

ಹೀಗೆ ಇದರಲ್ಲಿ ಪೌರಾಣಿಕ ವ್ಯಕ್ತಿಗಳಾದ, ಪರಶುರಾಮನ ತಾಯಿಯ (ರೇಣುಕೆಯ), ರಾಮಾಯಣದ ಹನುಮಂತನು ಮೆರೆದ ನಾಡಿದು. ಸಾಹಸ ಮೆರೆದ ಅರಸುಗಳ ನಾಡಿದು, ಜಕಣಾಚಾರಿಯ ಶಿಲ್ಪಕಲೆಯ ಬೀಡು, ಮತ ತತ್ತ್ವಗಳನ್ನು ಸಾರಿದವರು ನೆಲೆಸಿದ ನಾಡಿದು. ಸಿರಿ–ಸಂಪತ್ತಿನ ಕಣಜವಾದರೆ, ವಿದ್ವತ್ತಿನ ಕಾಡೂ ಆಗಿತ್ತು. ಪವಿತ್ರ ನದಿಗಳು ಹರಿದು ಪಾವನಗೊಳಿಸಿದ, ಕವಿಯ ಆರಾಧ್ಯ ದೇವರಾದ ಗದುಗಿನ ನಾರಾಯಣ ಬೀಡು ಎಂದು ಮನದುಂಬಿ ಬಣ್ಣಿಸಿರುವರು. ಇಂತಹ ಹಿರಿಮೆಯ ನಾಡು ಏಕೀಕೃತಗೊಂಡು ಉದಯವಾಗಲಿ ಎಂಬುದೇ ಈ ಗೀತೆಯ ಹಾರೈಕೆಯಾಗಿದೆ.

ಈ ಗೀತೆ ಎಷ್ಟು ಪ್ರಸಿದ್ಧ, ಜನಪ್ರಿಯವಾಗಿತ್ತೆಂದರೆ ಕಲ್ಕತ್ತಾ ವಿಶ್ವವಿದ್ಯಾಲಯವು ಇದನ್ನು ಇಂಗ್ಲೀಷ್‌ಗೆ ಭಾಷಾಂತರಿಸಿತು. ಅಲಿಘಡ ವಿಶ್ವವಿದ್ಯಾಲಯವು ಉರ್ದುವಿಗೆ ತರ್ಜುಮೆ ನಾಡಿತು. ೧೯೫೬ ರ ನವ್ಹಂಬರ್ ೧ರಂದು ರಾಜ್ಯೋದಯದ ರಾಜ್ಯೋತ್ಸವದ ಶುಭಸಂದರ್ಭದಲ್ಲಿ ಈ ಗೀತೆಯನ್ನು ಹಾಡಿಸಲಾಯಿತು. ಅದೇ ಸಮಯದಲ್ಲಿ ರಾಷ್ಟ್ರಪತಿ ರಾಜೇಂದ್ರ ಪ್ರಸಾದರಿಂದ, ಗೀತೆಯನ್ನು ರಚಿಸಿದ ನಾರಾಯಣರಾಯರನ್ನು ಮತ್ತು ಹಾಡಿದ–"ಕಾಳಿಂಗರಾಯ"– ಎಂಬುವವರನ್ನು ಕರ್ನಾಟಕ ಸರಕಾರ ಸನ್ಮಾನಿಸಿತು.

ಈ ಗೀತೆಯನ್ನು ೧೯೭೫ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ನಾಡಗೀತೆಯ ಅಧಿಕೃತ ಪಟ್ಟಿಯಿಂದ ತೆಗೆದು ಹಾಕಲಾಯಿತು. ಆಗ ನಾಡಿದಾದ್ಯಂತ ಪ್ರತಿಭಟನೆಯ ಕೂಗು ಕೇಳಿ ಬಂದವು. ಇವಕ್ಕೆ ಸಾಹಿತ್ಯ ಪರಿಷತ್ ಕೊಟ್ಟ ಕಾರಣ–ಗೀತೆಯಲ್ಲಿ–"ಉದಯವಾಗಲಿ"–ಎಂದಿದೆ. ಆದರೆ ಕನ್ನಡ ನಾಡು ಈಗಾಗಲೇ ಉದಯವಾಗಿದೆ. ಆದ್ದರಿಂದ ಇದನ್ನು ತೆಗೆದು ಹಾಕಲಾಯಿತು.

ಕಡೆಂಗೋಡ್ಲು ಶಂಕರ ಭಟ್ಟರು–'ಕಾಣಿಕೆ' ಕವನದಲ್ಲಿ, "ಆವಕಾಣ್ಕೆಯ ಕೊಡುವೆ ಕನ್ನಡದ ಮಾತೆ ನಿನಗಾವ ಕಾಣ್ಕೆಯ ಕೊಡುವೆ ಮಮಜನ್ಮದಾತೆ?"–ಎಂದು ಕನ್ನಡ ಮಾತೆಗೆ ಯಾವ ಶ್ರೇಷ್ಠ ಕಾಣಿಕೆ ಕೊಡಲೆಂಬ ಅಭಿಲಾಷೆಯನ್ನು, ಅಂಥಹ ಶ್ರೇಷ್ಠ ಕಾಣಿಕೆ ನನ್ನಲ್ಲಿಲ್ಲವಲ್ಲ, ಕೊಡಲು ನಾನು ಸಮರ್ಥನೇ?–ಎಂಬ ತವಕವನ್ನು ವ್ಯಕ್ತಪಡಿಸಿರುವರು.

ಸಾಲಿರಾಮಚಂದ್ರ ರಾಯರು "ಗಾಯತ್ರಿಯದ್ಬುತ ಮಂತ್ರ"–ಕವನವು ಅವರಿಗೆ ಕನ್ನಡನಾಡು–ನುಡಿಯ ಬಗೆಗಿದ್ದ ಅಭಿಮಾನಕ್ಕೆ ನಿದರ್ಶನವಾಗಿದೆ. ಕನ್ನಡ ನಾಡಿನ ಹುಲ್ಲು ತಮಗೆ

ಪಾವನ ತುಳಸಿ, ಇಲ್ಲಿಯ ನೀರೇ ದೇವನದಿ, ಇಲ್ಲಿಯ ಕಲ್ಲು ಸಾಲಿಗ್ರಾಮ ಶಿಲೆಯಾಗಿದೆ–ಎಂದಿರುವರು. ಇನ್ನು ನುಡಿಯ ಬಗೆಗೆ ಹೀಗೆ ಹೇಳಿರುವರು:

"ಕನ್ನಡದ ಶಬ್ದಮೆನಗೋಂಕಾರಮೀಯೆನ್ನ
ಕನ್ನಡದ ನುಡಿಯೇ ಗಾಯತ್ರಿಯದ್ಭುತ ಮಂತ್ರ
ಮಿನ್ನಾವುದೈ ಪೆರತು ಕನ್ನಡದ ಸೇವೆಯಿಂದಧಿಕಮೀ ಜಗದೊಳೆನಗೆ!"
(ಶೇಷಗಿರಿರಾವ್ ಎಲ್.ಎಸ್. (ಸಂ) ೧೯೯೬, ಪುಟ–೭)

ಹೀಗೆ ಕನ್ನಡದ ಶಬ್ದ ಓಂಕಾರ ಮಂತ್ರವಾದರೆ ಕನ್ನಡದ ನುಡಿ ಪವಿತ್ರ ಗಾಯಿತ್ರಿ ಮಂತ್ರವಾಗಿದೆ. ಕನ್ನಡದ ಸೇವೆಗಿಂತ ಮಿಗಿಲಾದ ಸೇವೆ, ಈ ಜಗತ್ತಿನಲ್ಲಿ ತಮಗೆ ಯಾವುದೂ ಇಲ್ಲವೆಂದು ಅಪ್ಪಟ ಕನ್ನಡ ಭಾಷೆಯ ಪ್ರೇಮವನ್ನು ಮೆರೆದಿರುವರು.

ಬಿ.ಎಂ. ಶ್ರೀಯವರು ನಾಡು–ನುಡಿಯ ಏಳ್ಗೆ–ಹಿತಾಸಕ್ತಿಯನ್ನು ಹಲವಾರು ಕವನಗಳಲ್ಲಿ ವ್ಯಕ್ತಪಡಿಸಿರುವರು.ಇವರ "ಇಂಗ್ಲೀಷ್ ಗೀತೆಗಳು"–ಇಂಗ್ಲೀಷ್‌ನಿಂದ ಕನ್ನಡಕ್ಕೆ ಅನುವಾದಿಸಿದ ಕವನಗಳ ಸಂಕಲನ ಇದು. ಕನ್ನಡ ನವೋದಯಕ್ಕೆ ಕವಿರಾಜ ಮಾರ್ಗವನ್ನು ತೋರಿಸಿದ ಕೃತಿಯೆಂದು ಪ್ರಚಾರವಾಗಿದೆ. ಇದರಲ್ಲಿ ಇಂಗ್ಲೀಷ್ ಕಾವ್ಯದಿಂದ ಕನ್ನಡ ಕಾವ್ಯಕ್ಕೆ ಆಧುನಿಕತೆ ತಂದ ಪ್ರಯೋಗಗಳ ಗಣಿಯೇ ಇದೆ. 'ಕಾಣಿಕೆ' ಕವನದಲ್ಲಿ ಇಂಗ್ಲೀಷ್‌ನಿಂದ ಕನ್ನಡಕ್ಕೆ ಭಾಷಾಂತರಿಸಿದ ಉದ್ದೇಶವನ್ನು ಹೀಗೆ ಸ್ಪಷ್ಟಪಡಿಸಿದ್ದಾರೆ:

"ಇವಳ ಸೊಬಗನವಳು ತೊಟ್ಟು
ನೋಡ ಬಯಸಿದೆ
ಅವಳ ತೊಡಿಗೆ ಇವಳಿಗಿಟ್ಟು
ಹಾಡ ಬಯಸಿದೆ"
(ಶ್ರೀಕಂಠಯ್ಯ ಬಿ.ಎಂ. (ಸಂ); ೧೯೯೫, ಪುಟ–೯೬)

ಈ ಭಾಷಾಂತರ ಕಾರ್ಯವೇ ಕನ್ನಡ ತಾಯಿಗೆ ತಮ್ಮ ಅಳಿಲು ಸೇವೆಯೆಂದು ಧನ್ಯವಾಗಿರುವರು. ಇಂಗ್ಲೀಷ್ ಕಾವ್ಯದ ವಸ್ತು, ರೂಪ, ಛಂದಸ್ಸು, ರೀತಿ, ಶೈಲಿಗಳನ್ನು ಅನುವಾದ, ರೂಪಾಂತರಗಳ ಮೂಲಕ ಕನ್ನಡಕ್ಕೆ ತಂದಿರುವದನ್ನು ಈ ರೀತಿ ಹೇಳಿಕೊಂಡಿರುವರು:

ಮುದ್ರಣಸೌಕರ್ಯಕ್ಕಾಗಿ ಕನ್ನಡ ಅಕ್ಷರ ಸಂಯೋಜನೆಯಲ್ಲಿ ಬದಲಾವಣೆ ತರಬೇಕೆಂಬ ಕೆಲವರ ಅಪೇಕ್ಷೆಯ ಮೇರೆಗೆ, ಕನ್ನಡ ಸಾಹಿತ್ಯ ಪರಿಷತ್ ಆಶ್ರಯದಲ್ಲಿ ಒಂದು ಸಮಿತಿಯನ್ನು ರಚಿಸಿತು. ಆ ಸಮಿತಿ ನಿರ್ಣಯಿಸಿದ ಬದಲಾವಣೆಗಳಾವವೆಂದರೆ–

೧. ಒತ್ತಕ್ಷರಗಳ ದ್ವಿತ್ವವನ್ನು ಕೆಳಗಡೆ ಬರೆಯುವದರ ಬದಲಾಗಿ ಇಂಗ್ಲೀಷ್‌ನಂತೆ ಮುಂದೆ ಪಕ್ಕದಲ್ಲಿ ಬರೆದು ಮೊದಲಿನ ಅಕ್ಷರವನ್ನೇ ಸ್ವರರಹಿತ ಮಾಡಿ ಮುಂದಿನ ದ್ವಿತ್ವಕ್ಕೆ ಸ್ವರ ಸೇರಿಸುವುದು.

೨. ಆ, ಈ,ಊ,ಏ,ಓ–ಈ ಐದು ದೀರ್ಘ ಸ್ವರಗಳಿಗೆ ಈ ರೀತಿಯ ಪ್ರತ್ಯೇಕ ಸಂಕೇತಗಳ ಬದಲಾಗಿ ಆಯಾ ಹೃಸ್ವಸ್ವರ ಮತ್ತು ಹೃಸ್ವಕ್ಷರಗಳ ಮುಂದೆ 'ೀ' ಈ ದೀರ್ಘ ಸಂಕೇತ ಬಳಸಿ ದೀರ್ಘ ಮಾಡಿಕೊಳ್ಳುವುದು.

೩. ಕೆಲವು ಅಲ್ಪಪ್ರಾಣ ಅಕ್ಷರಗಳ ಹೊಕ್ಕಳು ಸೀಳಿ ಮಹಾಪ್ರಾಣ ಮಾಡಿಕೊಳ್ಳುತ್ತೇವೆ, ಆದರೆ ಕೆಲವು ಮಹಾಪ್ರಾಣ ಅಕ್ಷರಗಳನ್ನು ಈ ರೀತಿ ಮಾಡಿಕೊಳ್ಳದೆ ಪ್ರತ್ಯೇಕ ಸಂಕೇತ ಇವೆ. ಇವುಗಳನ್ನು ಕೂಡಾ ಆಯಾ ಅಲ್ಪ ಪ್ರಾಣಾಕ್ಷರದ ಹೊಕ್ಕಳು ಸೀಳಿಯೇ ಮಹಾಪ್ರಾ ಮಾಡಿಕೊಳ್ಳಬೇಕು.(ಉದಾಃ ಚ–ಛ) ಶ್ರೀಯವರು ಈ ಮಾರ್ಪಾಡುಗಳನ್ನು ಎಲ್ಲ ಕನ್ನಡಿಗರು ಔಧಾರ್ಯದಿಂದ ಒಪ್ಪಿ, ಸ್ವೀಕರಿಸಿ, ಬಳಸಿ, ಭಾಷೆಯ ಸುಲಭತೆಗೆ ಸಹಕರಿಸಹಬೇಕೆಂದು, ತಾವು ಸಂಪಾದಿಸಿರುವ "ಕನ್ನಡ ಬಾವುಟ" ಕೃತಿಯ ಪ್ರಸ್ತಾವನೆಯಲ್ಲಿ ಕೇಳಿಕೊಂಡಿರುವರು. ಅದು ಹೀಗಿದೆ:

ಆಯಾ ಹೃಸ್ವಸ್ವರಗಳ ಮುಂದೆ ಈ 'ೀ' ಸಂಕೇತ ಬಳಸಿ ದಿರ್ಘ ಮಾಡಿಕೊಳ್ಳಬಹುದು. ಈ ರೀತಿ ತಮ್ಮ 'ಕನ್ನಡ ಬಾವುಟ' ಕವನದಲ್ಲಿ ಪ್ರಯೋಗಿಸಿ ತೋರಿಸಿದ್ದಾರೆ.

"ಏರಿಸಿ ಹೇರಿಸಿ ಕನ್‌ನಡ ಬೀವುಟ।
(ಏರಿಸಿ ಹಾರಿಸಿ ಕನ್ನಡ ಬಾವುಟ)
ಓೀ ಹೊ ಕನ್‌ನಡ ನಾಡು ಅೀಹ್ ಕನ್‌ನಡ ನುಡಿ।"
(ಓಹೊ ಕನ್ನಡ ನ್ಡು ಆಹ ಕನ್ನಡ ನುಡಿ)

(ಶ್ರೀಕಂಠಯ್ಯ ಬಿ.ಎಂ. (ಸಂ); ೧೯೫೫, ಪುಟ–vii)

–ಹೀಗೆ ಅಕ್ಷರಗಳನ್ನು ಮಾರ್ಪಡಿಸಿಕೊಂಡ ಈ ಪದ್ಯದಲ್ಲಿ ಇರುಳು ಕಳೆದು ಬೆಳಕಾಯಿತು. ಕನ್ನಡ ತಾಯಿಯ ಕರೆಯ ಕೇಳಿ ನಾಡನ್ನು ಕಟ್ಟಲು ಹೋರಾಡಲು ಏಳಿರೆಂದು ಜಾಗೃತಮಾಡಿದ್ದಾರೆ.

ಕನ್ನಡ ನಾಡಿನಳಿವು–ಉಳಿವೆ ನನ್ನ ಅಳಿವು–ಉಳಿವು ಎಂಬಂತೆ, ತಾಯಿ ಉಳಿದರೆ ನಾನು ಉಳಿಯುವೆ, ತಾಯಿ ಅಳಿದರೆ ನಾನಳಿಯುವೆ' ಎಂದು ಪ್ರತಿಜ್ಞೆಗೈಯಲು ಹೇಳಿರುವರು. ನಾಡಿನ ಗಡಿ, ತುರುಗಳನ್ನು ಕಾಯಲು ಹೇಳಿರುವರು. ಕಾಯದಿದ್ದರೆ 'ಸಾಯಿ'–ಎಂದು ಶಪಿಸಿರುವರು. ಹಿರಿ–ಕಿರಿಯರೆಲ್ಲರೂ ಕನ್ನಡ ಬಾವುಟ ಹಿಡಿದು ನಡೆಯಿರಿ, ಏಳಿರೆಂದು ಎಚ್ಚರಿಸಿ ಕನ್ನಡ ತಾಯಿಗೆ,

"ಏಳ್ ಕನ್‌ನಡ ತ್ೀಯ್,
(ಏಳ್ ಕನ್ನಡ ತಾಯ್)
ಬೀಳ್ ಕನ್‌ನಡ ತ್ೀಯ್,
(ಬಾಳ್ ಕನ್ನಡ ತಾಯ್)
ಅೀಳ್ ಕನ್‌ನಡ ತ್ೀಯ್,
(ಆಳ್ ಕನ್ನಡ ತಾಯ್)

ಕನ್‌ನಡಿಗರೊಡತಿ ಒೞ ರ್‌ಜೇಶ್‌ವರೀ"
ಕನ್ನಡಿಗರೊಡತಿ ಓ ರಾಜೇಶ್ವರಿ!)
(ಶ್ರೀಕಂಠಯ್ಯ ಬಿ.ಎಂ. (ಸಂ); ೧೯೬೫, ಪುಟ-viii)

-ಎಂದು ಹಾರೈಸಿರುವರು. ಕನ್ನಡ ಬಾವುಟವು ಇಂದಿಗೂ ಕಳೆಗುಂದಿಲ್ಲ. ಇದು ನಾಡು ಒಂದಾದ ಬಾವುಟ. ಈ ಬಾವುಟಕ್ಕೆ ಬಿ.ಎಂ. ಶ್ರೀಯವರು ಚೆಲುವು, ಗೆಲವು ಬಲವಾಗು ಬಾವುಟ,' 'ಹೊನ್ನು ಹೆಣ್ಣು, ಹಸನಾದ ಮಣ್ಣಾಗಿ, ಹೊಸತು ಕಣ್ಣಾಗಿ, ಬೆಳಕಾಗಿ, ಬೆಳೆಯಾಗಿ, ಹೊಮ್ಮುಗೆಯ ಕಾಯಾಗಿ ಹೂವಾಗಬೇಕೆಂದು ಕೇಳಿಕೊಳ್ಳುವಲ್ಲಿ ಕನ್ನಡ ನಾಡಿನ ಆಶೋತ್ತರಗಳನ್ನು ವ್ಯಕ್ತಪಡಿಸಿರುವರು.

ಶ್ರೀಯವರು ತಮ್ಮನ್ನಾಳ್ವ ಮೈಸೂರ ಅರಸರಿಗೆ ರಾಜ-ನಿಷ್ಠೆ ರಾಜಭಕ್ತಿಯನ್ನೇ ತೋರ್ಪಡಿಸಿರುವರು. 'ಮೈಸೂರ ಮಕ್ಕಳು,' ಹಾಗೂ ಇತರ ಹಲವಾರು ಕವನಗಳಲ್ಲಿ ಇದು "ನಾಲ್ಮಡಿ ಕೃಷ್ಣನ ಮೈಸೂರು" ಎಂದೇ ಸಂಬೋಧಿಸಿರುವರು. ಹೀಗೆ ರಾಜಭಕ್ತಿಯ ಮೂಲಕವೇ ಕನ್ನಡ ನಾಡು-ನುಡಿಯ ಅಭಿಮಾನ ಹೊಂದಿರುವದನ್ನು ರಾಷ್ಟ್ರೀಯತೆಗಿಂತ ಪ್ರಾಂತಿಯತೆಗೆ ನಿಷ್ಠುರಾಗಿದ್ದರೆಂಬುದು ಅವರ ಕಾವ್ಯಗಳಿಂದ ಕಂಡುಬರುತ್ತದೆ.

ಶ್ರೀಯವರ 'ಕನ್ನಡ ತಾಯ ನೋಟ'-ಕವನದಲ್ಲಿ ಅಂದಿನ ಕನ್ನಡ ನಾಡಿನ ಶೋಚನೀಯ ಸ್ಥಿತಿಗತಿಗಳ ನೋಟವಿದೆ ಮತ್ತು ಏಕೀಕರಣ ಚಳುವಳಿಗೆ ಜನರನ್ನು ಪ್ರೋತ್ಸಾಹಿಸಲು ಕಲ್ಪನಾತೀತವಾದ ಕಥೆಯನ್ನು ಯಾತ್ರೆಯ ಅನುಭವವನ್ನಾಗಿ ಬಣ್ಣಿಸಿರುವರು. ಕವಿ ಕನ್ನಡ ನಾಡಿನ ಪವಿತ್ರ ಯಾತ್ರೆಗೆಂದು ಹೋದಾಗ ತನಗೆ ಕನ್ನಡ ತಾಯಿಯು ಕಂಡಳೆಂದೂ, ನಿಮಗಾಗಿ ಒಂದು ಒಸಗೆಯ ನುಡಿ ಹೇಳಿದ್ದಾಳೆ; ಅದನ್ನು ಹೇಳುತ್ತೇನೆ, ನೀವೆಲ್ಲರೂ ಕೇಳಿರೆಂದು ಸಮಸ್ತ ಕನ್ನಡಿಗರನ್ನುದ್ದೇಶಿಸಿ ಹೇಳುವರು. ಕನ್ನಡ ನಾಡನ್ನು ಸುತ್ತುತ್ತಾ ಇದರ ಚೆಲುವನ್ನು ಸವಿಯುತ್ತಾ ಮಂಗಳೂರಿನ ಚಾರ್ಮಾಡಿ ಘಾಟಿಗೆ ಬಂದ ಕವಿಗೆ, ಬೆಟ್ಟಗಳ ಸಾಲಿನಲ್ಲಿ, ಕಾಡಿನಲ್ಲಿ ಕನ್ನಡ ತಾಯಿ ಪ್ರತ್ಯಕ್ಷಳಾಗಿ ಪುಣ್ಯ ದರ್ಶನ ಕೊಟ್ಟು ಮರೆಯಾಗುತ್ತಾಳೆ. ಹಾಳು ಹಂಪೆಗೆ ಬಂದಾಗ ಅಲ್ಲೊಬ್ಬ ದೀನ ಸ್ಥಿತಿಯ ಮುದುಕಿ ಕುಳಿತಿರುತ್ತಾಳೆ. ಅವಳನ್ನು ಕಂಡು-"ಯಾರವ್ವ ನೀ ತಾಯಿ? ಏತಕಿಂತೋಬ್ಬಳೇ ಕುಳಿತೆ ಕಾಡಿನಲಿ?"-ಎಂದೆಲಿಲ್ಲ ಪ್ರಶ್ನಿಸುವನು. ಅದಕ್ಕೆ ಆ ತಾಯಿ-"ಕೇಳಣ್ಣ, ನಾನೊಬ್ಬ ಹಳೆಯ ಮುತ್ತೈದೆ ಹಿರಿದಾಗಿ ಬಾಳಿದವಳೊಮ್ಮೆ, ಈಗ ಬಡತನ-ಎಂದು ತನ್ನ ಅಳಲನ್ನು ತೋಡಿಕೊಳ್ಳುತ್ತಾಳೆ.

ತನ್ನ ಮಕ್ಕಳು ತನ್ನನ್ನು ಒಲ್ಲರು, ಅವರು-"ಎಂದು ತನ್ನ ಮಕ್ಕಳ ಸ್ಥಿತಿಯನ್ನು ಹೇಳುವಳು. ಇದು ಅಂದು ಕನ್ನಡಿಗರು ಅಭಿಮಾನ ಶೂನ್ಯರಾಗಿ ಪರಭಾಷೆ, ಪರಸಂಸ್ಕೃತಿಯ ವ್ಯಾಮೋಹಿಗಳಾದುದನ್ನು ಬಿಂಬಿಸುತ್ತದೆ. ಆಗ ಕವಿ, ಇವಳು ಬೇರೆ ಯಾರೋ ಆಗಿರದೆ ಕನ್ನಡ ತಾಯಿಯೇ ಎಂದು ಗುರುತಿಸಿ-"ಏಕಮ್ಮ ಇನಿಸೊಂದು ಕೊರಗು? ಬೇಡಮ್ಮ ಮಕ್ಕಳಲಿ ಇನಿಸೊಂದು

ಕಡುಮುನಿಸು"-ಎಂದು ಸಂತೈಸಿ ಹಿಂದೆ ಸಾಮ್ರಾಜ್ಯ ಕಟ್ಟಿದ ಕನ್ನಡಿಗರ ಸಾಹಸ-ಶೌರ್ಯಗಳನ್ನು ನೆನಪಿಸುವನು. ಎಲ್ಲರೂ ಕೂಡಿ ನಾಡನ್ನು ಒಂದುಗೂಡಿಸುವರು. ನೀನು ಬಂದು ಸಿಂಹಾಸನವೇರಿ, ರಥವನ್ನೇರಿ ಹರಸಬೇಕೆಂದು ಪ್ರಾರ್ಥಿಸಿಕೊಳ್ಳುವನು. ಸಂತೋಷದಿಂದ ಒಪ್ಪಿದ ತಾಯಿ- 'ಮುದುಕಿ ಏಳೆಯವಳಾಗಿ, ಮಾಸು ಮಿಂಚಿಳೆಯಾಗಿ ಸವೆದ ಮೈ ತುಂಬಿ, ಕಡಲ ತೆರೆಗಳನ್ನುಟ್ಟು, ಬೆಟ್ಟ-ಬಯಲನು ತೊಟ್ಟು, ಅರಿಲ ಮುಡಿಗಿಟ್ಟು"-ಹೀಗೆ ಸಾಲಂಕೃತಳಾಗಿ ರಥವೇರುವಳು. ಸುತ್ತಲೂ ಸಮಸ್ತ ಕನ್ನಡಿಗರು ನೆರೆದು ಜಯಕಾರ ಹಾಕುವರು. "ಭಾರತಾಂಬೆಯ ಹಿರಿಯ ಹೆಣ್‌ಮಗಳೆ, ದಾರಿತೋರುವ ಹಿರಿಯ ಸೊಡರೆ ಬಾಳಮ್ಮ ಬಾಳು!"-ಎಂದು ಹರ್ಷೋದ್ಗಾರ ಹಾಕುವರು. ತಾಯಿ ವಿಜಯಂಗೈದು ಹರಸುವಳು.

ಇದುವರೆಗೆ ಹೇಳಿದ ತಾಯಿಯ ಹರಕೆಯ ನುಡಿ ನೀವು ಕೇಳಿದ್ದೀರಿ. ಇನ್ನಾದರೂ ಭಾರತದಲ್ಲಿ ಹಿರಿದಾಗಿ ಬಾಳಲು, ನಾಡು-ನುಡಿಗಳನ್ನು ಮುನ್ನಡಿಸಿಕೊಂಡು ಹೋಗಲು ಒಂದಾಗಲು ಕೇಳಿಕೊಂಡಿರುವರು. ಎಲ್ಲರೂ ಒಕ್ಕೊರಲಿನಿಂದ-"ಸಿರಿಗನ್ನಡಂ ಗೆಲ್ಗೆ, ಹಿರಿಗನ್ನಡಂ ಗೆಲ್ಗೆ"-ಎಂದು ಜಯಕಾರ ಹಾಕಲು ಹೇಳಿರುವರು.

ಹೀಗೆ ಕನ್ನಡಿಗರಲ್ಲಿ ನಾಡು-ನುಡಿಯ ಬಗ್ಗೆ ಅಭಿಮಾನ ಮೂಡಿಸಿ, ಏಕೀಕರಣ ಚಳುವಳಿಗೆ ಅಣಿಯಾಗುವಂತೆ ಜಾಗೃತರನ್ನಾಗಿ ಮಾಡಿರುವರು.

ದಿನಕರ ದೇಸಾಯಿಯವರು 'ಕನ್ನಡ ತಾಯಿ' ಕವನದಲ್ಲಿ ಕನ್ನಡನಾಡಿನ ಹಿರಿಮೆ-ಹಳಮೆ ಸೊಬಗನ್ನು ಹೀಗೆ ವರ್ಣಿಸಿರುವರು:

"ಮೂರು ಮುನ್ನೀರುಗಳ ನೀಲ ಚಲ ಮಧ್ಯದಲ್ಲಿ'
ಮೂರು ಸಾವಿರ ವರ್ಷದಾಚೆ ಜನಿಸೆ
ಕೋಟಿ ಮಕ್ಕಳ ಹೆತ್ತ ಮುದುಕಿಯಾದರು ತಾಯಿ
ತರುಣಿಯೊಲು ನೀನಿರುವೆ ಚಲುವ ಸೂಸಿ"

(ಶ್ರೀಪಾದಶೆಟ್ಟಿ, ೧೯೮೮, ಪುಟ-೯೪)

'ಕನ್ನಡಾಂಬೆಯ ಹೆಸರು' ಕವನದಲ್ಲಿ ಕನ್ನಡನಾಡಿನ ಪ್ರಕೃತಿ ಸೌಂದರ್ಯದಲ್ಲಿಯೇ ಕನ್ನಡ ತಾಯಿಯ ಸ್ವರೂಪವನ್ನು ಕಂಡಿರುವರು. ಚಂದನವೇ ಕನ್ನಡ ತಾಯಿಯ ಗುಡಿಯಾದರೆ, ಸಹ್ಯಾದ್ರಿಯೇ ಮುಡಿ ಕನ್ನಡ ನುಡಿಯೇ ಅವಳ ಬಾಯಿಯೆಂದು ವರ್ಣಿಸಿರುವರು. 'ಏಕೀಕೃತ ಕರ್ನಾಟಕ' ಕವನದಲ್ಲಿ ಏಕೀಕರಣಗೊಳಿಸುವದನ್ನು ಒಂದು ಮಾತೃಭೂಮಿಗಾಗಿ ಕನ್ನಡಿಗರ ಹೃದಯಗಳು ಒಂದಾಗಲಾರವೇ?-ಎಂದು ನಮ್ಮ ನಮ್ಮಲ್ಲಿಯ ಭಿನ್ನಾಭಿಪ್ರಾಯಗಳನ್ನು ತೊರೆದು ಕನ್ನಡ ನಾಡನ್ನು ಏಕೀಕರಣಗೊಳಿಸಲು ಒಂದಾಗಬೇಕೆಂದಿರುವರು. ಕನ್ನಡಿಗರೆಲ್ಲರೂಒಂದಾದುದನ್ನು ಕುರಿತು ಕವನವೊಂದರಲ್ಲಿ ಹೀಗೆ ಹೇಳಿರುವರು.

"ಕನ್ನಡದ ಜನವೊಂದು
ಕನ್ನಡದ ಮನವೊಂದು
ಒಂದಾಯ್ತು ಒಂದು
ನಾಡೆಲ್ಲ ಗೂಡೆಲ್ಲಾ ಹಾಡೆಲ್ಲ ಒಂದು"
(ಶ್ರೀಪಾದಶೆಟ್ಟಿ, ೧೯೮೮, ಪುಟ-೯೫)

ಎಂದು ಹರ್ಷಗೊಂಡಿರುವರು.

ರಂ ಶ್ರೀ ಮುಗಳಿಯವರು' ಎಂಥ ನಾಡಿದು-ಕವನದಲ್ಲಿ ಹಿಂದೆ ವೈಭವದಿಂದ ಹಿರಿದಾಗಿ ಬಾಳಿದ ನಾಡು ಈಗ 'ಎಂಥ ಕಾಡಾಯಿತೋ'-ಎಂದು ವ್ಯಥೆಪಟ್ಟಿರುವರು. ರಾಜ್ಯ ಸಾಮ್ರಾಜ್ಯ ಕಟ್ಟಿ ಆಳಿದ ಈ ನಾಡಿನಲ್ಲಿ ಈಗ ಹರಿದು-ಹಂಚುವ ಕಲಹವೇ ಕುಲದೈವವಾಗಿದೆ. ದೇವಾಲಯ, ಬಸದಿ, ಗೊಮ್ಮಟ, ಕಲೆ, ವಾಸ್ತು ಶಿಲ್ಪ-ಮುಂತಾದವುಗಳ ಸೌಂದರ್ಯದ ನೆಲೆಯಾಗಿತ್ತು. ಆದರೆ ಇವೆಲ್ಲವುಗಳನ್ನು ಹಾಳುಮಾಡಿ ತುಳಿಯುತ್ತಿರುವರು. ಪುಲಕೇಶಿ, ನೃಪತುಂಗ, ಬಲ್ಲಾಳ ಹರಿಹರರು ಸಾಮ್ರಾಜ್ಯ ಕಟ್ಟಿದ, ಅವರು ಉಸಿರಾಡಿದ ನಾಡಿದು. ಅಂಥಹ ವೈಭವವನ್ನು ಪಡೆಯಲು ನಾವು ನಾಡನ್ನು ಕಟ್ಟಬೇಕಾಗಿದೆ. ಹೀಗೆ ನಾಡಿನ ಏಕೀಕರಣಕ್ಕೆ ಕರೆಕೊಟ್ಟಿರುವರು. 'ನಾಡವರು!'-ಕವನದಲ್ಲಿ "ನಾಡವರು ನಾವು ಕರುನಾಡವರು! ನಾವು ಹಿರಿನಾಡವರು!"-ಎಂದು ಅಭಿಮಾನಪೂರ್ವಕವಾಗಿ ಹಾಡಿ ಹೊಗಳಿರುವರು.

ಮಾಸ್ತಿಯವರ 'ಮಲಾರ'-ಸುನೀತಗಳ ಸಂಗ್ರಹ ಇದರಲ್ಲಿಯ ಕೆಲವು ಸುನೀತಗಳು ಕನ್ನಡ ನಾಡು-ನುಡಿಯನ್ನು ಕುರಿತಿವೆ. 'ಕನ್ನಡ ನಾಡಿನ ಸ್ಥಿತಿಯನ್ನು ನೆನೆದು'-ಕವನ (ಸುನೀತ)ದಲ್ಲಿ ಹರಿದು ಹಂಚಿಹೋಗಿದ್ದ ಕನ್ನಡ ನಾಡಿನ ಸ್ಥಿತಿಯ ಚಿತ್ರಣವನ್ನು ಕೊಟ್ಟಿರುವರು. ನಾಡಿನ ಜನರು ತಾವು ಮೈಸೂರ ಕಡೆಯವರು, ಧಾರವಾಡ ಕಡೆಯವರು, ಏರಕಾಡದವರು-ಎಂದು ಪ್ರಾದೇಶಿಕ ಭಿನ್ನತೆಯಿಂದ ಗುರುತಿಸಿಕೊಳ್ಳುವದು ತಮ್ಮ ಪ್ರತಿಷ್ಠೆಯೆಂದು ತಿಳಿದಿದ್ದಾರೆ. ಇದನ್ನು ಬಿಟ್ಟು ಕನ್ನಡಿಗರೆಲ್ಲರೂ ಒಂದೆಂದು ತಿಳಿಯಲು ಹೇಳಿರುವರು, ಅಲ್ಲದೆ ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಪೂರ್ವ ಕರ್ನಾಟಕ, ಕೊಡಗು, ತುಳು-ಹೀಗೆ ಬೇರೆ ಬೇರೆ ಎನ್ನದೆ ಈ ಎಲ್ಲ ಭಾಗಗಳ ಸಮಸ್ತ ಕನ್ನಡಿಗರು ನನ್ನವರು, ಸಹೋದರರು-

"ಎಂದು ನಾವರಿದವೇ ನಮಗೆ ಇನ್ನಾರೆದುರು!
ಹಾ ನನ್ನ ಸಹೋದರರೆ ಬನ್ನಿ ಒಂದಾಗಿ,
ಜಯವಧುವ ನಿಮ್ಮ ತೋಳಿನೊಳಿಟ್ಟು ತೂಗಿ."
(ಶ್ರೀಕಂಠಯ್ಯ ಬಿ.ಎಂ. (ಸ); ೧೯೯೫, ಪುಟ-೧೩೮)

ಕನ್ನಡಿಗರೆಲ್ಲರೂ ಒಂದಾದರೆ ನಮಗೆ ಯಾರೂ ಪ್ರತಿಸ್ಪರ್ದಿಗಳಿಲ್ಲ. ಏಕೀಕರಣ ಹೋರಾಟದ ಜಯ ನಮ್ಮ ಕೈಯಲ್ಲಿರುತ್ತದೆ. ಹೀಗೆ ಕನ್ನಡ ನಾಡನ್ನು ಒಂದುಗೂಡಿಸುವ ತಮ್ಮ ಅಭಿಲಾಷೆಯನ್ನು, ಅಪ್ಪಟ ನಾಡಿನ ಪ್ರೇಮವನ್ನು ಇಲ್ಲಿ ವ್ಯಕ್ತಪಡಿಸಿರುವರು. ಇದೇ ರೀತಿ "ಗುಂಪುಗಳ ಹುಮ್ಮಸ್ಸು ನೆನೆದು"

ಕವನ (ಸುನೀತ) ದಲ್ಲಿಯೂ ವೈಷ್ಣವ, ಶ್ರೀವೈಷ್ಣವ, ಸ್ಮಾರ್ತ, ಕೈವರ್ತ, ಒಕ್ಕಲಿಗ, ಕಮ್ಮಿ–ಮುಂತಾದ ಬೇರೆ ಬೇರೆ ಧರ್ಮ–ಜಾತಿಯವರೆಂದು, ತಾ ಬೇರೆ, ನಾ ಬೇರೆ ಎಂಬ ಭೇದ–ಭಾವನೆ ಬಿಟ್ಟು ನಾಡು–ನುಡಿಯ ಮತ್ತು ದೇಶದ ಹಿತಕ್ಕಾಗಿ ಒಂದಾಗಲು ತಿಳಿಸಿರುವರು.

ಆನಂದ ಕಂದರು (ಕಾರಹುಣ್ಣಿವೆ ಸಂಕಲನದ) 'ಕನ್ನಡಿಗರ ಹಾಡು' ಕವನದಲ್ಲಿ ಕರ್ನಾಟಕ ಏಕೀಕರಣ ಸಮಸ್ಯೆಗಳನ್ನು ಕುರಿತು ಹೇಳಿರುವರು. ಭಾರತಕ್ಕೆ ಸ್ವಾತಂತ್ರ್ಯ ಬರುವದರೊಂದಿಗೆ ಕರ್ನಾಟಕ ಏಕೀಕರಣವಾಗಿ ಕನ್ನಡ ನಾಡಿನ ಸಮಸ್ಯೆಗಳೆಲ್ಲವೂ ಪರಿಹಾರವಾಗುತ್ತವೆಂದು ನಂಬಲಾಗಿತ್ತು. ಆದರೆ ಸ್ವಾತಂತ್ರ್ಯ ಬಂದ ಕೂಡಲೇ ಈಡೇರಲಿಲ್ಲ. ಇದಕ್ಕೆ ನೊಂದು ಹೀಗೆ ಹೇಳಿರುವರು.

"ಭಾರತಕ್ಕೆ ಬಂದಿತಂತೆ ಸ್ವಾತಂತ್ರ್ಯದ ಹುಣ್ಣಿವೆ
ಕನ್ನಡಿಗರಿಗೇನಿದೆ, ಬರಿಕಂಬನಿಗಳ ಕಣ್ಣಿವೆ!
.................................................................
ಭಾರತಕ್ಕೆ ಬಂದಿತಂತೆ ಸುಖ ಶಾಂತಿಯ ಹುಣ್ಣಿವೆ
ಕನ್ನಡಿಗರ ಮುಂದೆ ಮಾತ್ರ ಮುಳ್ಳು–ಕಲ್ಲು ಮಣ್ಣಿವೆ"
(ಬೆಟಗೇರಿ ಕೃಷ್ಣಶರ್ಮ, ೧೯೫೬, ಪುಟ–೬೭)

'ಅರುಣೋದಯ' ಕವನದಲ್ಲಿ ಕನ್ನಡ ನಾಡಿನ ಉದಯದ ಕನಸನ್ನು ಕಂಡಿರುವರು. ಕನ್ನಡ ನಾಡಿನ ಬಾನಿನ ಮುಂದುಗಡೆ ಚೆಂಬೆಳಕು ಮೂಡುತ್ತಿದೆ ಎಂದು ನಾಡಿನ ಉದಯವನ್ನು ಸೂರ್ಯೋದಯಕ್ಕೆ ಹೋಲಿಸಿರುವರು. ಮುಂದೆ ಕನ್ನಡ ನಾಡಿನ ಅರುಣನ ಉದಯದಿಂದಾಗಿ ಕತ್ತಲೆಯು ಕಳೆದು ಎಲ್ಲೆಲ್ಲೂ ಬೆಳಕು ಪಸರಿಸಿ ಮಲಗಿದ ಕನ್ನಡದ ಎಳೆಯರು ಎದ್ದು ನಲಿದಾಡುವರು. ನಡುಬಾನಿಗೇರಿದ ಕನ್ನಡ ಅರುಣನು–

"ಕನ್ನಡ ನಾಡಿನ ಗುಡಿಗಳಸಕೆ ಹೊಸ
ಬಣ್ಣವನೀತನು ಹಾಕುವನು
ಹೊನ್ನಿನ ಕಿರಣದ ಹಂದರ ಬಿಗಿಯುತೆ
ಕನ್ನಡಗರನಲ್ಲಿರಿಸುವನು"
(ಶ್ರೀಕಂಠಯ್ಯ ಬಿ.ಎಂ. (ಸಂ); ೧೯೫೫, ಪುಟ–೧೧೧)

ಹೀಗೆ ನಾಡು ಉದಯವಾಗಿ ಶುಭಕಾಲ ಬರುತ್ತದೆಂದು ಕನಸು ಕಂಡಿರುವರು, ಈ ಕನಸು ನನಸು ಮಾಡಲು ಎಲ್ಲರೂ ಒಂದಾಗಿ ಶ್ರಮಿಸಲು:

"ಎಲ್ಲೈ ಕನ್ನಡ ಭಾಗ್ಯವಿಧಾತನೆ?
ಎನುತೆ ಹಾಡುತಿಹ ವೈತಾಳಿ;
ಸುಳಿಯುತಿಹುದು ನಸುಕಿನ ಗಾಳಿ;
(ಶ್ರೀಕಂಠಯ್ಯ ಬಿ.ಎಂ. (ಸಂ); ೧೯೫೫, ಪುಟ–೧೧೨)

ಎಂದು ಎಚ್ಚರಿಸಿ ನಾಡಿನ ಉದಯದ ಮುಂಗುರಹನ್ನು ತೋರಿಸಿರುವರು.

'ಎನಿತು ಇನಿತು ಈ ಕನ್ನಡ ನುಡಿಯು'-ಎಂದು ಆರಂಭವಾಗುವ 'ಕನ್ನಡ ನುಡಿ' ಕವನದಲ್ಲಿ ಕನ್ನಡವು ಎಂಥದ್ದು ಎಂಬುದನ್ನು ತಿಳಿಸಿರುವರು. ಇದು 'ಮನವನು ತಣಿಸುವ ಮೋಹನ ಸುಧೆಯು!" ವೀಣೆಯ ಸಂಗೀತ ಗಾಯನದಂತೆ, ಇಂಪಾದ ಬೆಳದಿಂಗಳಿನಂತೆ ತಂಪಾದುದಾಗಿದೆ. ಇಂಥಹ ನುಡಿಯನ್ನು ಕೇಳಿದರೆ ಇದು-

"ಗಿಳಿಗಳು ಉಲಿಯುವ
ಮೆಲುಮಾತುಗಳೋ?
ಕಳಕಂಠಗಳಾ
ಚೆಲುವಿನ ಕುಕಿಲೊ?"
(ಶ್ರೀಕಂಠಯ್ಯ ಬಿ.ಎಂ. (ಸಂ); ೧೯೫೫, ಪುಟ-೧೦೨)

ಎಂದು ಸಂದೇಹ ಬರುತ್ತದೆ. ಹೀಗೆ ಕನ್ನಡ ಭಾಷೆಯ ಚೆಲುವು, ಸೊಗಸನ್ನು ವರ್ಣಿಸಿರುವರು ಜಿ.ಪಿ. ರಾಜರತ್ನಂ ಅವರು "ಕನ್ನಡಪದಗೊಳು"-ಪದ್ಯದಲ್ಲಿ ಹೆಂಡ ಕುಡುಕರ ಮಾತಿನ ಶೈಲಿಯಲ್ಲಿ ಅಪ್ಪಟ ಕನ್ನಡಾಭಿಮಾನವನ್ನು ಮೆರೆದು, ಕುಡುಕರ ಭಾಷೆಯನ್ನು ಕನ್ನಡ ಕಾವ್ಯ ಕ್ಷೇತ್ರಕ್ಕೆ ಪರಿಚಯಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ.

ಯೆಂಡ ಯೆಡ್ತಿ ಕನ್ನಡ್ ಪದಗೊಳ್
ಅಂದ್ರೆ ರತ್ನಂಗ್ ಪ್ರಾಣ!
ಬುಂಡೆನ್ ಎತ್ತಿ ಕುಡದ್ಬುಟ್ಬಾಂದ್ರೆ
ತಕ್ಕೋ ಪದಗೊಳ್ ಬಾಣ
(ರಾಜರತ್ನಂ ಜಿ.ಪಿ. ೨೦೧೨, ಪುಟ-೧೨)

ಹೆಂಡ-ಹೆಂಡ್ತಿ-ಕನ್ನಡ ಪದಗಳು ಇವು ಮೂರು ರತ್ನನಿಗೆ ಬಹಳ ಇಷ್ಟ. ಅದರಲ್ಲೂ ಕನ್ನಡವಂತೂ ಪ್ರಾಣಕ್ಕಿಂತಲೂ ಮಿಗಿಲು. ಒಂದು ವೇಳೆ ದೇವರು ರತ್ನನನ್ನು ಪರೀಕ್ಷಿಸಲೆಂದು ಬಂದು 'ಹೆಂಡಬಿಡುರತ್ನ'-ಅಂದರೆ ಬಿಡುತ್ತೇನೆ, ಹೆಂಡ್ತಿನೂ ಬಿಡು ರತ್ನ'-ಅಂದರೆ ಬಿಡುತ್ತೇನೆ, ಆದರೆ ಅವನೇನಾದರೂ-'ಕನ್ನಡ ಪದಗೊಳ್ ಅಡೋದ್ನಲ್ಲ ನಿಲ್ಲೀಸ್'-ಅಂದರೆ ದೇವರಾದರೂ ಸಹಿತ ಅಟವನಿಗೆ 'ಖತ್ನ' ಮಾಡುತ್ತೇನೆ ಎಂದಿರುವನು. ಇಷ್ಟೇ ಅಲ್ಲ ದೇವರು ರತ್ನನನ್ನು-"ನರಕಕ್ಕೆ ಇಳಿಸಿ ನಾಲ್ಗೆ ಸೀಳ್ಸಿಬಾಯ್ ಒಲಿಸಾಕಿದ್ರೂ"-ಮೂಗಿನಿಂದ ಕನ್ನಡ ಪದಗಳನ್ನು ಮಾತನಾಡುತ್ತೇನೆ'-ಎಂಬ ದೃಢತೆಯನ್ನು ಹೊಂದಿ, ಪ್ರಪಂಚ ಇರುವವರೆಗೂ ಕನ್ನಡ ಬೆಳಗಲೆಂದು ಹಾರೈಸಿರುವರು.

ಬೇಂದ್ರೆಯವರು 'ಕನಸಿನೊಳಗೊಂದು ಕನಸು' ಕವನದಲ್ಲಿ ತಾವು ಸ್ವಪ್ನದಲ್ಲಿ ಕನ್ನಡ ನಾಡಿನ ತಾಯಿ ಅತಿಮಾನುಷ ದೃಶ್ಯವನ್ನು ಕಂಡು ಅವಳೊಂದಿಗೆ ಸಂಭಾಷಿಸಿರುವದಾಗಿ ಹೇಳಿದ್ದಾರೆ. ಈ ಕವನ

೧೯೩೦ರ ಸುಮಾರಿನಲ್ಲಿದ್ದ ಕನ್ನಡ ನಾಡಿನ ಸ್ಥಿತಿಯನ್ನು ಬಿಂಬಿಸುತ್ತದೆ. ತಾಯಿ-ಮಗನ ಸಂಭಾಷಣೆಯನ್ನೊಳಗೊಂಡ ಈ ಕವನವನ್ನು ನಟರಾದ ಟಿ.ಪಿ. ಕೈಲಾಸಂರವರು, ಅಂದು ನಾಡಿನಾದ್ಯಂತ ಸಭೆ-ಸಮಾರಂಭಗಳಲ್ಲಿ ಇದನ್ನು ಎರಡು ಭಿನ್ನ ಧ್ವನಿಗಳಲ್ಲಿ, ಏಕಪಾತ್ರಭಿನಯ ಮಾಡಿ ತೋರಿಸಿ ಜನರನ್ನು ಏಕೀಕರಣ ಚಳುವಳಿಗೆ ಪ್ರಚೋದಿಸುತ್ತಿದ್ದರು.

ಈ ಕವನದಲ್ಲಿ ಸ್ವಪ್ನದಲ್ಲಿ ಕಂಡ ನಾಡತಾಯಿಗೆ ಕವಿಯು ಹೆಸರೇನು? ಯಾರ ಮನೆಯವಳು, ಮನೆ ಇಲ್ಲವೆ? ಮಕ್ಕಳಿಲ್ಲವೆ?-ಎಂದು ಹಲವಾರು ಪ್ರಶ್ನೆಗಳನ್ನು ಒಂದರ ನಂತರ ಒಂದು ಕೇಳುತ್ತಾನೆ. ಅವಳು ಒಂದೊಂದಾಗಿ, ಒಗಟಿನಂತೆ ಹೆಸರಾಗಿಯೂ ಹೇಳ ಹೆಸರಿಲ್ಲ, 'ಬಯಲೇ ತನ್ನ ಮನೆ' ಅದನ್ನೇ ಕೇಳಬೇಕು, 'ಮಕ್ಕಳಿದ್ದಾರೆಂದರೆ ಯಾರೂ ನಂಬಲಾರರು' 'ಮನೆಯೇ ಮುನಿದೆದ್ದಿದೆ'-ಹೀಗೆ ಅರ್ಥಗರ್ಭಿತವಾಗಿ ಉತ್ತರಿಸುತ್ತಾಳೆ. ಕವಿಯು ಇವಳಲ್ಲಿ ರಾಜಕಳೆಯನ್ನು ಕಂಡು 'ಯಾವುದಾದರೂ ನಾಡದೇವಿಯೆ; ಎಂದು ಹೇಳುತ್ತಾನೆ. ಭಾವುಕರಿಗೆ ದೇವಿಯೇ ನಾನು ಎನ್ನುತ್ತಾಳೆ. ಅವಳ ದೀನಸ್ಥಿತಿಯನ್ನು ಕಂಡು ಏನಾದರೂ ಬೇಡಲು ಬಂದಿರುವಿಯಾ ಎಂದು ಕೇಳುತ್ತಾನೆ. 'ಬೇಡಿದುದನ್ನು ಕೊಡುವೆಯಾ'-ಎನ್ನುವಳು; ಅದಕ್ಕೆ ಕವಿ ಖಚಿತ ಉತ್ತರ ಕೊಡದೆ 'ಕೊಡುವೆನು ನಾನೆನ್ನಬಹುದೇ? ಎನ್ನುವನು. ಇಂಥ ಹಿಂಜರಿಕೆಯ, ಹಾರಿಕೆಯ ಉತ್ತರದಿಂದ ಬೇಸತ್ತ ತಾಯಿ ಉತ್ಸಾಹದಿಂದ ಮುನ್ನುಗ್ಗಿ ಮುಂದೆ ಬರಲು ಹೇಳುತ್ತಾಳೆ. ಕವಿಯು, ಎಲ್ಲವರು ದೈವವನ್ನು ಪರೀಕ್ಷಿಸುವಂತೆ ಧೈರ್ಯದಿಂದ ಕೋಪಿಸಿಕೊಂಡು-'ಚಂಡಿ ಚಾಮುಂಡಿ ಪೇಳ್ ಬೇಕಾದುದೇನು? ಎಂದು ಏನೋ ಸಾಮಾನ್ಯವಾದ ಬೇಡಿಕೆ ಇರಬೇಕೆಂದು ಹೇಳುವನು. ಆದರೆ ಅವಳು 'ಗಂಡುಸಾದರೆ ನಿನ್ನ ಬಲಿಕೊಡುವೆಯೇನು?-ಎಂದು ಆತನ ಗಂಡಸುತನವನ್ನೇ ಕೇಣುಕುತ್ತಾಳೆ. ನಾಡಿಗಾಗಿ ಪ್ರಾಣತ್ಯಾಗಕ್ಕೂ ಸಿದ್ಧರಿರಬೇಕೆಂಬುದು ಇದರ ಮರ್ಮ. ಇದನ್ನು ಕೇಳಿದ ಕವಿಗೆ-

"ಮನವು ನಡುಗಿತು, ತನವು ನವಿರಿಗೊಳಗಾಯ್ತು
ನೆನವು ನುಗ್ಗಿತು ಹೊರಗೆ ಕಂಡೆ ಬೆಳಗಾಯ್ತು"
(ಶ್ರೀಕಂಠಯ್ಯ ಬಿ.ಎಂ. (ಸಂ); ೧೯೯೫, ಪುಟ-೧೫೨)

-ಹೀಗೆ ಕನಸಿನಲ್ಲಿ ತಾಯಿ ಕಾಣಿಕೆಯನ್ನು ಕೇಳಿದಾಗ ಬೆಚ್ಚಿ ಬಿದ್ದು ಕನಸಿನಿಂದ ಎಚ್ಚರವಾಗುತ್ತಾನೆ. "ಕನ್ನಡ ಕಂದವ್ವನಲಾಲಿ"-ಪದ್ಯದಲ್ಲಿ ಭಾರತ ಮಾತೆಯು ತನ್ನ ತನುಜೆಯಾದ ಕನ್ನಡ ಕಂದವ್ವಳನ್ನು ತೊಟ್ಟಿಲೊಳು ತೂಗುತ್ತಾ 'ಜೋಜೋ'-ಎಂದು ಲಾಲಿ ಹಾಡುತ್ತಿರುವ ಚಿತ್ರಣವನ್ನು ಕೊಟ್ಟಿರುವರು.

"ಸಹ್ಯವಾಯಿತು ಬಾಳ್ವೆ ನಿನ್ನ ಚಿಂತಾಮಣಿಯು
ತುಂಬಿ ತುಡಿಯನ್ನು ಜೋಜೋ
ಸಹ್ಯಾದ್ರಿ ಶೃಂಗದೆಣೆ ನನ್ನ ತುಂಗಸ್ತನದ ಹಾಲು ಕುಡಿದಿನ್ನು ಜೋಜೋ

ನಾಳೆ ಬೆಳಗಿನವರೆಗೆ ಮಲಗು ಸಂಪಿಂಪಾಗಿ
ಆತ್ಮತನುಜಾತೆ ಜೋಜೋ"
(ಬೇಂದ್ರೆ ದ.ರಾ. (ಸಂ); ೧೯೮೨, ಪುಟ-೮೩)

ಏಕೀಕರಣಗೊಂಡು ಇನ್ನೂ ಉದಯವಾಗಬೇಕಾಗಿರುವ, ಶೋಷನೀಯ ಸ್ಥಿತಿಯಲ್ಲಿರುವ, ಶೈಶವಾಸ್ಥೆಯಲ್ಲಿರುವ ಕನ್ನಡ ನಾಡನ್ನು ಇನ್ನೂ ಹಾಲುಂಡು ಬೆಳೆಯಬೇಕಾಗಿರುವ ಭಾರತ ಮಾತೆಯ ಕೂಸೆಂದು ಬಣ್ಣಿಸಿರುವುದು ಬಹಳ ಔಚಿತ್ಯಪೂರ್ಣವಾಗಿದೆ.

'ದಿವ್ಯ-ಧ್ವನಿ-(ಅರಳು-ಮರಳು ಸಂಕಲನದ) ಕವನದಲ್ಲಿ ನಾಡಿನ ಐಕ್ಯತೆಯ ದಿವ್ಯ ಧ್ವನಿ ಮೊಳಗಿಸಿದ್ದಾರೆ. ಈ ಕನ್ನಡ ನಾಡಿಗೆ 'ಮೈ ಮೈಸೂರ' ಇದಕ್ಕೆ, 'ಕೂಡಲುಬಹುದು ಉಳಿದ ಕನ್ನಡದ ಚತುರ್ದಳ'-ಎಂದಿರುವರು. ಇದು ಮೈಸೂರ ಪ್ರದೇಶ ಅಭಿವೃದ್ಧಿ ಹೊಂದಿ ಪ್ರಗತಿಯಲ್ಲಿರುವದನ್ನು ಏಕೀಕರಣ ಸಂದರ್ಭದಲ್ಲಿ ಮೈಸೂರನ್ನೇ ಪ್ರಧಾನವಾಗಿಟ್ಟುಕೊಂಡು, ರಾಜ್ಯಕ್ಕೆ ಅದೇ ಹೆಸರನ್ನು ಇಟ್ಟುಕೊಳ್ಳಬೇಕು. ಉಳಿದ ಮುಂಬೈ ಕರ್ನಾಟಕ, ಮದ್ರಾಸ್ ಕರ್ನಾಟಕ, ಹೈದ್ರಾಬಾದ್ ಕರ್ನಾಟಕ, ಕೊಡಗು-ಮುಂತಾದ ಭಾಗಗಳನ್ನೇ ಅದಕ್ಕೆ ಸೇರಿಸಬೇಕೆಂಬ ಮೈಸೂರ ಭಾಗದವರ ಅಭಿಪ್ರಾಯವನ್ನು ಬಿಂಬಿಸುವಂತಿದೆ. ಕೊಡಗ-ತುಳುವ-ತೊಡವರು, ಉತ್ತರ-ದಕ್ಷಿಣದವರು, ಕೊಂಕಣ-ಕರಾವಳಿಯವರು, ಭೂತಳ-ಕುಂತಳ-ಭಾಗಮಂಡಲ-ಈ ಎಲ್ಲಾ ಭಾಗದವರು ಒಂದಾಗಿ ನಾಡಿನ ಉದಯವಾಗಲಿ, ಕನ್ನಡ ಗೆಲ್ಲಲ್ಲಿ-ಎಂದು ಆಶಿಸಿದ್ದಾರೆ. ಧಾರ್ಮಿಕ ವೈವಿಧ್ಯತೆಯನ್ನು ಕುರಿತು-"ಕೂಡಲಿ ಜಿನ ಹರ ಹರಿ ಶರಣ ನವಧರ್ಮದ ಐಕ್ಯಾವರಣ"-ಎಂದು ಜೈನ, ವೈಷ್ಣವ, ಶೈವ, ವೀರಶೈವ-ಮುಂತಾದ ಧರ್ಮಗಳ ನಡುವೆ ಸಾಮರಸ್ಯವುಂಟಾಗಿ ಹೊಸದಾದ ಧರ್ಮಸಮನ್ವಯವುಂಟಾಗಲೆಂದು ಆಶಿಸಿರುವರು. 'ಕನ್ನಡ ಪಾವನ ಪರಂಪರೆ' ಕವನದಲ್ಲಿ ಪ್ರಾಚೀನ ಕನ್ನಡ ನಾಡಿನ ಗತವೈಭವ ಮೆರೆದ ಬನವಾಸಿ, ಕುಂತಳ-ಮುಂತಾದ ಐತಿಹಾಸಿಕ ಪ್ರಾಂತ-ಕ್ಷೇತ್ರ-ನಗರಗಳನ್ನು, ಕನ್ನಡ ನಾಡಿನ ಗಡಿ ಮೇರೆಗಳನ್ನು ಬಣ್ಣಿಸಿರುವರು ಬಯಲೆಲ್ಲಾ ಬಾಯಾಗಿ ತಾಯ್ನುಡಿಯು-

"ಎಬ್ಬಿಸಿದಳೆಲ್ಲಮ್ಮ ಎಲ್ಲರನ್ನು
ಜೀವನದ ದ್ವಂದ್ವಕ್ಕೆ ಹುರುದುಂಬಿಸಿದಳು ತಾನು
ಗೆಲ್ಲಲಣಿಮಾಡಿದಳು ಎಲ್ಲರನ್ನು"
(ಬೇಂದ್ರೆ ದ.ರಾ. (ಸಂ); ೧೯೬೮, ಪುಟ-೪೧೬)

ನಾನು-ನುಡಿಗಾಗಿ ಹೋರಾಡಲು ಅಣಿಯಾಗುವಂತೆ ಹುರುದುಂಬಿಸುತ್ತಾಳೆ. ಮೈಸೂರಿನ ಚಾಮಂಡಿ, ಕೊಲ್ಲೂರಿನ ಮೂಕಾಂಬಿಕಾ, ಬನವಾಸಿ-ಗೋಕರ್ಣದ ಭದ್ರಕಾಳಿ, ಬಾದಾಮಿಯ ಬನಶಂಕರಿ, ಗುಡ್ಡದ ಎಲ್ಲಮ್ಮಾ ಹರಿಸಿದ-ಈ ಎಲ್ಲಾ ಪುಣ್ಯಕ್ಷೇತ್ರಗಳ ದೇವತೆಗಳು ಕನ್ನಡ ತಾಯಿಯ ಪ್ರತಿರೂಪವೆಂಬುದು ಕವಿಯು ಕಂಡ ದರ್ಶನವಾಗಿದೆ. "ಕೇಳಿನುಡಿ, ಕಂಡ ನಡೆ" (ಇದೇ ಸಂಕಲನದ)

ಕವನದಲ್ಲಿ ಹೊಸನಾಡನ್ನು ಕಟ್ಟಬೇಕಾದ ಕನ್ನಡಿಗರು ನಡೆ-ನುಡಿಗಳನ್ನು ಹೇಗೆ-ಎಂಥವುಗಳನ್ನು ರೂಢಿಸಿಕೊಳ್ಳಬೇಕೆಂಬುದನ್ನು ಉಪದೇಶಿಸಿರುವರು. ಭರತಖಂಡ ಅಖಂಡವಾದುದು ಇದರಲ್ಲಿ ಹತ್ತು ಹಲವಾರು ದೇಶ (ರಾಜ್ಯ) ಸೇರಿವೆ. ಇನ್ನು ಮೇಲೆ ಬೇರೆ ಬೇರೆ ಭಾಷೆ-ವೇಷ ಬೇಡ ದ್ವೇಷವೂ ಸಾಕು ಒಂದಾಗಿರೋಣವೆಂದಿರುವರು.

"ನಾಲ್ಕು ನಾಡ ನಡುವಿನಲ್ಲಿ
ಕನ್ನಡ ತಲೆಯೆತ್ತಿರೆ
ಚತುರ್ಮುಖ ಪ್ರಪಂಚವೊಂದು
ತನ್ನ ಬೀಜ ಬಿತ್ತಿರೆ"

(ಬೇಂದ್ರೆ ದ.ರಾ. (ಸಂ); ೧೯೬೮, ಪುಟ-೧೮)

-ಎಂದು ಆಂದ್ರ ತಮಿಳುನಾಡು, ಕೇರಳ, ಮಹಾರಾಷ್ಟ್ರಗಳ- ನಡುವೆ ಕರ್ನಾಟಕ ರಾಜ್ಯ ತಲೆಯೆತ್ತಿದೆ. ಇದುವರೆಗೆ ನಾಲ್ಕು ಪ್ರತ್ಯೇಕ ಪ್ರಪಂಚದಂತಿದ್ದ ಮುಂಬೈ ಕರ್ನಾಟಕ, ಹೈದರಾಬಾದ ಕರ್ನಾಟಕ, ಮದ್ರಾಸ್ ಕರ್ನಾಟಕ, ಮೈಸೂರು ಸಂಸ್ಥಾನ-ಇವು ಒಂದಾಗಿರುವದನ್ನು ಹೇಳಿದ್ದಾರೆ.

'ಕನ್ನಡ ನಾಡ ರಾಣಿ' ಕವನದಲ್ಲಿ ಕನ್ನಡ ನಾಡ ತಾಯಿಯನ್ನು 'ಏಳು ಶೂರರ ಖಣೀ, ಏಳು ಶೂರರ ರಾಣಿ ಏಳು ತೀರದ ವೀರ ರಸದ ವಾಣಿ'-ಎಂದು ನಾಡಿನ ಸಾಹಸ, ಶೌರ್ಯಗಳನ್ನು ವೈಭವೀಕರಿಸಿ ಹಾಡಿ ಹೊಗಳಿರುವರು. ಈ ರಾಣಿಯ ಕನ್ನಡ ನಾಡು ಸಾಮಾನ್ಯವಲ್ಲ.

"ಶೂರ ಪುರುಷರ ಕೊನೆಯು ವೀರ ಕವಿಗಳ ಗೊನೆಯು
ಭೀರುತನವೆಂಬ ಶಲ್ಯಕ್ಕೆ ಮೊನೆಯು
ಧೀರ ಸತಿಯರ ತೆನೆಯು ವೀರರಸಗಳ ಸೊನೆಯು"

(ಶ್ರೀಕಂಠಯ್ಯಬಿ.ಎಂ. (ಸಂ); ೧೯೫೫, ಪುಟ ೧೧೯)

ಸತ್ತಂತಿರುವವರಲ್ಲಿ ಚೈತನ್ಯ ತುಂಬು, ನಾಡನ್ನು ಸುತ್ತಿರುವ ವಿಷಯವನ್ನು ಹೀರು, ಬತ್ತಿರುವ ಅಮೃತದ ಝುರಿಯನ್ನು ಮತ್ತೆ ಹರಿಸು, ಸತ್ವವುಳ್ಳ ನೂರಾರು ಬೀಜಗಳನ್ನು ಬಿತ್ತು. ಬೇರು ಬಿಟ್ಟು ಭಯವನ್ನು ಕಿತ್ತೆಸೆಯೆಂದು ಕೇಳಿಕೊಂಡಿರುವರು. ಹಿಂದೆ ಹಿರಿದಾಗಿ ಬಾಳಿದ್ದ ಆ ದಿನ ಪುನಃ ಬಂದೀತೆ? ಎಂದು ನಿರೀಕ್ಷಿಸಿರುವರು. ನೀನು ನೆಲೆಸಿದ ಕಾಡು ಸಹಿತ ನಾಡಾಗುತ್ತದೆ. ಈ ನಾಡನ್ನು ಪ್ರಾಣ ಪುತ್ರರ ಬೀಡನ್ನಾಗಿ ನಂದನವನನ್ನಾಗಿ ಮಾಡಬೇಕೆಂದು ನಾಡರಾಣಿಯನ್ನು ಕವಿ ಕೇಳಿಕೊಂಡಿರುವನು. 'ಒಂದೇ ಕರ್ನಾಟಕ' (ವಿನಯ ಸಂಕಲನದ) ಕವನದಲ್ಲಿ ಏಕೀಕರಣಗೊಳಿಸಲು ಭಾವೈಕ್ಯತೆಯನ್ನು ಬೆಸೆದಿದ್ದಾರೆ.

"ಒಂದೇ ಒಂದೇ ಒಂದೇ ಕರ್ನಾಟಕ ಒಂದೇ
ಇಂದೆ ಮುಂದೆ ಎಂದೇ ಕರ್ನಾಟಕ ಒಂದೇ
ಜಗದೇಳಿಗೆಯಾಗುವದಿದೆ ಕರ್ನಾಟಕದಿಂದೆ"

(ಬೇಂದ್ರೆ. ದ.ರಾ.೧೯೭೦, ಪುಟ-೪೧)

ಪ್ರತ್ಯೇಕತೆಯ ಕೂಗೆಬ್ಬಿಸುವವರಿಗೆ ಇಂದು-ಮುಂದೆ-ಎಂದೆಂದಿಗೂ ಕರ್ನಾಟಕ ಒಂದೇ ಎಂದು ಹೇಳಿರುವರು. ಒಂದಾದ ಕರ್ನಾಟಕದಿಂದ ಬರಿ ರಾಜ್ಯ, ದೇಶಕ್ಕಲ್ಲ ಜಗದೇಳಿಗೆಯಾಗುವದಿದೆ ಎಂದಿರುವರು. ಇಲ್ಲಿಯ ಜನ-ಮನ-ಕುಲ, ನೀತಿ ಭಾಷೆ-ಎಲ್ಲವೂ ಒಂದೆ. ಹೀಗೆ ಭಾವಿಸದ, ಹೆಸರವರು, ಅವರು ಇದ್ದರೂ ಅಷ್ಟೆ. ಇರದಿದ್ದರೂ ಅಷ್ಟೆ ಎಂದಿದ್ದಾರೆ. ಈ ರೀತಿಯ ಕನ್ನಡಿಗರೆಲ್ಲರೂ ಒಂದೆಂಬ ದೀಕ್ಷೆಯನ್ನು ಹೊಂದಿದ ಪ್ರತಿಯೊಬ್ಬನು ಆರ್ಯ, ಈ ದೀಕ್ಷೆಯನ್ನು ಹೊಂದದವನೇ ಶೂದ್ರನೆಂದು ವರ್ಣಾಶ್ರಮದ ಪರಿಭಾಷೆಯಲ್ಲಿ ವರ್ಣಿಸಿರುವರು. ಅಲ್ಲದೆ 'ಕನ್ನಡವೂ, ಭಾರತವೂ, ಜಗವೆಲ್ಲವೂ ಒಂದೇ'-ಎಂದು ಘೋಷಿಸಿ ಕನ್ನಡವನ್ನು ವಿಶ್ವಾತ್ಮಕಗೊಳಿಸಿರುವರು.

ಕುವೆಂಪುರವರು ಎಷ್ಟೊಂದು ದೇಶಾಭಿಮಾನಿಗಳಾಗಿದ್ದರೋ ಅಷ್ಟೇ ಕನ್ನಡ ನಾಡು-ನುಡಿಯ ಪ್ರೇಮಿಗಳಾಗಿದ್ದರು. ದೇಶದ ಸ್ವಾತಂತ್ರ್ಯ ಚಳುವಳಿಯ ಬಗ್ಗೆ ಯಾವ ರೀತಿ ಸ್ಪಂದಿಸಿದ್ದರೋ ಅದೇ ರೀತಿ ಏಕೀಕರಣ ಚಳುವಳಿಗೂ ಸ್ಪಂದಿಸಿದ್ದಾರೆ. ೧೯೨೪-೨೫ರ ಸುಮಾರಿನಲ್ಲಿಯೇ ರಚಿಸಿದ-'ಕರ್ನಾಟಕ ರಾಷ್ಟ್ರಗೀತೆ'-ಎಂಬ ಕವನ ರಚಿಸಿದರು. ಅದೇ ಮುಂದೆ ಸಂಗ್ರಹ-ಪರಿಷ್ಕರಣೆಯಾಗಿ 'ನಾಡಗೀತೆ'ಯಾಯಿತು. ಇದರಲ್ಲಿ 'ಜಯ್ ಭಾರತ ಜನನಿಯ ತನುಜಾತೆ ಜಯಹೇ ಕರ್ನಾಟಕ ಮಾತೆ'-ಎಂದು ಕನ್ನಡ ಮಾತೆಯನ್ನು ಭಾರತಮಾತೆಯ ಹಿರಿಯ ಮಗಳೆಂದು ಭಾವಿಸಿರುವರು. ಕನ್ನಡ ನಾಡನ್ನು ಭಾರತದ ಅವಿಭಾಜ್ಯ ಅಂಗವಾಗಿ ಕಂಡಿರುವರು. ಇವರ ಕನ್ನಡ ನಾಡು-ನುಡಿಯ ಪ್ರೇಮ ಮತ್ತು ಕರ್ನಾಟಕ ಏಕೀಕರಣ ಹೋರಾಟಕ್ಕೆ ಇಟ್ಟುಕೊಂಡ ಧ್ಯೇಯ-ಧೋರಣೆಗಳು ಭಾರತದ ಅಖಂಡತೆಗೆ ರಾಷ್ಟ್ರೀಯತೆಗೆ ವಿರೋಧವಾಗಲಿ, ನ್ಯೂನತೆಯಾಗಲಿ ತರಲಿಲ್ಲ. ಅದಕ್ಕೆ ಪೂರಕವಾಗಿಯೇ ಇತ್ತು.

ಅಂದು ಮೈಸೂರು ಸಂಸ್ಥಾನದ ಆಡಳಿತಕ್ಕೊಳಪಟ್ಟ ಪ್ರದೇಶದಲ್ಲಿದ್ದವರು ಅಖಂಡ ಕರ್ನಾಟಕಕ್ಕೆ ಹೋರಾಡುವದೆಂದರೆ, ಕರ್ನಾಟಕತ್ವದ ಕಲ್ಪನೆ ಮಾಡಿಕೊಳ್ಳುವದೂ ಸಹಿತ ರಾಜದ್ರೋಹದ ಕೆಲಸವೆಂದು ತಿಳಿದ ಕಾಲವದು. ಅಂತೆಯೆ-ಬಿ.ಎಂ.ಶ್ರೀಯವರು ತಮ್ಮ ಕಾವ್ಯಗಳಲ್ಲಿ ಇದು 'ನಾಲ್ಮಡಿ ಕೃಷ್ಣನ ಮೈಸೂರು'-ಎಂದು ಸಂಬೋಧಿಸಿ, ಆ ರೀತಿಯ ರಾಜನಿಷ್ಠೆಯನ್ನು ಹೊಂದಿರುವದನ್ನು ತೋರಿಸಿದ್ದಾರೆ. ಕನ್ನಡ ನಾಡು-ನುಡಿಯ ಸೇವೆಯೆಂದರೆ ರಾಜನ ಸೇವೆಯೆಂದು ಪರಿಗಣಿಸಲಾಗಿತ್ತು. ಅಂತೆಯೇ ಆ ರೀತಿ ಸೇವೆಯಲ್ಲಿ ನಿರತರಾಗಿದ್ದ ಬಿ.ಎಂ. ಶ್ರೀಯವರಿಗೆ-'ರಾಜಸೇವಾಸಕ್ತ' ಎಂಬ ಬಿರುದು ದಯಪಾಲಿಸಲಾಗಿತ್ತು. ಇಂಥಹ ಪರಿಸರದಲ್ಲಿ ಕುವೆಂಪುರವರು ಕರ್ನಾಟಕ ಏಕೀಕರಣಕ್ಕಾಗಿ ಹೋರಾಟ ನಡೆಸಿದರು. ಏಕೀಕರಣ ಪರವಾಗಿ ಹೋರಾಡಲು ಕಾವ್ಯದ ಮೂಲಕ ಕರೆಕೊಟ್ಟಿದ್ದಾರೆ. ಸಭೆ-ಸಮಾರಂಭಗಳಲ್ಲಿ ಆ ಪರವಾಗಿ ಮಾತನಾಡಿದ್ದಾರೆ. ಇದರ ಬಗ್ಗೆ ಸರಕಾರದಿಂದ ಅಗಾಗ್ಗೆ ಅವರಿಗೆ ನೋಟಿಸುಗಳು-ವಿವರಣೆ ಕೇಳುವ ಪತ್ರಗಳು ಬರುತ್ತಿದ್ದವು. ಈ ರೀತಿ ೧೯೪೯ ರಲ್ಲಿ ಒಮ್ಮೆ ಮಹಾರಾಜ ಕಾಲೇಜಿನ ಸಮಾರಂಭವೊಂದರಲ್ಲಿ ಏಕೀಕರಣ ಪರವಾಗಿ ಮಾತನಾಡಿದ್ದಕ್ಕೆ

ಸಚಿವರೊಬ್ಬರಿಂದ ಎಚ್ಚರಿಕೆ ನೋಟಿಸ್ ಬರುತ್ತದೆ. ಇವುಗಳಾವುದಕ್ಕೂ ಎದೆಗುಂದದೆ ಅವುಗಳ ಪ್ರತಿಭಟನೆಯಾಗಿಯೇ–"ಅಖಂಡ ಕರ್ನಾಟಕ" ಕವನ ಇವರಿಂದ ಹೊರಹೊಮ್ಮುತ್ತದೆ. ಇದರಲ್ಲಿ ಕುವೆಂಪುರವರು ಹೇಳಿರುವದು ಕಂಡಿರುವದು ಕೇವಲ ರಾಜಕೀಯ, ಭೌಗೋಳಿಕ, ಕರ್ನಾಟಕವನ್ನಲ್ಲ. ಅಂದು–ಇಂದು–ಮುಂದು ಪರಂಪರಾಗತವಾಗಿ ಇದ್ದ–ಇರುವ–ಇರಬೇಕಾದ ಸಾಂಸ್ಕೃತಿಕ ಕರ್ನಾಟಕತ್ವವನ್ನು ಅಂತೆಯೇ–'ಇಂದು ಬಂದು ನಾಳೆ ಸಂದು ಹೋಗುವ ಸಚಿವ ಮಂಡಲ ಕೃತಕವಾದದ್ದು, ಅದು ಬೂಟಾಟಿಕೆಯ, ರಾಜಕೀಯ–ನಾಟಕ, ಆದರೆ ಸಾವಿರಾರು ವರ್ಷದ ಸಂಸ್ಕೃತಿ ದೇವಿ ಸಚಿವ ಮಂಡಲ ಕೃತಕವಾದದ್ದು, ಅದು ಬೂಟಾಟಿಕೆಯ, ರಾಜಕೀಯ ನಾಟಕ, ಆದರೆ ಸಾವಿರಾರು ವರ್ಷದ ಸಂಸ್ಕೃತಿ–ಸಾಹಿತ್ಯದ ಪರಂಪರೆಯುಳ್ಳ ಕರ್ನಾಟಕದಲ್ಲಿ ನೃಪತುಂಗನೇ ಚಕ್ರವರ್ತಿ, ಪಂಪನು ಮುಖ್ಯಮಂತ್ರಿ, ಸರಸ್ವತಿ ದೇವಿ ರಚಿಸಿದ ಸಚಿವ ಮಂಡಲಿಯಲ್ಲಿ ರನ್ನ, ಜನ್ನ, ನಾಗವರ್ಮ, ರಾಘವಾಂಕ, ಹರಿಹರ, ಬಸವೇಶ್ವರ, ಕುಮಾರವ್ಯಾಸ, ಸರ್ವಜ್ಞ, ಷಡಕ್ಷರ–ಮುಂತಾದವರೇ ಸಚಿವರೆಂದು ಬಣ್ಣಿಸಿರುವರು. ಏಕೀಕೃತಗೊಂಡ ಸಂದರ್ಭದಲ್ಲಿ ರಚಿಸಿದ–"ಕರ್ನಾಟಕರಾಜ್ಯೋದಯ ಶ್ರೀಗೀತೆ"ಯಲ್ಲಿಯೂ ಸಾವಿರ (ಚದರ) ಸಂವತ್ಸರ ಕಾಲದ ಸಂಸ್ಕೃತಿ ಕರ್ನಾಟಕವನ್ನು ನೆನೆಯಲು ಹೇಳಿದ್ದಾರೆ. 'ಕರ್ನಾಟಕ'–ಎಂಬ ಹೆಸರಿನಡಿ ಈ ನಾಡು ಒಂದು ಗೂಡುವಲ್ಲಿ ಮೈಸೂರ ಭಾಗದ ಕೆಲವರು ಹಿಂಜರಿದರು. ಅಲ್ಲದೆ ಒಂದುಗೂಡಿದ ಮೇಲೂ ಈ ಹೆಸರಿಡುವುದರ ಬಗ್ಗೆ ಇದೇನು? ಬರಿಯ ಹೆಸರು, ಎಂದು ತಾತ್ಸಾರ ಮನೋಭಾವನೆ ಹೊಂದಿದವರಿಗೆ 'ಕರ್ನಾಟಕ' ಹೆಸರಿನ ಮಹತ್ವವನ್ನು ಹೀಗೆ ಹೇಳಿದ್ದಾರೆ:

"ಕರ್ನಾಟಕ ಎಂಬುದೇನು
ಹೆಸರೆ ಬರಿಯ ಮಣ್ಣಿಗೆ
ಮಂತ್ರಕಣಾ! ಶಕ್ತಿ ಕಣಾ!
ತಾಯಿ ಕಣಾ! ದೇವಿ ಕಣಾ!
ಬೆಂಕಿ ಕಣಾ! ಸಿಡಿಲು ಕಣಾ!"

(ಕುವೆಂಪು(ಸಂ); ೧೯೬೬, ಪುಟ–೭)

ಏಕೀಕೃತ ಪೂರ್ವದಲ್ಲಿ ಮತ್ತು ಏಕೀಕೃತಗೊಂಡ ನಂತರವೂ ಯಾವಾಗಲೂ ಕುವೆಂಪುರವರು ತಮ್ಮ ಬರಹಗಳಲ್ಲಿ, ಭಾಷಣಗಳಲ್ಲಿ, ಈ ರಾಜ್ಯಕ್ಕೆ ಕರ್ನಾಟಕವೆಂದೇ ಸಂಬೋಧಿಸಿರುವರು.

೧೯೭೩ ನವ್ಹಂಬರ್ ೧ರಂದು ರಾಜ್ಯಕ್ಕೆ–'ಕರ್ನಾಟಕ'ವೆಂದು ನಾಮಕರಣವಾದನ್ನು ಕವನವೊಂದರಲ್ಲಿ–'ಕರ್ನಾಟಕ–ಹಳೆಯದೆ ಅದು ಹೊಸತಾಯಿತು ಹೆಸರು'–ಎಂದು ಹರ್ಷಗೊಂಡರು. ೧೯೪೪ರಲ್ಲಿ ಮೈಸೂರಿನ ಪ್ರಜಾಪ್ರತಿನಿಧಿ ಸಭೆಯು ಏಕೀಕರಣಕ್ಕೆ ಇದು ಸಕಾಲವಲ್ಲವೆಂದು ನಿರ್ಣಯಿಸಿದಾಗ ಕುವೆಂಪುರವರು ಕೆರಳಿ "ಕರ್ನಾಟಕ ಮಂತ್ರದೀಕ್ಷೆ" ಕವನದ ಮೂಲಕ ಜನತೆಗೆ–

"ದೀಕ್ಷೆಯ ತೊಡು ಇಂದೇ
ಕಂಕಣ ಕಟ್ಟಿಂದೇ!
ಕನ್ನಡ ನಾಡೊಂದೇ"

(ಕುವೆಂಪು(ಸಂ); ೧೯೬೬, ಪುಟ-೨)

ಎಂದು ಕರೆಯಿತ್ತರು. ನೃಪತುಂಗನ ಕಿರೀಟದ, ಪಂಪನ ಪಾದದ ಧೂಳಿಯ, ಕೂಡಲಸಂಗನ ಅಡಿಯ, ಕುಮಾರವ್ಯಾಸನ ಆರಾಧ್ಯ ದೇವರಾದ ವೀರನಾರಾಯಣ-ಇವರೆಲ್ಲರ ಸಾಕ್ಷಿಯಾಗಿ, ಸಹ್ಯಾದ್ರಿಯ, ಕಾವೇರಿಯ, ಚಾಮುಂಡಿಯ, ಗೊಮ್ಮಟ-ಇವರೆಲ್ಲರ ಮೇಲೆ ಆಣೆ ಇಟ್ಟು ದೀಕ್ಷೆ ತೊಡಲು ಹೇಳಿದ್ದಾರೆ. ಹೀಗೆ ಹೇಳುವಲ್ಲಿಯೂ ಕುವೆಂಪುರವರು ಸಮಗ್ರ ಕರ್ನಾಟಕದ ಕುರುಹುಗಳನ್ನು ಉಲ್ಲೇಖಿಸಿ ಭಾವನಾತ್ಮಕ ಏಕತೆಯನ್ನು ಕಲ್ಪಿಸಿರುವರು.

ನಾಡು ಒಂದಾದಾಗ 'ಏಕೈಕ ಕರ್ನಾಟಕ' ಕವನದಲ್ಲಿ 'ಕನಸು ನನಸಾಯಿತದೋ ಏಕೈಕ ಕರ್ನಾಟಕ'-ಎಂದು ಸಂತೋಷಗೊಂಡು ಕನ್ನಡ ನಾಡನ್ನು ಮನೋಜ್ಞವಾಗಿ ವರ್ಣಿಸಿರುವರು. ಪಶು-ಪಕ್ಷಿ, ಶಿಶು-ಜನ-ಮನದ, ಹಚ್ಚ ಹಸುರಿನ ಪ್ರಕೃತಿಯಾದ ಏಕೀಕರಣ ಕರ್ನಾಟಕವು-

"ನವಸರೋವರದಂತೆ, ನವಶಾಲಿವನದಂತೆ
ನವಯೌವನದ ಮೊದಲ ನವವಧುವರರಂತೆ
ನವಕವಿಯ ನವರಸ ನವೀನ ಕೃತಿಯಂತೆ
ದಿವ್ಯ ವೀಣಾಗಾನ ಗತಿಯಂತೆ
ಮೂಡುತಿದೆ ನೋಡು ಅದೊ ಏಕೈಕ ಕರ್ನಾಟಕ"

(ಕುವೆಂಪು(ಸಂ); ೧೯೬೬, ಪುಟ-೮)

ಎಂದು ರಾಜ್ಯೋದಯವನ್ನು ನವಸರೋವರ, ನವವನ, ನವಕವಿಯ ನವರಸಭರಿತ ಕೃತಿಗೆ, ಇನ್ನೂ ಮುಂದುವರೆದು ಮದುವೆಯಾದ ಮೊದಲ ದಿನದ ನವ ಯೌವನದ ವಧು-ವರರಿಗೆ ಮನೋಜ್ಞವಾಗಿ ಹೋಲಿಸಿರುವರು.

ಮೆಟ್ಟುವ ನೆಲ ಕರ್ನಾಟಕ' ಕವನದಲ್ಲಿ ಕನ್ನಡಿಗನಿಗೆ ಎಲ್ಲಾದರೂ ಇರು, ಹೇಗಾದರೂ ಇರು ಎಂದೆಂದಿಗೂ ಕನ್ನಡಿಗನಾಗಿರು. ಈ ಕನ್ನಡತನವೇ ಕನ್ನಡ ತಾಯಿಗೆ ಕಲ್ಪತರುವಿದ್ದ ಹಾಗೆ. ಹೃದಯದಲ್ಲಿ ಕನ್ನಡತನವನ್ನು ಪ್ರತಿಷ್ಠಾಪಿಸಿಕೊಂಡವ, ಆತ್ಮಾರ್ಪಿತಮಾಡಿಕೊಂಡವನಿಗೆ, ಅಮೇರಿಕದ ನೆಲ ಮೆಟ್ಟಿದ್ದರೂ ಅದು ಅವನಿಗೆ ಕರ್ನಾಟಕವೆ. ಕುಮಾರವ್ಯಾಸನ ಕಾವ್ಯ ಆಲಿಸುವ ಕಿವಿ, ಆಂಡೀಸ್ ಪರ್ವತ ಏರಿದರೂ ಅದು ಸಹ್ಯಾದ್ರಿಯೆ, ಪಂಪನ ಕಾವ್ಯ ಓದುವ ನಾಲಗೆ ಹೊಳೆಯ ನೀರನ್ನು ಕುಡಿದರೂ ಅದು ಅವನಿಗೆ ಕಾವೇರಿಯೆ: ಹರಿಹರ, ರಾಘವರಿಗೆ ನಮಿಸುವವ, ಹಾಳಾದ ಹಂಪೆಗೆ ಕೊರಗುವವ, ಬನವಾಸಿಗೆ ಕರಗುವ ಮನ, ಶ್ರವಣ ಬೆಳಗೊಳ, ಬೇಲೂರು-ಹಳೆಬೀಡು ನೆನೆಯುವವ,

ಜೋಗಜಲಪಾತಕ್ಕೆ ಧುಮುಕುವ ಮನಸ್ಸಿನವ, ಮಲೆನಾಡಿನ ಪ್ರಕೃತಿ ಸೌಂದರ್ಯಕ್ಕೆ ರೋಮಾಂಚನಗೊಳ್ಳುವವನು ಎಲ್ಲಿದ್ದರೇನು ಎಂದೆಂದಿಗೂ ಅವನಿಗೆ ಕನ್ನಡವೇ ಸತ್ಯ-ನಿತ್ಯ.

ನಾಡು-ನುಡಿಯ ಸಾಹಿತ್ಯ, ಸಂಸ್ಕೃತಿ, ಇತಿಹಾಸದ ಹಿರಿಮೆ-ವೈಭವಗಳ ಬಗೆಗೆ ಅಭಿಮಾನ ಹಾಗೂ ನಾಡಿನ ಹಿತಾಸಕ್ತಿಯನ್ನು ಹೊಂದಿರುವವನು, ನಾಡಿನ ಏಳ್ಗೆಯ ಬಗ್ಗೆ ಚಿಂತಿಸುವವನು ಜಗತ್ತಿನ ಯಾವುದೇ ಮೂಲೆಯಲ್ಲಿದ್ದರೂ ಅವನಿಗೆ-

"ಕನ್ನಡವೇ ಸತ್ಯ!
"ಕನ್ನಡವೇ ನಿತ್ಯ!
ಅನ್ಯವೆನಲದೆ ಮಿಥ್ಯಾ!"

(ಕುವೆಂಪು(ಸಂ); ೧೯೬೬, ಪುಟ-೧೯)

-ಹೀಗೆ ಕನ್ನಡಿಗನು ಎಲ್ಲೇ ಇದ್ದರೂ ಅವನಲ್ಲಿ ಕನ್ನಡತನದ ಸ್ವಾಭಿಮಾನ ಜಾಗೃತವಾಗಿರುವಂತೆ ಅಭಿಮಾನ ಮೂಡಿಸಿದ್ದಾರೆ. ಇದು ಅತಿಶಯೋಕ್ತಿ ಎನಿಸಬಹುದು. ಆದರೆ ವಿದೇಶಗಳಲ್ಲಿ ನೆಲಸಿರುವ ಅನಿವಾಸಿ ಭಾರತೀಯ ಕನ್ನಡಿಗರು, ಕನ್ನಡದಲ್ಲಿ ಸಾಹಿತ್ಯ ಸೃಷ್ಟಿಸಿರುವರು. ಸಂಘಟಿತರಾಗಿ ಕನ್ನಡ ನಾಡು-ನುಡಿಯ ಬಗೆಗೆ ಚಿಂತನೆ, ಹಿತಾಸಕ್ತಿ, ಚಟುವಟಿಕೆಗಳಲ್ಲಿ ತೊಡಗಿರುವದನ್ನು ಗಮನಿಸಿದರೆ, ಪ್ರಸ್ತುತವೆನಿಸುತ್ತದೆ.

ಕನ್ನಡವು ಆಡಳಿತ ಭಾಷೆಯಾಗಬೇಕು, ಶಿಕ್ಷಣ ಕನ್ನಡ ಮಾಧ್ಯಮವಾಗಬೇಕು. ಕನ್ನಡಕ್ಕೆ ಆದ್ಯತೆ ಕೊಡಬೇಕೆಂದು ಕನ್ನಡ ನುಡಿಯ ಏಳ್ಗೆಗಾಗಿ ಕುವೆಂಪುರವರು ಅವಿರತವಾಗಿ ಶ್ರಮಿಸಿದ್ದಾರೆ. ಆಗಿನ ರಾಜ್ಯಪಾಲರಾಗಿದ್ದ ನಿಟ್ಟೂರು ಶ್ರೀನಿವಾಸರಾಯರು ಸ್ವಾತಂತ್ರ್ಯೋತ್ಸವದ ಸಂದೇಶವನ್ನು ಕನ್ನಡದಲ್ಲಿ ಕೊಟ್ಟಿದ್ದರು. ಈ ಸುದ್ದಿ ಪತ್ರಿಕೆಗಳಲ್ಲಿ ಬಂದಿರುವುದನ್ನು ಓದಿದ್ದ ಕುವೆಂಪುರವರು ಹೀಗೆ ಪ್ರತಿಕ್ರಿಯಿಸಿದ್ದಾರೆ.

"ನನ್ನ ಹೊಟ್ಟೆಗೆ ಹಂಡೆ ಹಾಲು ಹೊಯ್ದಂತಾಯ್ತು
ಕನ್ನಡದಿ ಸ್ವಾತಂತ್ರ್ಯ ಸಂದೇಶವನು ನೀವು
ಕೊಟ್ಟಿರೆಂಬುದನೋದಿ ಪತ್ರಿಕೆಯೊಳಿಂದು!"

(ರಾಜೇಗೌಡಹ.ಕ. (ಸಂ); ೧೯೮೪, ಪುಟ-೩೦೫)

-ಎಂದು ತಮಗಾದ ಅತ್ಯಾನಂದವನ್ನು ವ್ಯಕ್ತಪಡಿಸಿದ್ದಾರೆ.

'ಕನ್ನಡ ಡಿಂಡಿಮ'-ಕವನದಲ್ಲಿ ಅಭಿಮಾನ ಶೂನ್ಯರಾದ ಕನ್ನಡಿಗರನ್ನು ನಾಡು-ನುಡಿಗಾಗಿ ಹೋರಾಡಲು, ಒಂದಾಗಲು ಕನ್ನಡ ಡಿಂಡಿಮ ಬಾರಿಸಿ ಎಚ್ಚರಿಸಬೇಕೆಂದು ಕವಿ ಕರ್ನಾಟಕ ಹೃದಯ ಶಿವನಲ್ಲಿ ಬೇಡಿಕೊಂಡಿರುವನು. ಬೇರೆ ಜಾತಿ-ಮತ-ಧರ್ಮದವರೆಂದು ಕಚ್ಚಾಡುವವರನ್ನು ಒಂದಾಗಿ

ಬಾಳುವಂತೆ ಹರಸಬೇಕೆಂದು ಬೇಡಿಕೊಂಡಿರುವರು. ಕವಿಗಳ-ಋಷಿಗಳ-ಸಂತರ ಆದರ್ಶ ಈ ನಾಡಿನಲ್ಲಿ ಸರ್ವರಿಗೂ ಸರ್ವೋದಯವಾಗಲೆಂದು ಆಶಿಸಿರುವರು.

'ಕನ್ನಡ'-ಕವನದಲ್ಲಿ ತಮಗೆ 'ಕನ್ನಡ'-ಎಂದರೆ ಎದೆ ಕುಣಿದಾಡುತ್ತದೆ; ಕಿವಿ ನಿಮಿರುತ್ತದೆ-ಎಂದು ಉತ್ಕಟಾಭಿಮಾನವನ್ನು ವ್ಯಕ್ತಪಡಿಸಿರುವರು. ಅಲ್ಲದೆ ಹರಿ-ಹರರಿಗೆ ಕನ್ನಡದಲ್ಲಿಯೆ ಬೇಡಿಕೊಂಡರೆ, 'ಹರಿ'- ವರಗಳನ್ನು ಕೊಡುತ್ತಾನೆ. 'ಹರ'-ಕೊಲ್ಲದೆ ರಕ್ಷಿಸುತ್ತಾನೆ. ದೇವರಲ್ಲಿಯೂ ಕನ್ನಡಾಭಿಮಾನದ ಭವ್ಯ ಕಲ್ಪನೆಯನ್ನು ಕೊಟ್ಟಿರುವರು. "ಅಳುಕದೀಕನ್ನಡಂ"-ಕವನದಲ್ಲಿ ಪಂಪ,ರನ್ನ, ಕುಮಾರವ್ಯಾಸ, ಲಕ್ಷೀಶ, ಹರಿಹರಾದಿಗಳ ಉಸಿರು (ಕಾವ್ಯಪರಂಪರೆ) ನಮ್ಮಲ್ಲಿರುವದರಿಂದ ಅಳುಕದೇ-ಅಳಿಯದೇ ಈ ಕನ್ನಡವು ಉಳಿಯುತ್ತದೆಂದು ಭರವಸೆ, ಆಶಾಭಾವನೆಯನ್ನು ಮೂಡಿಸಿದ್ದಾರೆ.

ಸರಕಾರವು ಶಿಕ್ಷಣದಲ್ಲಿ ಇಂಗ್ಲೀಷ್, ಹಿಂದಿ, ಸಂಸ್ಕೃತ ಈ ಭಾಷೆಗಳನ್ನು ಅಳವಡಿಸಬೇಕೆಂದಾಗ, ಕುವೆಂಪುರವರು, ವಿದ್ಯಾರ್ಥಿಗಳಿಗೆ ಅನ್ಯಭಾಷೆಗಳ ಭಾರ ಹೊರೆಸಿ ಕನ್ನಡವನ್ನು ಕೊಲ್ಲಲಾಗುತ್ತಿದೆಂದು ಪ್ರತಿಭಟಿಸಿದರು. 'ಸಾಕು ಈ ಬಲಾತ್ಕಾರ'-ಕವನದಲ್ಲಿಯೂ ಇಂಗ್ಲೀಷ ಭಾಷೆಯನ್ನು ಬಲಾತ್ಕಾರವಾಗಿ ಕಡ್ಡಾಯಗೊಳಿಸಿದ್ದಕ್ಕೆ ಪ್ರತಿಭಟಿಸಿದ್ದಾರೆ. ಬ್ರಿಟೀಷರಿಂದ ಸ್ವಾತಂತ್ರ್ಯಗೊಂಡರೂ ಇಂಗ್ಲೀಷ್ ಭಾಷೆಯಿಂದ ನಾವು ಮುಕ್ತರಾಗಲಿಲ್ಲವಲ್ಲವೆಂದು ಕೊರಗಿದ್ದಾರೆ.

"ಗಾಂಧಿಯಿಂದಿಂಗ್ಲೀಷರ ದಾಸ್ಯದಿಂ ಪಾರಾದೆ
ಅವನ ಕೊಂದಿಂಗ್ಲಿಷೀಗೆ ದಾಸಿಯಾದೆ"

(ಕುವೆಂಪು(ಸಂ); ೧೯೬೬, ಪುಟ-೧೫)

ಸ್ವ ಇಚ್ಛೆಯಿಂದ ಎಲ್ಲರೂ ಇಂಗ್ಲೀಷನ್ನೇ ತೆಗೆದುಕೊಂಡರೂ ಚಿಂತಯಿಲ್ಲ, ಆದರೆ ಬಲಾತ್ಕಾರದ ಅಂಕುಶವನ್ನು ತೆಗೆಯಿರಿ. ಈ ಬಲಾತ್ಕಾರದಿಂದಾಗಿ ಕನ್ನಡದ ಕ್ರಿಸ್ತನು ಇಂಗ್ಲೀಷ್ ಭಾಷೆಯೆಂಬ ಶಿಲುಬೆಯಲ್ಲಿ ಪ್ರಾಣ ಬಿಡುತ್ತಿದ್ದಾನೆಂದು ರೂಪಕ-ಉಪಮೆ-ಪ್ರತಿಮೆಗಳ ಮೂಲಕ ಸಮಸ್ಯೆಯ ಜಟಿಲತೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸಿ ಭಾಷೆಯ ಆಯ್ಕೆಯಲ್ಲಿ ವಿದ್ಯಾರ್ಥಿಗಳಿಗೆ ಸ್ವಾತಂತ್ರ್ಯ - ವಿರಲೆಂದು ಕೋರಿದ್ದಾರೆ. "ಸಾಯುತಿದೆ ನಿಮ್ಮ ನುಡಿ ಓ ಕನ್ನಡದ ಕಂದರಿರ!" ಕವನದಲ್ಲಿಯೂ-

"ಹೊರನುಡಿಯ ಹೊರೆಯಿಂದ ಕುಸಿದು ಕುಗ್ಗಿ
ರಾಜನುಡಿಯೊಂದು ರಾಷ್ಟ್ರ ನುಡಿಯೊಂದು
ದೇವನುಡಿಯೊಂದು ಹತ್ತಿ ಬಗ್ಗಿ
ನಿರಿನಿಟಿಲು ನಿಟಿಲೆಂದು ಮುದಿಮೂಳೆ ಮುರಿಯುತಿದೆ."

(ಕುವೆಂಪು(ಸಂ); ೧೯೬೬, ಪುಟ-೧೨)

ಹೊರ ನುಡಿಯಾದ–ಇಂಗ್ಲೀಷ್, ರಾಷ್ಟ್ರನುಡಿಯಾದ–ಹಿಂದಿ, ದೇವನುಡಿಯಾದ ಸಂಸ್ಕೃತ–ಈ ಭಾಷೆಗಳ ಹೊರೆಯಿಂದ ಕನ್ನಡ ತಾಯಿಯ ಮುದಿಮೂಳೆ ಮುರಿಯುತಿದೆಂದು ಮನನೊಂದು, ನಮ್ಮ ಭಾಷೆ ಉಳಿಸಿಕೊಳ್ಳಲು ಹೋರಾಡಲು ಹೇಳಿರುವರು.

"ನಿಮ್ಮ ನುಡಿ ನಿಮ್ಮ ಗಂಡಸುತನಕೆ ಹಿರಿಸಾಕ್ಷಿ
ಗೆಲವಿದ್ದರದಕೆ ನಿಮಗಿಹುದು ಶಕ್ತಿ"

(ಕುವೆಂಪು(ಸಂ); ೧೯೬೬, ಪುಟ–೧೩)

–ಈ ಭಾಷಾ ಹೋರಾಟದಲ್ಲಿ ನಿಮ್ಮ ನುಡಿ ಗೆದ್ದರೆ ನಿಮಗೂ ಶಕ್ತಿ ಅಲ್ಲದೆ, ಕನ್ನಡ ನುಡಿ ಕನ್ನಡಿಗರಿಗೆ ಪೌರುಷದ, ಗಂಡಸುತನದ ಸಂಕೇತವೂ ಆಗಿದೆ–ಎಂದು ಕೆಣಕಿರುವರು. ಅದಕ್ಕಾಗಿ–

"...... ಓ ಕನ್ನಡದ ಮಕ್ಕಳಿರ
ಗರ್ಜಿಸುವುದನು ಕಲಿತು ಸಿಂಹವಾಗಿ!
ನಖದಂಷ್ಟ್ರ ಕೇಸರಂಗಳ ಬೆಳೆಸಿ ಹುರಿಗೊಂಡು
ಶಿರವೆತ್ತಿ ನಿಂತು..............."

(ಕುವೆಂಪು(ಸಂ); ೧೯೬೬, ಪುಟ–೧೩)

–ಪ್ರತಿಭಟಿಸಿ ಹೋರಾಡಲು ಕರೆಕೊಟ್ಟಿದ್ದರು. 'ಪ್ರಾರ್ಥಿಸಿ, ಓ ಮಕ್ಕಳಿರಾ!' ಕವನದಲ್ಲಿ ಮಕ್ಕಳಿಗೆ ಇಂಗ್ಲೀಷ್‌ನಿಂದ ಪಾರಾಗಲು ದೇವರಲ್ಲಿ ಪ್ರಾರ್ಥಿಸಿಕೊಳ್ಳಲು ಹೇಳಿದ್ದಾರೆ. ಕನ್ನಡಕ್ಕಾಗಿ ಹೋರಾಡಲು ಕನ್ನಡ ಕಂದರಿಗೆ 'ಕನ್ನಡಮ್ಮನ ಹರಕೆ'– ಕವನದ ಮುಲಕ ಕರೆ ಕೊಟ್ಟಿದ್ದಾರೆ. ತಾಯ್ನಾಡಿಗೆ ದುಡಿದು ಮಡಿದರೆ, ಇಹ ಮತ್ತು ಪರಗಳೆಡರಲ್ಲೂ ಏಳ್ಗೆಯಾಗುತ್ತದೆಂದಿರುವರು. ಕನ್ನಡದ ಅಳಿವು–ಉಳಿವಿನ ಪ್ರಶ್ನೆ ಬಂದಾಗ 'ಕನ್ನಡದ ಉಳಿವೇ ನಮ್ಮ ಉಳಿವು, ಕನ್ನಡದ ಅಳಿವೇ ನಮ್ಮ ಅಳಿವು, ಕನ್ನಡವನ್ನು ಕೊಲ್ಲುವ ಮುನ್ನ ನನ್ನನ್ನು ಕೊಲ್ಲು'–ಎಂಬ ಧೀರೋದಾತ್ತ ನಿಲುವನ್ನು ತಾಳಲು ತಿಳಿಸಿರುವರು.

ಪು.ತಿ. ನರಸಿಂಹಾಚಾರ್ಯರು ಕನ್ನಡ ನಾಡು–ನುಡಿಯ ಅಭಿಮಾನ ಏಳ್ಗೆಯ ಚಿಂತನೆ, ಹಿತಾಸಕ್ತಿ, ಕಾಳಜಿಯನ್ನು ಹಲವಾರು ಕವನಗಳಲ್ಲಿ ವ್ಯಕ್ತಪಡಿಸಿರುವರು. 'ಗೆಲ್ ಕನ್ನಡ' ಕವನದಲ್ಲಿ ಕಣ್ಣು ಕಂಡದ್ದು, ಕಿವಿ ಕೇಳಿದ್ದು, ಪಡೆದದ್ದು, ಕಷ್ಟ ಪಟ್ಟಿದ್ದು–ಎಲ್ಲವೂ ಕನ್ನಡವಾಗಲಿ, ಜನಮಾನಸದಲ್ಲಿ ಕನ್ನಡವೇ ಬಿತ್ತರಿಸಲೆಂದು ಹೇಳಿರುವರು. ಪಾರತಂತ್ರವನ್ನು ಕಿತ್ತೊಗೆದು ಪ್ರಜಾಪ್ರಭುತ್ವ ಆಡಳಿತ ತಂದೆವು. ಹರಿದು–ಹಂಚಿ ಹೋಗಿದ್ದ ನಾಡನ್ನು ಒಂದು ಮಾಡಿದೆವು. ಹೀಗಿರಲು ಕನ್ನಡ ನುಡಿಯನ್ನು ಕಡೆಗಣಿಸುವುದುಂಟೆ ಈ ಕನ್ನಡ ನುಡಿಯು ಸಾಮಾನ್ಯವಾದುದಲ್ಲ. ಇದು ಸಜ್ಜನರಿಂದ ಪಳಗಿದೆ, ಅಜ್ಞಾನಿಗೆ ಕೈದಿವಿಗೆಯಾಗಬಲ್ಲದು, ಜನತೆಯ ಮನವನ್ನು ಮುಟ್ಟಬಲ್ಲದು, ಜನಾಂಗ–ಜನಾಂಗದ ಮಧ್ಯ ಭಾವೈಕ್ಯತೆಯನ್ನು ಬೆಸೆಯಬಲ್ಲದು, ಇದರ ಏಳಿಗೆಯೇ ನಾಡಿನ ಏಳಿಗೆ, ಇದರ ಕೀಳ್ಮೆಯೆ ನಾಡಿನ ಕೀಳ್ಮೆಯಾಗಿದೆ. ಕನ್ನಡ ನುಡಿಯು ಕನ್ನಡಿಗರ ಸ್ವಾತಂತ್ರ್ಯದ ಸಂಕೇತವಾಗಿದೆ. ಅದಕ್ಕಾಗಿ 'ಗೆಲ್‌ಕನ್ನಡ'–

ವೆಂದು ಜಯಕಾರ ಹಾಕಿರುವರು. "ಕನ್ನಡ ನಾಡು"-ಕವನದಲ್ಲಿ ಕನ್ನಡ ನಾಡಿನ ಸಿರಿಸೊಬಗನ್ನು ವರ್ಣಿಸಿ ಕನ್ನಡ ನಾಡಿನಿಂದಲೇ ಭಾರತವು ನನ್ನದಾಗಿದೆಯೆಂದು ಹೀಗೆ ಬಣ್ಣಿಸಿರುವರು:

"ಕನ್ನಡ ನಾಡೇ ನುಡಿಯೇ ನಿನ್ನಿಂ
ನೆನ್ನದಾಯಿತೀ ಭಾರತವು
ಎನ್ನವಳಾದಳು ನಿನ್ನಿಂ ಭಾರತಿ"
(ನರಸಿಂಹಾಚಾರ್ಯ ಪು.ತಿ. ೧೯೯೮, ಪುಟ-೫೩೪)

ಕನ್ನಡ ನಾಡು-ನುಡಿಯ ಅಭಿಮಾನ ಪ್ರೇಮದಿಂದಾಗಿಯೇ, ಅಥವಾ ಕನ್ನಡ-ಕರ್ನಾಟಕತ್ವದಿಂದಲೇ-ಭಾರತೀಯತ್ವದ ಭಾವನೆ ಮೂಡುತ್ತಯೆಂದು ಬಿಂಬಿಸಿರುವರು.

'ನಾಡಿನ ಮೊಗ'-ಕವನದಲ್ಲಿ ಕನ್ನಡ ನಾಡಿಗೂ ನಮ್ಮಂತೆ ಅದಕ್ಕೂ ಮೊಗ (ಮುಖ)ವಿದೆ, ಮನವೂ ಇದೆ, ಕನ್ನಡಿಗರೆ ಅದರ ಮನವೆಂದಿರುವರು. ಈ ನಾಡು-ನುಡಿಯ, ಮನ-ಮುಖಗಳನ್ನು ಮರೆಮಾಚಿಸುವದನ್ನು ಕಂಡು-"ನಿಜ ಮೊಗ ಮರೆಸುವ ನಾಟಕ ರಂಗವೇ, ನಮ್ಮ ನಾಡು? ಎಂದು ಪ್ರಶ್ನಿಸಿರುವರು. ಹಾಗಾದರೆ ಸಾಮಾಜಿಕರಾರು? ಇದರ ಮುಖವನ್ನು ಮರೆಮಾಚಲು ಇದಕ್ಕೇನು ಕಣ್ಣು-ಮೂಗು-ತುಟಿ ವಿರೂಪ ಇವೆಯೆ? ಎಂದು ವಿಧ ವಿಧವಾಗಿ ಪ್ರಶ್ನಿಸಿ-"ನನ್ನ ನಾಡವರೇ, ಬನವಾಸಿಗಳೆ"-ಎಂದು ಜನತೆಯನ್ನು ಸಂಬೋಧಿಸಿ ಈಗ ಶಾಪವಿಮೋಚನೆಯಾಗಿದೆ. ಕಾರ್ಕೋಟ ವಿಷದ ವಿಕಾರರೂಪ ಕಳೆದು ನಿಜರೂಪ ಬಂದಿದೆ. ಇದರ ಮುಖ-ಮನ-ನುಡಿ ಚೆನ್ನ, ಇದರ ಸಿರಿ-ಸಂಪತ್ತು, ಚೆಲುವು-ಒಲವುಗಳನ್ನು ಅರಿತು ನಡೆಯಲು ಹೇಳಿದ್ದಾರೆ.

'ನಾಡು-ನುಡಿ'-ಕವನದಲ್ಲಿ ಈ ನಾಡಿನ ಜನತೆಯ ಪರಭಾಷೆ ವ್ಯಾಮೋಹದಿಂದಾಗಿ ಕನ್ನಡ ನುಡಿಗೆ ದುಃಸ್ಥಿತಿ ಒದಗಿರುವದನ್ನು ಕಂಡು-'ತಪ್ಪುವದೆಂದಿಗೆ ಹೆರನುಡಿಯಜ್ಜೆ?-ಎಂದು ತವಕಿಸಿದ್ದಾರೆ. ಇಲ್ಲಿಯ ಜನತೆಯು ಪೋಷಿಸುವ ನೆಲವನ್ನೇ ಬರಡೆಂದು ತಿಳಿದಿರುವರು. ಈ ಜನರಿಗೆ ಎದೆಯೊಳಗೆ ಒಲವು, ಮನದೊಳಗೆ ನಿಲುವು, ಕರದೊಳಗೆ ಗೆಲ್ಲುವ ಕೌಶಲ್ಯ ಯಾವಾಗ ಬರುವದೋ ಅವಾಗ-

"ಅಂಥಿ ನೆಲ ಕೊಳುವುದು ಕೈಗನ್ನಡಿ
ತನ್ನನೆ ಮರು ಹೊಳೆಸುವ ಕನ್ನಡ ನುಡಿ"
(ನರಸಿಂಹಾಚಾರ್ಯ ಪು.ತಿ. ೧೯೯೮, ಪುಟ-೫೭೫)

-ಹೀಗೆ ನಾಡು-ನುಡಿಯ ಶ್ರೇಯೋಭಿವೃದ್ಧಿಗಾಗಿ ಜನರು ಸ್ವಾಭಿಮಾನದಿಂದ ಶ್ರಮಿಸಲು ಹೇಳಿರುವರು. 'ಕನ್ನಡ ಉಳಿಸಿ' ಕವನದಲ್ಲಿಯೂ ಕನ್ನಡ ಭಾಷೆಯ ಉಳಿವಿಗಾಗಿ, ನಾಡಿನ ಏಳ್ಗೆಗಾಗಿ ಮನ ಮಿಡಿದಿದ್ದಾರೆ. ಕನ್ನಡಿಗರೆ ಆಳುವ, ಕನ್ನಡಿಗರೆ ಬಾಳುವ-ಈ ನಾಡಿನಲ್ಲಿ ಅನ್ಯ ಭಾಷೆಗಳ ಹಾವಳಿಯಿಂದ-"ಕನ್ನಡ ಉಳಿಸಿ, ಕನ್ನಡ ಬೆಳೆಸಿ, ಕನ್ನಡವನೆ ಬಳಸಿ"-ಎಂದು ಯಾರೋ ಕೂಗಿಕೊಳ್ಳುವಂತೆ ಕೂಗುತ್ತಿದ್ದೇವೆ. ಕನ್ನಡಿಗರಿಗೆ, ಆಳಾದವರು ಅರಸರಾಗುವ ಕನಸು ಹಾಗೂಈ

ಕಲಿತನವಿಲ್ಲವೇ?-ಎಂದು ವ್ಯಥೆಪಟ್ಟಿರುವರು. ನಾಡು ಬೇರೆಯಲ್ಲ, ನುಡಿ ಬೇರೆಯಲ್ಲ, 'ನಾಡಿನ ಏಳಿಗೆಯೆ- ನುಡಿಯ ಏಳಿಗೆಯೇ ನಾಡಿನ ಏಳಿಗೆ' ಎಂದು ತಿಳಿಸಿದ್ದಾರೆ. ಕನ್ನಡವನ್ನು ಉಳಿಸುವದು, ಬೆಳೆಸುವದು, ಬಳಸುವದನ್ನು ಕನ್ನಡಿಗರನ್ನು ಬಿಟ್ಟು ಯಾರಾದರೂ ಮಾಡಲು ಸಾಧ್ಯವೆ?, ಇಲ್ಲ. ಕನ್ನಡಿಗರೇ ಮಾಡಬೇಕು-ಎಂದು ಕನ್ನಡಿಗರಿಗೆ ನಾಡು-ನುಡಿಯ ಏಳ್ಗೆಗಾಗಿ ದುಡಿಯಲು ಕೇಳಿಕೊಂಡಿದ್ದಾರೆ.

ವಿ.ಸೀತಾರಾಮಯ್ಯನವರು 'ಕನ್ನಡ ನಾಡು'-ಕವನದಲ್ಲಿ ಕನ್ನಡ ನಾಡನ್ನು ಬಹಳ ಸೊಗಸಾಗಿ ವರ್ಣಿಸಿರುವರು. ಬಾನಿನಗಲಕೆ ವ್ಯಾಪಿಸಿರುವ, ಅಗೆದಲ್ಲಿ ಹೊನ್ನುಸಿಗುವ, ವೈರಿಯನ್ನು ಪಾತಾಳಕ್ಕೆ ಮೆಟ್ಟುವ, ಗಂಡು ಮೆಟ್ಟಿನ ನಾಡು. ಮಲೆನಾಡು, ಸಹ್ಯಾದ್ರಿ, ಗಿರಿ, ಕಾನನ, ಕಡಲ ತೀರಗಳನ್ನು, ಪಶು-ಪಕ್ಷಿ-ಪ್ರಾಣಿ-ಫಲ-ಪುಷ್ಪ-ಮುಂತಾದ ಪ್ರಕೃತಿ ಸಂಪತ್ತನ್ನು ಹೊಂದಿರುವ, ಶ್ರೇಷ್ಠ ಅರಸರು ಆಳಿದ ನಾಡಿದು. ಇಂಥಹ ಹಿರಿಮೆ-ಗರಿಮೆಗಳನ್ನು ಮೆರೆವ ಇದು-

"ಜಗದ ಮನ್ನಣೆಗೆತ್ತಿ ಬೆಳೆಯುತಿದೆ
ಬೆಳೆಯುತಿದೆ ನೋಡು
ಎಂದಿಗೂ ನಿಲಲಿಂತೆ, ಸವಿಯೂರಿ ಸಲುವಂತೆ
ನನ್ನ ತಾಯ್ನಾಡು"

(ಸೀತಾರಾಮಯ್ಯ ವಿ. ೧೯೯೦, ಪುಟ-೬)

ಎಂದು ನಾಡಿನ ಶ್ರೇಯೋಭಿವೃದ್ಧಿಯನ್ನು ಅಭಿಮಾನದಿಂದ ಬಣ್ಣಿಸಿರುವರು.

ಡಿ.ಎಸ್. ಕರ್ಕಿಯವರ 'ಹಚ್ಚೇವು ಕನ್ನಡ ದೀಪ' ನಾಡು-ನುಡಿಯನ್ನು ಕುರಿತ ಪ್ರಸಿದ್ಧ ಪದ್ಯ. ನಾಡಿನಲ್ಲಿ ಅಭಿಮಾನ ಶೂನ್ಯತೆಯ ಕತ್ತಲೆ ಆವರಿಸಿತ್ತು. ಆ ಕತ್ತಲೆಯನ್ನು ಹೋಗಲಾಡಿಸಲು ಸ್ವಾಭಿಮಾನದ ಬೆಳಕನ್ನು ಮೂಡಿಸುವ ಕನ್ನಡದ ದೀಪವನ್ನು ಹಚ್ಚಿರುವರು. 'ಹಚ್ಚೇವು'-ಎಂಬಲ್ಲಿಯ ಬಹುವಚನವು ಸಮಸ್ತ ಕನ್ನಡಿಗರಿಗೂ ಅನ್ವಯಿಸುತ್ತದೆ ಮತ್ತು ವಿಧ್ಯರ್ಥಕಾರ್ಥವನ್ನು ಸೂಚಿಸುತ್ತದೆ. ಬಹುದಿನಗಳಿಂದ ನಮ್ಮ ಆಲಸ್ಯ ಮೈಮರವೆಯಿಂದ ಕೊಳೆಯಾಗಿದ್ದೇವೆ. ಆ ಕೊಳೆಯನ್ನುಕೊಚ್ಚುತ್ತೇವೆ-ಎಂದು ದೃಢ ನಿಲುವನ್ನು ತಾಳಿದ್ದಾರೆ.

"ನಡು ನಾಡೆ ಇರಲಿ ಗಡಿನಾಡೆ ಇರಲಿ
ಕನ್ನಡದ ಕಳೆಯ ಕೆಚ್ಚೇವು"

(ಬುದ್ದಣ್ಣ ಹಿಂಗಮಿರೆ (ಸಂ); ೧೯೮೭, ಪುಟ-೬)

ಗಡಿನಾಡಿನಲ್ಲಿ ಮಾತ್ರವಲ್ಲದೆ ನಡುನಾಡಿನಲ್ಲೂ ಜಾಗೃತಿ ಮಾಡುವದಾಗಿ ಹೇಳಿರುವರು: ಅಲ್ಲದೆ ಹಚ್ಚಿರುವ ದೀಪದ ಒಡಲಿಂದ ಕೆಚ್ಚಿನಾ ಕಿಡಿಗಳನ್ನು ಗಡಿಯಾಚೆಗೂ ಚಿಮ್ಮುವದಾಗಿ ಹೇಳಿರುವದು ಗಡಿಯಾಚೆಯೂ ಕನ್ನಡಿಗರು ನುಡಿಯ ಜಾಗೃತಿ, ಏಳ್ಗೆಗಾಗಿ ಶ್ರಮಿಸಲೆಂಬುದಾಗಿದೆ. ಕನ್ನಡ

ದೀಪಹಚ್ಚಲು ಕನ್ನಡಿಗರ 'ನರನರವನ್ನೆಲ್ಲ ಹುರಿಗೊಳಿಸಿ ಹೊಸೆದು' ಬತ್ತಿಮಾಡಲಾಗಿದೆ-ಎಂಬುದು ನಾಡು-ನುಡಿಯ ಏಳ್ಗೆಗಾಗಿ ಶ್ರಮಿಸಲು ಸರ್ವಾರ್ಪಣ ಭಾವನೆಯನ್ನು ಸೂಚಿಸುತ್ತದೆ. ಕವಿಯು ಹೀಗೆ ಹಚ್ಚಿರುವ ದೀಪದಲಿ ತಾಯಿಯ ರೂಪ ಅಚ್ಚಳಿಯದಂತೆ ಕಾಣುವದಾಗಿ ಹೇಳಿದ್ದಾನೆ.

ಸಿದ್ಧಯ್ಯ ಪುರಾಣಿಕರು ಕನ್ನಡ ನಾಡು-ನುಡಿ ಅಭಿಮಾನ, ಪ್ರೇಮವನ್ನು ವಚನಗಳಲ್ಲೂ ವ್ಯಕ್ತಪಡಿಸಿರುವರು. ಭಾರತದ ಸಂಕ್ಷಿಪ್ತ ರೂಪವಾದ ಕರ್ನಾಟಕದಲ್ಲಿ ಎಲ್ಲವೂ ಇದೆ. ಇಲ್ಲಿ ಇಲ್ಲದುದು ಎಲ್ಲಿಯೂ ಇಲ್ಲ; ಇಂಥ ಕನ್ನಡ ನಾಡಿನಲ್ಲಿ ಜನ್ಮವ ಬೇಡಿಕೊಂಡರೆ ಎಲ್ಲವನ್ನೂ ಬೇಡಿಕೊಂಡಂತೆ-ಎಂದಿರುವ ಪುರಾಣಿಕರು, ತಾವು ಪುನಃ ಹುಟ್ಟುವದಾದರೆ ಕನ್ನಡ ನಾಡಿನಲ್ಲಿಯೇ ಆಕಳವಾಗಿ ಹುಟ್ಟಬೇಕೆಂದು ಬೇಡಿಕೊಂಡಿರುವರು. ಏಕೆಂದರೆ, ಆಕಳವಾಗಿ,-ಶೆಗಣಿಯಾಗಿ-(ಸುಟ್ಟರೆ ವಿಭೂತಿಯಾಗಿ ಭಕ್ತರ ಹಣೆ, ಸಿಂಗರಿಸಲು)-ಗೊಬ್ಬರವಾಗಿ ಕೃಷಿಗೆ ಯೋಗ್ಯವಾಗಿ ದೇಶದ ಸಮೃದ್ಧಿಯನ್ನು ಹೆಚ್ಚಿಸಲು ಹುಟ್ಟಬೇಕೆಂಬ ಮಹಾದಾಶೆಯನ್ನು ವ್ಯಕ್ತಪಡಿಸಿರುವರು. ಇದು ಇವರ ಉಜ್ವಲ ಕನ್ನಡ ನಾಡಿನ ಭಕ್ತಿ-ಅಭಿಮಾನಕ್ಕೆ ಮಹೋನ್ನತ ನಿದರ್ಶನವಾಗಿದೆ. ಇವರ ಏಕಾಕ್ಷರದಿಂದ ಸಪ್ತಾಕ್ಷರದವರೆಗಿನ ಮಂತ್ರಗಳು ಕನ್ನಡ ನಾಡು-ನುಡಿ ಸಾಹಿತ್ಯದ ಅಭಿಮಾನಕ್ಕೆ ಮತ್ತಷ್ಟು ನಿದರ್ಶನವಾಗಿವೆ. ಆ ಸಪ್ತಾಕ್ಷರ ಮಂತ್ರಗಳು ಹೀಗಿವೆ:

" 'ಭಾರತ ಕರ್ನಾಟಕ'
-ಇದು ನನ್ನ ಸಪ್ತಾಕ್ಷರ ಮಂತ್ರವಯ್ಯ
'ಕನ್ನಡ ಬಸವ'
-ಇದು ನನ್ನ ಷಡಕ್ಷರಿ ಮಂತ್ರವಯ್ಯ
...........................................................................
'ಕಾವ್ಯ'-ಇದು ನನ್ನ ದ್ವ್ಯಕ್ಷರಿ ಮಂತ್ರವಯ್ಯ"

(ಬುಳ್ಳಾ ಎನ್.ಬಿ. ೧೯೯೯, ಪುಟ-೧೨೨)

"ಮರುಳಸಿದ್ಧನ ಕಂತೆ" ಯಲ್ಲಿಯ 'ತಾಯ್ನಾಡ ಸ್ತವನ' ಭಾಗದಲ್ಲಿಯೂ ಕನ್ನಡ ನಾಡಿನ ಹಿರಿಮೆ-ಮಹತ್ವವನ್ನು ಹೇಳಿರುವರು. ಕಾಡನ್ನು ಸುಟ್ಟರೆ ಮಗೃಗಳು ವಾಸಿಸುವದೆಲ್ಲಿ? ಅದೇ ರೀತಿ ಕನ್ನಡ ನಾಡು-ನುಡಿಯ ಅಸ್ತಿತ್ವವಿದ್ದರೆ ಮಾತ್ರ ಕನ್ನಡ ಜನತೆಗೆ ಅಸ್ತಿತ್ವ, ಅದು ಇಲ್ಲದೆ ಮೇಲ್ಮೆಯನ್ನು ಹೊಂದುವದು ಸಾಧ್ಯವಿಲ್ಲ. ಕನ್ನಡ-ನಾಡಿನಲ್ಲಿ ಜನ್ಮವನ್ನು ಬೇಡಿಕೊಂಡರೆ, ವೀರ, ವಿದ್ಯೆ, ಕ್ಷಮೆ, ವಿನಯ, ಉದಾರತೆ-ಇವುಗಳೆಲ್ಲವನ್ನೂ ಬೇಡಿಕೊಂಡಂತೆ ನಾಡು-ನುಡಿಯ ಬಗೆಗೆ ತಾತ್ಸಾರ, ಕೀಳು ಭಾವನೆ ಹೊಂದಿರುವವರಿಗೆ ಹೀಗೆ ಹೇಳಿದ್ದಾರೆ. ಸಮುದ್ರದ ತಳದಲ್ಲಿರುವ ಮುತ್ತು ರತ್ನಗಳನ್ನು ಮುಳುಗಿ ಪಡೆಯುವ ಸಾಮರ್ಥ್ಯ ತಮ್ಮಲ್ಲಿಲ್ಲದ್ದಕ್ಕೆ ಸಮುದ್ರವನ್ನೇ ಜರೆದಂತೆ, ಕನ್ನಡದಲ್ಲೇನಿದೆ ಎನ್ನುವರು. ಅಂಥವರ ತಲೆಯಲ್ಲಿ ಸೊನ್ನೆ ಇದೆ. ಅವರು ಈ ನಾಡಿನಲ್ಲಿ ಹೊನ್ನು, ರೇಷ್ಮೆ, ದಂತ, ಗಂಧ, ಮುಂತಾದ ಸಿರಿ-ಸಂಪತ್ತು ಇರುವದನ್ನು ಮರೆತಿರುವರು. ಅಂಥವರಿಗೆ ಈ ನಾಡಿನ ಮಹತ್ವ

ತಿಳಿಸಲು, ಅವರಲ್ಲಿ ಅಭಿಮಾನ ಮೂಡಿಸಲು ನಾಡಿನ ಸಿರಿ, ಸೊಬಗು ಹಿರಿಮೆ, ವೈಭವಗಳನ್ನು ವರ್ಣಿಸಿ–

ಸಿರಿಗನ್ನಡಂ ಗೆಲ್ಗೆ, ಕರುನಾಡು ನಿಡು ಬಾಳ್ಗೆ
ಸಿರಿನಾಡನಿದ ಸದಾ ಕನ್ನಡಿಗರಾಳ್ಗೆ!
ಗುರಿದೋರಿ ಲೋಕಕ್ಕೆ ಬೆಳಕೀವ ಗರಿಮೆಯು
ಕರುನಾಡಿಗೊದಗಲಿ–ಮರುಳಸಿದ್ಧ!!

(ಸಿದ್ದಯ್ಯ ಪುರಾಣಿಕ, ೧೯೯೧, ಪುಟ–೧೨೯)

ಎಂದು ಹಾರೈಸಿರುವರು.

'ಕನ್ನಡದ ಹೂ' ಕವನದಲ್ಲಿ ಕವಿ ನಮ್ಮ ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ಸಿಕ್ಕಾಗ ಎಷ್ಟೋ ದಿನದಿಂದ ಕಾದು ಕುಳಿತಿದ್ದಕ್ಕೆ ಸಾರ್ಥಕವಾಯಿತೆಂದು–

ಯುಗಯುಗದಿಂದಲಿ
ಮಘ ಮಘಿಸುವ ವನ
ಹೂ ಬಿಟ್ಟಿಹುದಿಂದು
ಕನ್ನಡದ ಹೂ ಬಿಟ್ಟಿಹುದಿಂದು
......................................
ಜನುಮ ಜನುಮದ ಪುಣ್ಯವೊ
ಫಲವೊ ಶಾಸ್ತ್ರೀಯ ಸ್ಥಾನಮಾನ ಪಡೆಯಿತು

(ಯಲ್ಲಪ್ಪ ಹಲಕುರ್ಕಿ, ೨೦೧೨, ಪುಟ–೭)

ಎಂದು ಕವಿ ಸಂಭ್ರಮಿಸಿ, ಭಾಷೆಯನ್ನು ರಕ್ಷಿಸಬೇಕಾಗಿದೆ ಎಂದು ಕನ್ನಡಿಗನಿಗೆ ಬಾ ವನವನ್ನು ರಕ್ಷಿಸು ಹೂ ಸಂರಕ್ಷಿಸು ಪಣತೊಡು ಕನ್ನಡ ತಾಯಿಯನ್ನು ರಕ್ಷಿಸಲು ಕರೆನೀಡಿದ್ದಾರೆ. ಇಲ್ಲಿ ನಾಡಾಭಿಮಾನ ಭಾಷಾಭಿಮಾನವನ್ನು ಕಾಣಬಹುದು.

"ಹೊತ್ತಿತೋ ಹೊತ್ತಿತೋ"–ಕವನದಲ್ಲಿ ಶತಮಾನಗಳ ಶಾಪಕಳೆದು ನಾಡು ಒಂದಾಗಿರುವದನ್ನು 'ಕನ್ನಡ ದೀಪ ಹೊತ್ತಿ ದೇದಿಪ್ಯಮಾನವಾಗಿ ಬೆಳಗುತ್ತಿದೆ' ಯೆಂದಿರುವರು. ಇನ್ನು ಮುಂದೆ ಕನ್ನಡದ ಮಾತು ಕಾಯ್ದುಕೊಂಡು ಈ ನಾಡನ್ನು ನಡೆಸಿಕೊಂಡು ಹೋಗುವವರು ಬೇಕೆಂಬುದನ್ನು ಹೀಗೆ ಹೇಳಿದ್ದಾರೆ.

"ಉರಿವವರು ಬೇಕಿನ್ನು
ಇದರೆಣ್ಣೆಯಾಗಿ
ಸುಡುವವರು ಬೇಕಿನ್ನು
ನಿಡುಬತ್ತಿಯಾಗಿ
ಧರಿಸುವವರು ಬೇಕಿದನು
ಸಿರಿಹಣತೆಯಾಗಿ"

(ಶೇಷಗಿರಿರಾವ್ ಎಲ್.ಎಸ್. (ಸಂ); ೧೯೯೬, ಪುಟ–೨೪)

ಎಂದು ನಾಡು ನುಡಿಗಾಗಿ ತಮ್ಮ ತನು-ಮನ-ಧನವನ್ನು ಅರ್ಪಿಸಿ ದುಡಿಯುವವರು ಬೇಕೆಂದಿರುವರು. ಈ ಕನ್ನಡದ ದೀಪ ಜನಕ್ಕೆ ಬೆಳಕಾಗಿ, ಧರ್ಮಕ್ಕೆ ಬಾಗಿ, ಭಾರತಕ್ಕೆ ಬಲವಾಗಿ ಚಿರಕಾಲ ಬಾಳಿ ಬೆಳಗಲೆಂದು ಆಶಿಸಿದ್ದಾರೆ. ಈ ದೀಪದ ಬತ್ತಿಗೆ ಕವಿದ ಮಂಕನು ತೆಗೆಯಲು ತನ್ನ ಕಾಯಕವನ್ನೇ ಕಡ್ಡಿಯಾಗಿಸಬೇಕೆಂದು ಜಲಪಾತ ಸಂಕಲನದ ಕವನವೊಂದರಲ್ಲಿ ಹೀಗೆ ಪ್ರಾರ್ಥಿಸಿಕೊಂಡಿದ್ದಾರೆ:

"ಕನ್ನಡದ ಬತ್ತಿ ಯೆಳೆಗಿಡದ ಮಂಕನು ತೆಗೆಯೆ
ನನ್ನ ಕಾಯವು ಚಾಚುಕಡ್ಡಿಯಾಗಿರಲಿ
ಭಾರತದ ದೀವಳಿಗೆಯಲ್ಲಿ ಸಿವಗನ್ನಡದ
ಜ್ಯೋತಿಯಿದು ತೇಜಸ್ಸಿನೊಡ್ಡಿಯಾಗಿರಲಿ"

(ಮರುಳಯ್ಯ ಸಾ.ಶಿ, (ಸಂ); ೧೯೮೧, ಪುಟ-೪೭೨)

-ಹೀಗೆ ಕವಿಯ ಕಾಯದಿಂದ ಮಂಕನು ತೆಗೆದ ಕನ್ನಡದ ದೀಪವು ಭಾರತದ ದೀಪಗಳಲ್ಲಿ ತೇಜಸ್ಸಿನಿಂದ ಬೆಳಗಲಿ ಎಂಬುದು ಕವಿಯ ಆಶಯವಾಗಿದೆ. 'ಕನ್ನಡ ಬೆಳೆ'-ಕವನದಲ್ಲಿ ಈ ರೀತಿ ಹೇಳಿದ್ದಾರೆ:

"ಭಾರತಿಗೆ ಬಲವಾಗಿ ವಸುಮತಿಗೆ ಚೆಲುವಾಗಿ
ಸಕಲರಿಗೆ ಗೆಲುವಾಗಿ ನಮ್ಮ ಹೊಸ ಹುಟ್ಟು"
(ಮರುಳಯ್ಯಸಾ.ಶಿ, (ಸಂ); ೧೯೮೧, ಪುಟ-೪೭೨)

-ಎಂದು ಕನ್ನಡ ನಾಡಿನ ಅಭ್ಯುದಯವನ್ನು ಸಾರಿ ಹೇಳಿದ್ದಾರೆ. ಆದರೆ ನಾಡನ್ನು ಕಟ್ಟಲು ಕನ್ನಡಿಗರೆಲ್ಲರೂ ಎಷ್ಟರ ಮಟ್ಟಿಗೆ ತೊಡಗಿದ್ದೇವೆಂಬುದನ್ನು ಹೀಗೆ ಪ್ರಶ್ನಿಸಿಕೊಂಡಿರುವರು.

"ಇದಕಾಗಿ ಒಂದಾಗಿ ದುಡಿಯುವೆವೆ ನಾವು?
ಈ ಗುರಿಯ ಕಡೆ ಕೂಡಿ ನಡೆಯುವೆವೆ ನಾವು?
ಇದಕಡ್ಡ ಬಂದವನ ತೊಡೆಯುವೆವೆ ನಾವು?"
(ಮರುಳಯ್ಯ ಸಾ.ಶಿ, (ಸಂ); ೧೯೮೧, ಪುಟ-೪೭೨)

-ಕಿರಿಯರ ಈ ಪ್ರಶ್ನೆಗಳಿಗೆ ಹಿರಿಯರಾದವರು ಉತ್ತರ ಹೇಳಲಿ ಅಥವಾ ಇವರೇ ಹಿರಿಯರಾದಾಗ ಉತ್ತರ ಕಂಡುಕೊಳ್ಳಲಿ ಎಂದು ಮಾರ್ಮಿಕವಾಗಿ ಹೇಳಿದ್ದಾರೆ.

ಕನ್ನಡಿಗರಲ್ಲಿ ಮತ್ತು ಕನ್ನಡ ನಾಡಿನಲ್ಲಿ ಏಕತೆ ಇರದಾಗ ಏಕತೆಯನ್ನು ತರಲು ಮತ್ತು ನಾಡು-ನುಡಿಯನ್ನು ಉಳಿಸುವ, ಬೆಳೆಸುವ ಪ್ರಜ್ಞೆಯನ್ನು ಮೂಡಿಸಲು 'ಕನ್ನಡ ಕುಲ' ಕವನದಲ್ಲಿ (ಮೊದಲು ಮಾನವನಾಗು ಸಂಕಲನದ) ಪ್ರಯತ್ನಿಸಿರುವರು. ಕನ್ನಡಿಗರಿಗೆ ಕನ್ನಡ ಭಾಷೆ, ಜನ, ಕನ್ನಡ ಕುಲ, ಕನ್ನಡ ಕಾವ್ಯ, ನಾಡಿನ ಭವಿತವ್ಯ-ಇವುಗಳಲ್ಲಿ ಭೇದವು ಈಗ ಹುಟ್ಟಿಕೊಂಡಿದೆ. ಈ ಭೇದ ಸ್ಥಿರವಲ್ಲ.

ಇಂದಲ್ಲವಾದರೂ ಮುಂದೊಂದುದಿನ ಈ ಜನ– 'ಒಂದೇ ಕನ್ನಡ ನೆಲವು, ಒಂದೇ ಕನ್ನಡ ಕುಲವು'–ಎಂದು ಒಂದಾಗುತ್ತಾರೆ; ಗೆಲುವನ್ನು ತರುತ್ತಾರೆ–ಎಂದಿರುವರು. ಅಲ್ಲದೆ ಒಂದಾಗುವದನ್ನು ಕುರಿತು ಹೀಗೆ ಹೇಳಿರುವರು.

"ನೂರು ಕುಲಗಳು ಸೇರಿ ಕನ್ನಡದ ಕುಲವಾಗಿ
ಭಾರತಕೆ ಬಲವಾಗಿ ಬೆಳಗುತಿಹುದು
ಈ ಕುಲವ ಒಡೆಯದಿರಿ ಹೋರಾಡಿ ಮಡಿಯದಿರಿ"
(ಸಿದ್ದಯ್ಯ ಪುರಾಣಿಕ, ೧೯೬೯, ಪುಟ–೨೦)

–ಕನ್ನಡಿಗನು ಏನಾದರೂ ಗಳಿಸಲಿ, ಗಳಿಸಿದ್ದನ್ನು ಹೇಗಾದರೂ ಬಳಸಲಿ, ಆದರೆ ಕನ್ನಡ ಕುಲವನ್ನು ಮಾತ್ರ ಉಳಿಸಲಿ, ಕನ್ನಡಿಗನುದ್ಧಾರವಾಗಬೇಕಾದರೆ, ಕನ್ನಡದ ಉದ್ಧಾರದೊಂದಿಗೆ ಆಗಬೇಕು. ಆದ್ದರಿಂದ ಕನ್ನಡವನ್ನು ಉಳಿಸಿ–ಬೆಳೆಸಲು ಕೇಳಿಕೊಂಡಿದ್ದಾರೆ.

ಪುರಾಣಿಕರು ಮಕ್ಕಳ ಸಾಹಿತ್ಯ ಪ್ರಕಾರದ ಮಕ್ಕಳ ಕವನಗಳ ಮೂಲಕ ಮಕ್ಕಳಲ್ಲಿಯೂ ನಾಡು–ನುಡಿಯ ಅಭಿಮಾನ ಮೂಡಿಸಿದ್ದಾರೆ. 'ಕನ್ನಡಿಗರಾಗಿ ಬೆಳೆಯೋಣ' ಕವನದಲ್ಲಿ ಮಕ್ಕಳಿಗೆ ಹೀಗೆ ಹೇಳಿದ್ದಾರೆ:

"ಕನ್ನಡಿಗರಾಗಿ ಬೆಳೆಯೋಣ
ಕನ್ನಡಿಗರಾಗಿ ಉಳಿಯೋಣ
ಕನ್ನಡ ತೇಜದಿ ಹೊಳೆಯೋಣ
ಕನ್ನಡ ತೇರನು ಎಳೆಯೋಣ"
(ಮರುಳಯ್ಯ, ಸಾ. ಶಿ. (ಸಂ); ೧೯೮೧, ಪುಟ–೫೨೮)

–ಎಂದು ಬೆಳೆಯುವ ಮಕ್ಕಳಲ್ಲಿ ನಾಡು–ನುಡಿಯ ಉತ್ಸಾಹ–ಹುಮ್ಮಸ್ಸನ್ನು ತುಂಬಿದ್ದಾರೆ. ಅಲ್ಲದೆ ಜಾತಿ–ಕುಲದ ಭೇದವಳಿದು ಭಾವೈಕ್ಯತೆಮೂಡಿಸಲು–

"ನಾವು ಹುಟ್ಟಿರುವ ಕುಲವೇನಿರಲಿ
ಕನ್ನಡ ಕುಲವನೆ ಅಪ್ಪೋಣ
ಕನ್ನಡ ನಾಡೊಳಗಿರುವವರೆಲ್ಲ
ಕನ್ನಡಿಗರೆಂದು ಒಪ್ಪೋಣ"
(ಮರುಳಯ್ಯ, ಸಾ. ಶಿ. (ಸಂ); ೧೯೮೧, ಪುಟ–೫೨೮)

ಎಲ್ಲೆ ಹುಟ್ಟಿರಲಿ, ಕನ್ನಡ ನಾಡಿನಲ್ಲಿದ್ದವರೆಲ್ಲರೂ ಕನ್ನಡಿಗರು, ಕನ್ನಡಿಗರೆಲ್ಲರೂ 'ಕನ್ನಡ'ವೆಂಬ ಒಂದೇ ಕುಲವೆಂದು ಭಾವಿಸೋಣ. ಈ ಕನ್ನಡ ಕುಲವನು ಒಡೆಯುವವರನ್ನು ನಂಬದಂತೆ ಇರೋಣವೆಂದು ಹೇಳಿರುವರು.

ಕನ್ನಡ ಭಾಷೆ ಶಿಕ್ಷಣದಲ್ಲಿ, ಸರಕಾರದ ಆಡಳಿತ ಭಾಷೆಯಾಗಿ ಇನ್ನೂ ಅನುಷ್ಠಾನವಾಗದೇ ಇದ್ದಾಗ ಕವನವೊಂದರಲ್ಲಿ ಸರಕಾರಕ್ಕೆ, ವಿದ್ಯಾಲಯಗಳಿಗೆ, ಕೋರ್ಟುಗಳಿಗೆ ದಿಕ್ಕಾರ ಹಾಕಿದ್ದಾರೆ.

"ಕನ್ನಡ ಕಲಿಸದ ವಿದ್ಯಾಲಯಗಳೆ
ಕನ್ನಡ ಬಳಸದ ಸರಕಾರ
ಕನ್ನಡ ತೀರ್ಪನು ಕೊಡದ ಕೋರ್ಟುಗಳೆ
ನಿಮಗಿದೊ ನಮ್ಮಯ ಧಿಕ್ಕಾರ"
(ಮರುಳಯ್ಯ, ಸಾ. ಶಿ. (ಸಂ); ೧೯೮೧, ಪುಟ-೫೨೮)

"ತಿರುಗೆಲೆ ತಿರುಗೆಲೆ ತಿರುಗುಯ್ಯಾಲೆ" ಸಂಕಲನದ 'ಕಲಿಸಲಿ ಕನ್ನಡ'-ಪದ್ಯದಲ್ಲಿ ಮಕ್ಕಳಿಗೆ ಮಾತೃ ಭಾಷೆ ಕನ್ನಡದಲಿಯೇ ಶಿಕ್ಷಣ ಕೊಡಬೇಕೆಂದು ಹೇಳಿದ್ದಾರೆ. ಇದೇ ಸಂಕಲನದ 'ಭರತ ಭೂಮಿ-ಕರುನಾಡು'-ಕವನವು, ಮಕ್ಕಳಲ್ಲಿ 'ಮೊದಲು ನಾವು ಭಾರತೀಯರು ಆನಂತರ ಕನ್ನಡಿಗರು'-ಎಂಬ ಭಾವನೆಯನ್ನು ರಾಷ್ಟ್ರ, ನಾಡು-ನುಡಿ ಪ್ರಜ್ಞೆಯನ್ನು ಒಮ್ಮೆಲೇ ಮೂಡಿಸುತ್ತದೆ. ಬೆಳೆಯುವ ಮಕ್ಕಳಲ್ಲಿ ಈ ಭಾವನೆ ಮೂಡಿಸುವದು ಬಹಳ ಪ್ರಯೋಜನಕಾರಿಯಾಗಿದೆ:

"ನಮ್ಮ ತಾಯಿಯ ತಾಯಿ
ಭಾರತಾಂಬೆ
ಭಾರತಿಗೆ ಭೂಷಣಳು
ಕರ್ನಾಟಕಾಂಬೆ"
(ಮರುಳಯ್ಯ, ಸಾ. ಶಿ. (ಸಂ); ೧೯೮೧, ಪುಟ-೫೩೧)

ಒಂದನ್ನು ಬಿಟ್ಟು ಇಲ್ಲ. ಕರ್ನಾಟಕವು ಭಾರತದ ಒಂದು ಅಂಗ. ಭಾರತವು ಕರ್ನಾಟಕವನ್ನೊಳಗೊಂಡರೆ ಪರಿಪೂರ್ಣ ಎಂದು ಅಭಿಪ್ರಾಯ ಪಟ್ಟಿರುವರು.

ಕೆ.ಎಸ್. ನರಸಿಂಹಸ್ವಾಮಿಯವರು 'ಕರ್ನಾಟಕ ರಾಜ್ಯೋತ್ಸವ'-ಕವನದಲ್ಲಿ ರಾಜ್ಯೋತ್ಸವದ ಶುಭಸಂದರ್ಭದಲ್ಲಿ ಕನ್ನಡ ನಾಡಿನ ಸಿರಿ-ಸೊಬಗನ್ನು ವರ್ಣಿಸಿ, ಹೊಸನಾಡನ್ನು ಕಟ್ಟಲು ಹರಸಬೇಕೆಂದು ಕನ್ನಡ ತಾಯಿಗೆ ಕೇಳಿಕೊಂಡಿರುವರು:

"ಹೊಸತೊಂದು ನಾಡ ಕಟ್ಟುವೆವು, ತಾಯೆ,
ಬೆನ್ತಟ್ಟಿ ಮುಂದೆ ಕಳಿಸು
ಮುಂದಿಟ್ಟ ಹೆಜ್ಜೆ ಹಿಂದೆಗೆಯದಂತೆ
ನಡೆಯುವುದ ನಮಗೆ ಕಲಿಸು"
(ಶೇಷಗಿರಿರಾವ್ ಎಲ್.ಎಸ್. (ಸಂ), ೧೯೯೬, ಪುಟ-೩೦)

ನಮ್ಮನ್ನು ಬೆವರ ಸುರಿಸಿ ದುಡಿಯುವಂತೆ ಮಾಡು, ನಮ್ಮ ನಮ್ಮಲ್ಲಿಯ ಭೇದವನ್ನು ಹೋಗಲಾಡಿಸಲು, ಬಡತನವ ಹೋಗಲಾಡಿಸುವ ನಮ್ಮ ಹೋರಾಟಕ್ಕೆ ಯಶಸ್ಸನ್ನು ಆಶಿಸಿದ್ದಾರೆ.

'ಕನ್ನಡ ಮಾಧ್ಯಮ'-ಕವನದಲ್ಲಿ ಮಕ್ಕಳಿಗೆ ಮಾತ್ರ ಶಿಕ್ಷಣ ಕನ್ನಡ ಮಾಧ್ಯಮವಾದರಷ್ಟೇ ಸಾಲದು. ಮೊದಲು ಕನ್ನಡ ಕವಿಗಳಿಗೆ ಕಾವ್ಯ ಕನ್ನಡ ಮಾಧ್ಯಮವಾಗಬೇಕು-ಎಂದು ಮಾರ್ಮಿಕವಾಗಿ ಹೇಳಿರುವರು. ಕನ್ನಡ ಕವಿಗಳು ತಮ್ಮ ಕಾವ್ಯಗಳಲ್ಲಿ ಸಂಸ್ಕೃತ ಪದಗಳನ್ನು ಹೆಚ್ಚಾಗಿ ಬಳಸುವದನ್ನು ಖಂಡಿಸಿರುವರು. ಕವಿಗಳು ಸಂಸ್ಕೃತ ಭೂಯಿಷ್ಟವಾದ ಪದಗಳನ್ನು ಬಿಟ್ಟು ಜನಸಾಮಾನ್ಯನ ಬಳಕೆಯ ನುಡಿಗಳನ್ನು ಬಳಸಲು ಹೇಳಿರುವರು. ಕವಿಗಳು ಮೊದಲು ತಮ್ಮ ಕಾವ್ಯಗಳಲ್ಲಿ ಕನ್ನಡ ಅಭಿಮಾನ ತೋರಿಸಲಿ "ಕನ್ನಡ ನುಡಿಯೇ ಕವಿತೆಯನಾಳಲಿ" ಎಂದು ವಾದ-ವಿವಾದ, ಹೋರಾಟ ನಡೆಸಿದ ಸಂದರ್ಭದಲ್ಲಿ ಕವಿಗಳಿಗೆ ಈ ರೀತಿ ಉಪದೇಶಿಸಿರುವರು.

"ಕಯ್ಯಾರ ಕಿಞ್ಞಣ್ಣ ರೈ"-ಅವರು 'ಬೆಂಕಿ ಬಿದ್ದಿದೆ ಮನೆಗೆ' ಕವನದಲ್ಲಿ ಮನೆಗೆ ಬೆಂಕಿಬಿದ್ದಾಗ ಎಲ್ಲರೂ ಕೂಡಿ ನಂದಿಸಲು, ರಕ್ಷಿಸಕೊಳ್ಳಲು ಹೇಗೆ ಹೋರಾಡುತ್ತಾರೋ ಹಾಗೆಯೇ ಕನ್ನಡ ನಾಡಿಗೆ ಏನಾದರೂ ಆಪತ್ತೊದಗಿದಾಗ ಕನ್ನಡಿಗರೆಲ್ಲರೂ ಕೂಡಿ ಹೋರಾಡಬೇಕೆಂದು ಕರೆಕೊಟ್ಟಿರುವರು.

"ಕನ್ನಡದ ಗಡಿ ಕಾಯೆ,
ಗುಡಿಕಾಯೆ, ನುಡಿಕಾಯೆ,
ಕಾಯಲಾರೆನೆ ಸಾಯೆ!"
(ಶೇಷಗಿರಿರಾವ್ ಎಲ್.ಎಸ್. (ಸಂ), ೧೯೯೬, ಪುಟ-೧೪)

-ಎಂದು ಕಾಯದಾಗದಿದ್ದರೆ 'ಸಾಯಿ' ಎಂದು ಶಪಿಸಿರುವರು. ನಾಡಿಗಾಗಿ ಹೋರಾಡಲು ಹಾರೆ, ಗುದ್ದಲಿ, ಕೊಡಲಿ, ನೊಗ, ನೇಗಿಲ-ತೆಗೆದುಕೊಂಡು ನಾಡಿನ ಎಲ್ಲ ಭಾಗಗಳಿಂದ ಎಲ್ಲರೂ ಒಗ್ಗಟ್ಟಾಗಿ, ಛಲ-ಬಲ-ವೀರಾವೇಶದಿಂದ ಅನ್ಯರಿಗೆ ಒಂದು ಅಂಗುಲ ನೆಲಬಿಡದಂತೆ ಹೋರಾಡಲು ಬರಬೇಕೆಂದು ಕರೆಕೊಟ್ಟಿರುವರು. ಕರ್ನಾಟಕ ಏಕೀಕರಣ ಚಳುವಳಿಗೆ ನಾಡಿನ ಜನತೆಯನ್ನು ಹುರುದುಂಬಿಸಿದ್ದಾರೆ.

ಜಿ.ಎಸ್. ಶಿವರುದ್ರಪ್ಪನವರು 'ಕನ್ನಡ ರಾಜ್ಯೋದಯ' ಕವನದಲ್ಲಿ ಕರ್ನಾಟಕ ರಾಜ್ಯೋದಯವಾದರೂ ಇಲ್ಲಿ ಕನ್ನಡಕ್ಕಾಗಿ ಹೋರಾಟ ನಡೆಸಿ ಕನ್ನಡ ರಾಜ್ಯೋದಯ ಮಾಡಬೇಕೆಂದಿರುವರು. ಕನ್ನಡ ಭಾಷೆಯ ಬಗೆಗೆ ಜನತೆಗೆ ಇರುವ ತಾತ್ಸಾರವನ್ನು ಎತ್ತಿ ಹೇಳಿದ್ದಾರೆ. ರಾಜ್ಯೋದಯದ ಜೊತೆಗೆ ಗಡಿ, ಭಾಷೆ-ಮುಂತಾದ ವ್ಯಾಜ್ಯೋದಯಗಳು ಆದವು. 'ಕನ್ನಡ'ವೆಂದರೆ ಬರಿ ದೇಶ, ಭಾಷೆಯಷ್ಟೇ ಅಲ್ಲ. ಅದು ಕನ್ನಡಿಗರ ಕೆಚ್ಚು-ನೆಚ್ಚು, ಆತ್ಮದ ಅಂತಹಸ್ಸತ್ವ, ಅಧಿದೈವದ ಹೆಸರು. ಸಾವಿರಾರು ವರ್ಷಗಳ ಹಿನ್ನೆಲೆ, ಪರಂಪರೆಯಿರುವ ಕವಿಗಳ ಕಾವ್ಯ, ರಾಜರ, ಸಂತರ ನದಿ-ಗುಡಿ, ಜನರ ಉಸಿರಿನ ಸತ್ವ-ಇವುಗಳನ್ನೆಲ್ಲಾ ಹೊಂದಿರುವುದಾಗಿದೆ.-ಎಂದು 'ಕನ್ನಡ'ದ ಅರ್ಥವನ್ನು ವ್ಯಾಖ್ಯಾನಿಸಿರುವರು. ಇದನ್ನು,

"ನಾವು ನೀವು ಕನ್ನಡತನವನ್ನರಿಯುವತನಕಾ
ಹೀಗೇ ರಾಜ್ಯೋತ್ಸವವಾಗುತ್ತದೆ ಬರಿ ಹೊರಗೆ
ಇನ್ನೂ ಕನ್ನಡ ರಾಜ್ಯೋದಯವಾಗುವುದಿದೇ
ನಮಗೂ ನಿಮಗೂ ಒಳಗೆ"
(ಶಿವರುದ್ರಪ್ಪ ಜಿ.ಎಸ್. ೧೯೯೧, ಪುಟ-೩೭೬)

-ಎಂದು ಕರ್ನಾಟಕ ರಾಜ್ಯೋದಯವಾದರೂ ಇನ್ನೂ ಕನ್ನಡ ಭಾಷೆಯ ಸಮಸ್ಯೆಗಳು ಬಗೆ ಹರಿದಿಲ್ಲ. ಪ್ರತಿವರ್ಷ ರಾಜ್ಯೋತ್ಸವ ಆಚರಿಸುತ್ತೇವೆ. ಆ ಸಂದರ್ಭದಲ್ಲಿ ಮಾತ್ರ ಕನ್ನಡ ಭಾಷೆಯ ಬಗ್ಗೆ ದೊಡ್ಡ, ದೊಡ್ಡ ಮಾತನಾಡುತ್ತೇವೆ. ಉಳಿದ ದಿನ ಮರೆಯುತ್ತೇವೆ. ರಾಜ್ಯೋದಯವಾಗಿ ಇಷ್ಟು ವರ್ಷಕಳೆದರೂ ಆಗಬೇಕಾದ ಕನ್ನಡ ಕೆಲಸಗಳು ಇನ್ನೂ ಆಗಿಲ್ಲ. ಅದಕ್ಕಾಗಿಯೇ ಕವಿ ಇನ್ನೂ 'ಕನ್ನಡ ರಾಜ್ಯೋದಯವಾಗಬೇಕಾಗಿದೆ'-ಎಂದಿರುವರು.

ಆಧುನಿಕತೆಯೆಂಬ ಗಾಳಿ ಕನ್ನಡ ನಾಡಿಗೂ ಬೀಸಿರುವದರಿಂದ ಆದ ಬದಲಾವಣೆಗಳನ್ನು 'ಶುಭೋದಯ'-ಕವನದಲ್ಲಿ ಹೇಳಿರುವರು. ಕನ್ನಡ ನೆಲದ ಮೇಲೆ ನವೋದಯದ ಕಿರಣ ಸೂಸಿರುವದರಿಂದ ಶುಭೋದಯವಾಗಿದೆ. ಶುಭೋದಯವು ಯಾವ ಯಾವುದರಲ್ಲಿ ಆಗಿದೆಯೆಂದರೆ, ಕನ್ನಡ ನಾಡಿನ ನದಿ, ನೀರು, ಗಿರಿ, ವನ, ಶಿಲ್ಪಕಲಾ, ಗಾಯನ, ಕಾವ್ಯ, ಜಾನಪದ, ಗುಡಿಗೋಪುರ, ಶಿಖರ, ಗೊಂದಲದ ನಗರಗಳಲ್ಲಿ, ಯಂತ್ರ-ತಂತ್ರಗಳಿಂದಾದ ಪ್ರಗತಿಯಲ್ಲಿ-ಮುಂತಾದವುಗಳಲ್ಲಿ ಆಗಿದೆ. ನಾಡಿನ ಹಳಬ-ಹೊಸಬರಲ್ಲಿ, ಹಿರಿಯ-ಕಿರಿಯರಲ್ಲಿ ಶುಭೋಧಯವಾಗಿ, ಉತ್ಸಾಹದ ಚಿಲುಮೆ ಚಿಮ್ಮುತಿದೆ ಎಂದು ವರ್ಣಿಸಿರುವರು.

"ಕನ್ನಡ ಕುಲ ಬಾಂಧವರ ಸ್ವಾಗತ ಗೀತೆ"-ಯಲ್ಲಿ ಕನ್ನಡಿಗರು, ಈ ರಾಜ್ಯಕ್ಕೆ ಹೊರಗಿನಿಂದ ಬಂದವರನ್ನು "ಒಳಗೆ ದಯಮಾಡಿಸಿ ಇದೆಲ್ಲವೂ ನಿಮ್ಮದೇ ಮಹಾಸ್ವಾಮಿ"- ಎಂದು ಸ್ವಾಗತಿಸಿ ಅವರಿಗೆ ಅಗ್ರಪೂಜೆಯನ್ನು ಸಲ್ಲಿಸುತ್ತೇವೆ. ನಮ್ಮ ಭಾಷೆ; ರೀತಿ, ನೀತಿ, ನಮ್ಮತನವನ್ನು ಬಿಟ್ಟು ಅವರದನ್ನೇ ಅಳವಡಿಸಿಕೊಳ್ಳುತ್ತೇವೆಂದು ಬಹಳ ಮಾರ್ಮಿಕವಾಗಿ ವಿಂಡಬಿಸಿರುವರು.

'ಮೋಡಗಳ ಹಾಡು' ಕವನದಲ್ಲಿ ಮೋಡಗಳ ರಚನೆ, ಚಲನೆ, ಕಾರ್ಯ, ಪ್ರಯೋಜನಗಳನ್ನು, ಸಮುದ್ರದ ನೀರು ಕಾಯ್ದು ಮೋಡಗಳಾಗುವ ಬಗೆಯನ್ನು, ಇವು ಹಲವಾರು ತುಂಡುಗಳಂತೆ ಗೋಚರಿ ಮತ್ತೆ ಒಂದಾಗುವ ಕ್ರಿಯೆಯು ಐಕ್ಯತೆಯನ್ನು ಸಾರುತ್ತವೆ. ಈ ಮೋಡಗಳು ಕರುನಾಡು, ಕನ್ನಡ ನಾಡಿನ ಬಗೆಗೆ ವಿಶೇಷ ಒಲವನ್ನು ತೋರುತ್ತವೆ.

ಕರುನಾಡ ಹೊಕ್ಕೇವು
ಸೊಬಗಿಗೆ ಸಿಕ್ಕೇವು
ಮಿಂಚನ್ನೆ ನಕ್ಕೇವು

ನಕ್ಕೇವು
ಗುಡುಗಿನ ಕೇ ಕೇ
ಹಾಕೇವು"

(ಜಗದೀಶ ಮಂಗಳೂರಮಠ (ಸಂ);೨೦೦೦, ಪುಟ–೨೫೨)

ಎಂಬಲ್ಲಿ ಕನ್ನಡನಾಡಿನ ಸಿರಿಸೊಬಗಿಗೆ ಈ ಮೋಡಗಳು ಮಾರುಹೋಗಿವೆ. ಗುಡುಗು–ಮಿಂಚುಗಳು ಮಳೆಯ ಸೂಚನೆಯನ್ನು ಸೂಚಿಸುತ್ತ ಸಮೃದ್ಧತೆಯ ಸಂಕೇತವಾಗಿ ನಿಲ್ಲುತ್ತವೆ. ಹೀಗೆ ಕನ್ನಡ ನಾಡಿನ ವೈಭವವನ್ನು ಹೇಳುವಲ್ಲಿ ಈ ಮೋಡಗಳು ಮಹತ್ವದ್ದಾಗಿ ಕಾಣುತ್ತೇವೆ.

ನಾಡು ನುಡಿಗಳ ಬಗೆಗೆ, ಊರಿನ ಬಗೆಗೆ ಸಾಕಷ್ಟು ವಿವರಗಳನ್ನು ನೀಡಿ, ಮಕ್ಕಳಿಗೆ ನೀತಿ ಭೋಧನೆಯನ್ನು ನೀಡುವರು. ಅದರೊಂದಿಗೆ ರಾಷ್ಟ್ರಾಭಿಮಾನ, ಭಾಷಾಭಿಮಾನವನ್ನು ಮಕ್ಕಳಲ್ಲಿ ತುಂಬುವಲ್ಲಿ ಇವು ಪ್ರಭಾವಶಾಲಿಯಾದ ಪದ್ಯಗಳಾಗಿವೆ.

'ನಮ್ಮ ನಾಡು' ಕವನದಲ್ಲಿ ಕನ್ನಡ ನಾಡಿನ ನದಿಗಳ, ಭೌಗೋಳಿಕತೆಯ, ಬೆಳೆಗಳು, ಗಿರಿ–ಸರೋವರ, ಜಲಪಾತಗಳ ವಿವರಣೆಯನ್ನು ಸುಂದರವಾಗಿ ಹಾಡಿನ ಮೂಲಕ ಮಕ್ಕಳಿಗೆ ಪರಿಚಯಿಸುತ್ತಾರೆ.

'ತನನ ತೋಂ' ಕವನದಲ್ಲಿ ಕನ್ನಡ ಭಾಷೆಯ ಬಗೆಗೆ ಅಭಿಮಾನದ ಮಾತುಗಳನ್ನು ಆಡುವನು. ಈ ನಾಡಿನ ಸೊಗಸನ್ನು ಕನ್ನಡ ಭಾಷೆಯಲ್ಲಿಯೇ ಹಾಡೆಂದು ಅದು ಈ ನಾಡಿನ ಜನರ ಮಾತೃಭಾಷೆಯಾಗಿದ್ದರಿಂದ ಅದಕ್ಕೆ ತನ್ನದೇ ಆದ ಒಮದು ವಿಶೇಷತೆಯಿದೆ. ಎಂದು ಹೇಳುತ್ತಾ

"ನೆನಪು ಹಿಡಿ
ಮಂತ್ರ ನುಡಿ
ಕನ್ನಡವೇ ಓಂ
ಕನ್ನಡ ಓಂ
ಕನ್ನಡ ತೋಂ
ತನನ ತನನ ತೊಂ"

(ಜಗದೀಶ ಮಂಗಳೂರಮಠ (ಸಂ);೨೦೦೦, ಪುಟ–೨೫೮)

ಇದನ್ನು ಒಂದು ದೀಕ್ಷೆಯಾಗಿ ತೆರೆದುಕೊಂಡು ಆ ಭಾಷೆಯ ಬೆಳವಣಿಗೆಗೆ ಸಹಾಯಕವಾಗುವಂತೆ ಮಕ್ಕಳಿಗೆ ಭಾಷಾಭಿಮಾನವನ್ನು ಮೂಡಿಸುತ್ತಾರೆ. ಭಾಷೆ ಸಂಗೀತಮಯವಾಗಿರುವುದರೊಂದಿಗೆ ಗುಡುಗಿನೋಪಾದಿಯಲ್ಲಿ ಗರ್ಜಿಸಲೆಂಬ ಆಶಯವಿದೆ.

ನಮ್ಮ ಕನ್ನಡ ನವೋದಯ ಕಾವ್ಯದಲ್ಲಿ ನಾಡಿನ ವಿಮೋಚನೆಯ ಮುನ್ಸೂಚನೆಯ ಮಂಗಳದ ಕವನಗಳು ನಿಚ್ಚಳವಾಗಿ ಪಲ್ಲವಿಸಿ, ನಮ್ಮನ್ನು ಆಳುವ ಆಂಗ್ಲ ಸಂಸ್ಕೃತಿಯ ವಿರುದ್ದದ ಕಾವ್ಯಾತ್ಮಕ

ಪ್ರತಿಭಟನೆ ಈ ನೆಲದ ಮೂಲ ಸಂಸ್ಕೃತಿಯ ಅಂತಃಶ್ಚೇತನದಿಂದ ದೀಪ್ತಗೊಂಡ ದೇಶ ಪ್ರೇಮದ ಉಜ್ವಲ ಕಾವ್ಯಧಾರೆ ದೇಶಭಕ್ತಿ ಗೀತೆಗಳನ್ನು ಹೋರಾಟದ ಆಯುಧವನ್ನಾಗಿ ಮಾಡಿಕೊಂಡ ಕವಿಗಳ ಜಾಣ್ಮೆ ಹಿರಿದಾದದ್ದೆ. ಆಂಗ್ಲರು ಇಲ್ಲಿಯ ದೇಶೀಯ ಸಂಸ್ಕೃತಿಯನ್ನು ಕೀಳಾಗಿ ಕಂಡದ್ದು, ತಮ್ಮ ಪ್ರತಿಕ್ರಿಯೆಗಳನ್ನು ಕಾವ್ಯದಲ್ಲಿ ಸ್ಪಷ್ಟವಾಗಿ ಮೂಡಿಸಿದ್ದಾರೆ.

"ಬಹುದಿನಗಳಿಂದ ಮೈಮರವೆಯಿಂದ
ಕೂಡಿರುವ ಕೊಳೆಯ ಕೊಚ್ಚೇವು
ಎಲ್ಲೆಲ್ಲಿ ಕನ್ನಡದ ಕಂಪು ಸೂಸಲು
ಅಲ್ಲಲ್ಲಿ ಕರಣ ಚಾಚೇವು
ನಡುನಾಡೆ ಇರಲಿ, ಗಡಿನಾಡೆ ಇರಲಿ
ಕನ್ನಡದ ಕಳೆಯ ಕೆಚ್ಚೇವು
ಮರತೇವು ಮರವ, ತೆರೆದೇವು ಮನವ,
ಎರದೇವು ಒಲವ ಹಿಡಿ ನೆನಪ
ನರನರವನೆಲ್ಲ ಹುರಿಗೊಳಿಸಿ ಹೊಸೆದು
ಹಚ್ಚೇವು ಕನ್ನಡ ದೀಪ
ಕಲ್ಪನೆಯ ಕಣ್ಣು ಹರಿವನಕ ಸಾಲು
ದೀಪಗಳ ಬೆಳಕ ಬೀರೇವು
ಹಚ್ಚಿರುವ ದೀಪದಲಿ ತಾಯ ರೂಪ
ಅಚ್ಚಳಿಯದಂತೆ ತೋರೇವು
ಒಡಲೊಡಲ ಕೆಚ್ಚಿನಾ ಕಿಡಿಗಳನ್ನು
ಗಡಿನಾಡಿನಾಚೆ ತೋರೇವು.
ಹೊಮ್ಮಿರಲು ಪ್ರೀತಿ, ಎಲ್ಲಿಯದು ಭೀತಿ?–
ನಾಡೊಲವೆ ನೀತಿ ಹಿಡಿ ನೆನಪ
ಮನೆಮನೆಗಳಲ್ಲಿ ಮನಮನಗಳಲ್ಲಿ
ಹಚ್ಚೇವು ಕನ್ನಡದ ದೀಪ"

(ಜಗದೀಶ ಮಂಗಳೂರಮಠ (ಸಂ);೨೦೦೦, ಪುಟ–೨೧)

ಡಿ.ಎಸ್. ಕರ್ಕಿಯವರ 'ಹಚ್ಚೇವು ಕನ್ನಡ ದೀಪ" ಉತ್ಕೃಷ್ಟ ನಾಡಗೀತೆಯಾಗಿ ಜನರನ್ನು ಪ್ರೋತ್ಸಾಹಿಸುವ ಮಂಗಲಗೀತೆಯಾಗಿದೆ. ಛಲಬೆರೆತ ನೀರ್ಧಾರವೊಂದನ್ನು, ಮಾಡಿಯೇ ತೀರುತ್ತೇವೆಂಬ ಆಶಯವನ್ನು ಸ್ಪಷ್ಟವಾಗಿ ಚಿತ್ರಿಸುತ್ತಾರೆ. ಬೆಳಗಾವಿಯಂತಹ ಗಡಿನಾಡಿನಲ್ಲಿದ್ದುಕೊಂಡು, ಕನ್ನಡ ಕಟ್ಟುವ ಪಡೆಯನ್ನೇ ನಿರ್ಮಾಣ ಮಾಡಿದರು. 'ಕನ್ನಡ ಬದುಕಿದರೆ ಕರ್ಕಿಯವರು ಬದುಕುತ್ತಾರೆ. ಕನ್ನಡವೂ ಬದುಕುತ್ತದೆ, ಕರ್ಕಿಯವರೂ ಬರುತ್ತಾರೆ"(ಪರಡ್ಡಿ ಎಸ್.ಎಸ್., ೨೦೧೧, ಪುಟ–೩೬) ದೇಶದ ಪಾರತಂತ್ರ್ಯದೊಂದಿಗೆ ಮರಾಠಿ ಭಾಷೆಯ ಒತ್ತಡಗಳ ಮಧ್ಯ ಕನ್ನಡ ಜನತೆಯನ್ನು ಸದಾ ಜಾಗೃತರನ್ನಾಗಿ ಮಾಡುವ ಅಂದಿನ ಸಮಯದಲ್ಲಿ ಕನ್ನಡ ನಾಡಿನಲ್ಲಿದ್ದ

ಅಭಿಮಾನ ಶೂನ್ಯತೆಯ ಕತ್ತಲೆಯನ್ನು ಹೋಗಲಾಡಿಸಲು, ಬೆಳಕನ್ನು ಮೂಡಿಸುವ ಮಂಗಲ ಗೀತೆಯಾಗಿ ಜನಜನಿತವಾಯಿತು.

ಕರ್ಕಿಯವರು ಪ್ರಕೃತಿ, ಮನುಷ್ಯರ ಜೊತೆ ನಾಡು ನುಡಿ, ಸಂಸ್ಕೃತಿ, ರಾಷ್ಟ್ರೀಯತೆ ಎನ್ನುವ ಪರಿಕಲ್ಪನೆಯ ಒಂದು ರೊಮಾಂಚನಕಾರಿಯಾದ ವಿಷಯವಾಗಿದ್ದ ಸಂದರ್ಭದಲ್ಲಿ, ಅಲ್ಲಿಯ ಸಂಸ್ಕೃತಿಯನ್ನು ಅರಗಿಸಿಕೊಂಡಂತಹ ಕವಿಗೆ ಮನಸ್ಸು ಸಂಪೂರ್ಣವಾಗಿ ಆ ಕಡೆಗೆ ಹೊರಳಿತ್ತು. ಕನ್ನಡದ ಸಂಸ್ಕೃತಿ, ಸಾಹಿತ್ಯ, ಕಲೆಗಳಿಗೆ ಮಾರು ಹೋದ ಕವಿ ಈ ಎಲ್ಲವುಗಳನ್ನೂ ತಮ್ಮ ಸೃಜನಶೀಲ ತೆಕ್ಕೆಯಲ್ಲಿರಿಸಿಕೊಂಡು ಬಳಸಿದರು. "ಮುಖ್ಯವಾಗಿ ಕರ್ಕಿಯವರು ರಾಷ್ಟ್ರೀಯತೆಯ ಒಂದಂಗವಾಗಿ ಕಾಣಿಸಿಕೊಂಡ ಕರ್ನಾಟಕ ಏಕೀಕರಣದ ಹೋರಾಟದ ಸಂದರ್ಭದಲ್ಲಿ ಕಳಕಳಿಯಿಂದ ನವಿರೆದ್ದ ಪರಿಸರದ ನೆಲದ ವಾಸನೆಯಿಂದ ರೋಮಾಂಚನೆಗೊಂಡ ವ್ಯಕ್ತಿತ್ವ ಕ್ರಿಯಾಶೀಲವಾದ ಪ್ರತಿಭೆ, ಕನ್ನಡಿಗರಲ್ಲಿ ರಾಷ್ಟ್ರೀಯ ಪ್ರಜ್ಞೆಯನ್ನು ಮೂಡಿಸಿ, ಅದನ್ನು ಕೆರಳಿಸಿ, ಏಕತ್ರ ಕರ್ನಾಟಕದ ಜಾಗೃತಿಯನ್ನುಂಟುಮಾಡುವುದು ಆಗಿನ ಕವಿಗಳ ಮಹತ್ವದ ಹೊಣೆಗಾರಿಕೆ ಹಾಗೂ ಜವಾಬ್ದಾರಿಗಳಲ್ಲೊಂದಾದ ಕಾಲವಾಗಿತ್ತು. ಮೇಲಾಗಿ ಜನ್ಮಭೂಮಿಯಾದ ನಾಡಿನಲ್ಲಿಯೇ ತಾಯ್ತನವನ್ನು, ದೈವೀಕತೆಯನ್ನು ಕಂಡುಕೊಂಡು, ಉಪಾಸನಾ ಭಾವನೆಯನ್ನು ಬೆಳೆಸಿಕೊಂಡು, ಬಂದ ಕಾಲ ಆದಾಗಿತ್ತು. ಇದರ ಪರಿಣಾಮವಾಗಿ ಈ ರಾಷ್ಟ್ರಪ್ರಜ್ಞೆ, ನಾಡಪ್ರಜ್ಞೆ ನವೋದಯ ಕವಿಗಳಲ್ಲಿ ಮಾತ್ರವಲ್ಲ, ಜನಪದ ಕವಿಗಳಲ್ಲಿ, ವೃತ್ತಿರಂಗಭೂಮಿಯ ನಾಂದಿ ಪದ್ಯಗಳಲ್ಲಿಯೂ ಕಾಣಿಸಿಕೊಳ್ಳುತ್ತಿದ್ದುದು ಆಗಿನ ಜ್ವಲಂತ ಪ್ರಜ್ಞೆಯ ಬಹುದೊಡ್ಡ ನಿದರ್ಶನ."(ಪರಡ್ಡಿ ಎಸ್.ಎಸ್., ೨೦೧೧, ಪುಟ-೭೪)

ಕರ್ನಾಟಕದ ಏಕೀಕರಣದ ಸಂದರ್ಭದಲ್ಲಿ ಹುಯಿಲಗೋಳ ನಾರಾಯಣರ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬುದು ಆಶಾಭಾವವನ್ನು ವ್ಯಕ್ತಪಡಿಸಿದ್ದರೆ, ಕರ್ಕಿಯವರ 'ಹಚ್ಚೇವು ಕನ್ನಡ ದೀಪವು' ಛಲ ಬೆರೆತ ನಿರ್ಧಾರವನ್ನು ಪಡೆದ ಸ್ಫೂರ್ತಿಯ ಮಂಗಳಗೀತೆಯಾಗಿ ಜನಮಾನಸದ ನಾಡಗೀತೆಯಾಯಿತು. 'ಹಚ್ಚೇವು ಕನ್ನಡದ ದೀಪ' ಜನರೇ ತಾವಾಗಿ ಸ್ವೀಕರಿಸಿದ ನಾಡಗೀತೆಯಾಗಿತ್ತು. ಜನ ಸ್ವಯಂ ಸ್ಫೂರ್ತಿಯಿಂದ ಆ ಕವನವನ್ನು ಸ್ವೀಕರಿಸಿದ್ದರು. ಕರ್ನಾಟಕವಲ್ಲದೇ ದೇಶದ ಇತರ ಭಾಗಗಳಲ್ಲಿ ಈ ಕವನ ಪ್ರಸಿದ್ಧಿ ಪಡೆದಿದೆ. ಕಳೆದ ವರ್ಷ ಅಮೇರಿಕಾದ 'ಬಾಲ್ಟಿಮೋರ್'ದಲ್ಲಿ 'ವಿಶ್ವ ಕನ್ನಡ ಸಮ್ಮೇಳನ'ದಲ್ಲಿಯೂ ಇದರ ನೃತ್ಯ ನಡೆಯಿತು."(ಪರಡ್ಡಿ ಎಸ್.ಎಸ್., ೨೦೧೧, ಪುಟ-೭೪)ಹೀಗೆ ಭೂತವೈಭವ, ಭವಿಷ್ಯದ ಹಾರೈಕೆಗಳೆರಡನ್ನೂ ವರ್ತಮಾನದ ನೆಲೆಯಲ್ಲಿಯೇ ನೆಲೆಗೊಳಿಸಿ, ಸಾಂಸ್ಕೃತಿಕವಾಗಿ ಭೂತದ ವರ್ತಮಾನ ಹಾಗೂ ಭವಿಷ್ಯಗಳ ಸಾಮರಸ್ಯವನ್ನು ಸಾಧಿಸಿಕೊಡುವ ಉತ್ಕಟತೆಯ ಉತ್ಸಾಹವಿರುವ ಈ ಗೀತೆ ಕನ್ನಡದ ಮಾಂಗಲ್ಯ ಗೀತೆಯೇ ಸರಿ.

"ಕರುನಾಡಿನರಿವ ನರಿತೀವಿ ಭಾವ
ದಲಿ ಜೀವನಾಡಿ ನುಡಿಸೇವು
ತೆರೆತೆರೆದ ಕಣ್ಣಿನಲಿ ನೇಹವೆರೆದು
ನವ ಜ್ಯೋತಿಯನ್ನೇ ಮುಡಿಸೇವು
ನಮ್ಮನ್ನವುಂಡು ಅನ್ಯಾಯಗೈಯು
ವಂಥವರ ಹುಚ್ಚ ಬಿಡಿಸೇವು
ಇಹುದೆಮಗೆ ಛಲವು, ಕನ್ನಡದ ಬಲವು
ಕನ್ನಡದ 'ಒಲವು-ಹಿಡಿ ನೆನಪ
ನಮ್ಮೆದೆಯ ಕೆಚ್ಚು ನೆಚ್ಚುಗಳನೂಡಿ
ಹಚ್ಚೇವು ಕನ್ನಡದ ದೀಪ"

(ಜಗದೀಶ ಮಂಗಳೂರಮಠ (ಸಂ);೨೦೦೦, ಪುಟ-೨೧)

ಸಂಸ್ಕೃತಿಯ ಪುನರುಜ್ಜೀವನದ ಸ್ಫೂರ್ತಿಯು ಕೇವಲ ಒಂದು ಭಾವವೇಶವಾಗಿ ಕಾಣಿಸಿಕೊಳ್ಳದೆ, ಕ್ರಿಯಾಶೀಲ ವಿಧಾಯಕ ಪ್ರವೃತ್ತಿಯನ್ನು, ಅದರ ಭರವಸೆಯನ್ನು ಖಚಿತಗೊಳಿಸುತ್ತದೆ. ಕನ್ನಡಿಗರಲ್ಲಿರುವ ವೀರತ್ವವು, ಕನ್ನಡಿಗರ ಔದಾರ್ಯವನ್ನು ವಿಪರೀತವಾಗಿ ಭಾವಿಸಿದ, ನಾಡಿನ ಒಳ ಶತೃಗಳಾದ ಪರಭಾಷಿಕರ ಕೃತಘ್ನತೆಯನ್ನು ಗುರುತಿಸುವ ರೀತಿ, ಅದರ ಪ್ರತಿಕ್ರಿಯೆಯಾಗಿ ಚಿಮ್ಮಿಬಂದ ಸಾತ್ವಿಕ ರೋಷ ಈ ಕ್ರಾಂತಿಯ ಹಿಂದಿರುವ ಆಶಯದ ಪಾವಿತ್ರ್ಯತೆಯನ್ನು ಸಾರುವಂತಾಗಿದೆ. ಕನ್ನಡದ ದೀಪ ಎನ್ನುವುದೇ ಒಂದು ಜಾಗೃತ ಪ್ರಜ್ಞೆಯ ಕ್ರಿಯಾಶೀಲ ಚೈತನ್ಯದ ಉಜ್ವಲ ರೂಪಕವಾಗಿ ಕವಿಯ ಧೀರೋದಾತ್ತ ಧೋರಣೆಯನ್ನು ಪರಿಣಾಮಕಾರಿಯಾಗಿಸುತ್ತದೆ. ಕ್ರಿಯಾಶೀಲ ಸಂಕಲ್ಪದ ಕೆಚ್ಚಿನೊಂದಿಗೆ, ನಂದಾದೀಪವಾಗಿ ಉರಿಯುವ ಅದರ ಪ್ರಶಾಂತತೆಯನ್ನು, ಪ್ರಕಾಶವನ್ನು ಸಾಕ್ಷಾತ್ಕರಿಸುತ್ತದೆ. ಕರ್ಕಿಯವರ ಕನ್ನಡ ಲಿಪಿಯನ್ನು, ಬೆಳವಣಿಗೆಯನ್ನು, ಅದರ ಉಚ್ರಾಯ ಸ್ಥಿತಿಯನ್ನು ಪ್ರಮುಖ ರಾಜಮನೆತನಗಳೊಂದಿಗೆ ಗುರುತಿಸಿದ್ದಾರೆ. ಅದನ್ನು-

"ಕಲ್ಲಿನಲಿ, ಕಾವ್ಯದಲಿ, ಓಲೆಯಲಿ, ಲೋಹದಲಿ
ಭಿತ್ತಿಯಲಿ ಈ ಬಳ್ಳಿ ಸುಳಿದಿರುವುದು
ಚಾಲುಕ್ಯ ಕಲಚುರ್ಯ ಹೊಯ್ಸಳಾಧೀಶ್ವರರ
ಯುಗಗಳಲಿ ಹೊರೇರಿ ಹರಡಿರುವುದು"

(ಜಗದೀಶ ಮಂಗಳೂರಮಠ (ಸಂ);೨೦೦೦, ಪುಟ-೧೩)

ಕನ್ನಡ ಭಾಷೆ ಪ್ರಾರಂಭದಲ್ಲಿ ಶಾಸನಗಳು ಕಲ್ಲಿನಲ್ಲಿ ಕೆತ್ತಲ್ಪಟ್ಟಿದ್ದರೆ, ನಂತರ ತಾಳೆಗರೆ, ಲೋಹಗಳ ಮೇಲೆ ಅದು ಬರವಣಿಗೆಯನ್ನು ಪಡೆಯಿತು. ಚಾಲುಕ್ಯ ಮತ್ತು ಹೊಯ್ಸಳರ ಕಾಲದಲ್ಲಿ ಕನ್ನಡ ಸಾಹಿತ್ಯದ ಉನ್ನತ ಬೆಳವಣಿಗೆಯನ್ನು ಕಂಡಿತು. ಅಷ್ಟೇ ಅಲ್ಲ ಇದು ಕನ್ನಡ ಭಾಷೆ ಸಮೃದ್ಧಗೊಂಡು ಕನ್ನಡವೂ ವಿಶ್ವಭಾಷಾ ಸ್ಥಾನಗಳಲ್ಲಿ ಒಂದಾಗಿ ಕನ್ನಡಿಗರಾಂತರ್ಯದಿಂದಲೇ ಸೌಂದರ್ಯದಿಂದಾಗಿರುತ್ತದೆ.

ಕನ್ನಡ ಭಾಷೆ ಮತ್ತು ಲಿಪಿಗಳು ಬೇರೆ ಭಾಷೆಗಳ ಪ್ರಭಾವವಿದ್ದರೂ. ತನ್ನಲ್ಲಿರುವ ಅಂತಸ್ಸತ್ವದಿಂದ ಅದು ಬೆಳವಣಿಗೆಯಾಗಲು ಸಾಧ್ಯವಾಗಿರುತ್ತದೆ

ಚೆನ್ನವೀರ ಕಣವಿಯವರು 'ಅಖಂಡ ಕರ್ನಾಟಕ'–ಕವನದಲ್ಲಿ ಏಕೀಕರಣಕ್ಕಾಗಿ ಹೋರಾಡಲು

"ಅಖಂಡ ಕರ್ನಾಟಕವೆ! ವಿಶ್ವಾತ್ಮಕ ರೂಪಕವೆ!
ಎಚ್ಚರಿಸು ನಿದ್ರೆಯಿಂ ಮುದ್ರಿತರ, ಮತ್ತೀತರ"
(ಚನ್ನವೀರ ಕಣವಿ, ೧೯೯೬, ಪುಟ–೩೨)

–ಎಂದು ಎಚ್ಚರಿಸಲು ಕೇಳಕೊಂಡಿರುವರು. ಭಾರತವು ಸ್ವಾತಂತ್ರ್ಯಗೊಂಡಿದೆ. ಇನ್ನು ಕನ್ನಡನಾಡು ಏಕೀಕರಣಗೊಳ್ಳಬೇಕಾಗಿದೆ. ಯಾವಾಗ ಕರ್ನಾಟಕ ಏಕೀಕರಣವಾಗುತ್ತದೆಯೊ ಆವಾಗ– "ನವ ಭಾರತದ ಬಾಗಿಲಿಗೆ ತೋರಣ"–ವೆಂದು ಕರ್ನಾಟಕ ಏಕೀಕರಣದಲ್ಲಿ ನವಭಾರತ ನಿರ್ಮಾಣದ, ಅಭ್ಯುದಯವನ್ನು ಕಂಡಿರುವರು. ಈ ರಾಜ್ಯಕ್ಕೆ 'ಕರ್ನಾಟಕ'–ವೆಂದು ನಾಮಕರಣವಾದ (೧೯೭೩ ನವ್ಹಂಬರ ೧ ರಂದು) ಸಂದರ್ಭದಲ್ಲಿ ರಚಿಸಿದ–"ಹೆಸರಾಯಿತು ಕರ್ನಾಟಕ"–ಕವನದಲ್ಲಿ ರಾಜ್ಯಕ್ಕೆ ಕರ್ನಾಟಕವೆಂದು ಹೆಸರೇನೋ ಆಯಿತು, ಅದರಂತೆ ಇನ್ನು– "ಉಸಿರಾಗಲಿ ಕನ್ನಡ"–ವೆಂದು ಸಾರಿದ್ದಾರೆ ಕನ್ನಡ ಭಾಷೆ ಎಂಥದೆಂದರೆ, 'ಹುಸಿಹೋಗದ ಹಸಿಗೋಡೆಯಲ್ಲಿಟ್ಟ ಹರಳಿನಂತೆ', 'ಹೊಸೆದ ಹಾಗೆ ಹುರಿಗೊಳ್ಳುವ ಹಗ್ಗದಂತೆ', 'ಹೆಡೆಬಿಚ್ಚಿ ಅಬ್ಬರಿಸುವ ಪಶ್ಚಿಮ ಸಮುದ್ರದ ತೆರೆಗಳಂತೆ', 'ಬಾನೆತ್ತರಕ್ಕೆ ಕರೆಯುವ ಸಹ್ಯಾದ್ರಿಯ ಶಿಖರದಂತೆ'–ಎಂದು ಕನ್ನಡ ನುಡಿಯ ಹಿರಿಮೆ, ಮಹತ್ವವನ್ನು ವರ್ಣಿಸಿರುವರು.

"ಗುಡಿ ಗೋಪುರ ಹೊಂಗಳಸಕೆ
ಚೆಂಬೆಳಕಿನ ಕನ್ನಡ;
ನಮ್ಮೆಲ್ಲರ ಮೈ ಮನಸಿನ
ಹೊಂಗನಸಿನ ಕನ್ನಡ."
(ಶೇಷಗಿರಿರಾವ್ ಎಲ್.ಎಸ್. (ಸಂ), ೧೯೯೬, ಪುಟ–೧೯)

ಇಂಥಹ ಕನ್ನಡ ನುಡಿಯ ಕಾವ್ಯವು ವಿಸ್ತಾರವೂ ಅಪಾರವಾದುದಾಗಿದೆ. ತ್ರಿಪದಿಯಿಂದ–ಮಹಾಕಾವ್ಯದವರೆಗೆ, ವೀರದಿಂದ–ಶಾಂತರಸಗಳ ಸಮರಸವನ್ನು ಹೊಂದಿದೆ. ಇಂಥಹ ಶ್ರೀಮಂತವಾದ ಕನ್ನಡವು ನಮ್ಮೆಲ್ಲರ ಉಸಿರಾಗಲಿ ಎಂಬುದೇ ಕವಿಯ ಆಶಯ.

ಕೆ.ಎಸ್. ನಿಸ್ಸಾರ ಅಹಮದ್‌ರು "ಎಂದು ಮೆರೆಯುವೆ ತಾಯಿ" ಕವನದಲ್ಲಿ ಗತಕಾಲದ ಬೈಭವವನ್ನು ಮತ್ತೆ ಎಂದು ಪಡೆಯುವೆ ತಾಯಿ? ಎಂದು ಪ್ರಶ್ನಿಸಿರುವರು. ಮಳೆಗಾಲದ ಕಪ್ಪೆಯ ಸದ್ದಿನಂತೆ ರಾಜ್ಯೋತ್ಸವದ ಸದ್ದನ್ನು ಒಂದು ದಿನ ಮಾಡಿ ವರ್ಷವಿಡೀ ಮರೆಯುತ್ತಾರೆ. ಕನ್ನಡಿಗರೆಲ್ಲರನ್ನು ಒಂದು ಮಾಡಲು ಕವಿ ಕನ್ನಡ ತಾಯಿಗೆ–

"ಕನ್ನಡಿಗರು ಭೇದ ಮರೆತು
ಎಲ್ಲರೂ ಒಂದಾಗಿ ಬೆರೆತು
ಮರಳಿಸಿಂಹರಂತೆ ಬದುಕು-
ವಂತೆ ಕಲಿಸು ಬಾ! "
(ನಿಸಾರ್ ಅಹಮದ್ ಕೆ.ಎಸ್. ೧೯೯೫, ಪುಟ-೩೬೭)

-ಎಂದು ಬೇಡಿಕೊಂಡಿದ್ದಾರೆ. 'ಹಿರಿಮೆ' ಕವನದಲ್ಲಿ ಕನ್ನಡ ತಾಯಿಯ ಹಿರಿಮೆ-ಗರಿಮೆಗಳನ್ನು, ನೆಲ-ಜಲ ಪ್ರಕೃತಿ ಸಂಪತ್ತನ್ನೂ ಗತಕಾಲದ ವೈಭವ, ಇತಿಹಾಸವನ್ನು, ಈ ನಾಡನ್ನು ಆಳಿದ ಶ್ರೇಷ್ಠ ಅರಸರನ್ನು, ಅವರ ಸಾಹಸ-ಶೌರ್ಯಗಳನ್ನು ಕುರಿತು ವರ್ಣಿಸಿರುವರು.

"ನಿನ್ನ ಚಕ್ರೇಶ್ವರರು ಹೈಮಾಚಲದ ನೆಲೆಯಲ್ಲಿ
ಮೆರೆದ ಅದಟಿಗೆ ನೆಟ್ಟಾ ಕಲ್ಲು ಸಾಕ್ಷಿ
ಬಹುದೂರ ಬಂಗಾಳ ದಿಳೆಯ ಸೇನರ ಸೇನೆ
ನಿನ್ನದೇ ತಳಿಯಮ್ಮ ಮಂಗಳಾಕ್ಷಿ"
(ನಿಸಾರ್ ಅಹಮದ್ ಕೆ.ಎಸ್. ೧೯೯೫, ಪುಟ-೫೮೭)

ರಾಷ್ಟ್ರಕೂಟರ ಅರಸರಾದ ಧೃವ ಮತ್ತು ೩ನೇ ಗೋವಿಂದರು ಉತ್ತರ ಭಾರತದಲ್ಲಿಯ ಗುರ್ಜರ ಪ್ರತಿಹಾರರನ್ನು -ಬಂಗಾಳದ ಸೇನರನ್ನು ಮತ್ತು ಪಾಲರನ್ನು ಸೋಲಿಸಿ ಸಾರ್ವಭೌಮತ್ವ ಮೆರೆದ ದ್ಯೋತಕವಾಗಿ ಹಿಮಾಲಯದಲ್ಲಿ ಶಾಸನ ಬರೆಯಿಸಿದ್ದಾರೆ. ಹೀಗೆ ರಾಷ್ಟ್ರಕೂಟರು ಉತ್ತರ ಭಾರತದಲ್ಲಿ ಸಾರ್ವಭೌಮತ್ವ ಮೆರೆದ ಕನ್ನಡ ನಾಡಿನ ಏಕೈಕ ಅರಸು ಮನೆತನವಾಗಿದೆ. ಬಂಗಾಳವನ್ನು ಆಳಿದ ಸೇನ ಅರಸರ ಸಂತತಿಯ ಮೂಲ ಕನ್ನಡನಾಡಾಗಿತ್ತು. ಹೀಗೆ ಉತ್ತರ ಭಾರತದಲ್ಲಿ ಸಾಹಸ-ಶೌರ್ಯ, ಕೀರ್ತಿಯನ್ನು ಮೆರೆದಂತಹ ಅರಸರಿಗೆ ಜನ್ಮವಿತ್ತ ಕನ್ನಡ ತಾಯಿಯ ಮಹಿಮೆ ಅಪಾರವಾದುದೆಂದು ಹೆಮ್ಮೆ ಪಟ್ಟಿರುವರು.

-"ಕನ್ನಡಾಂಬೆಗೆ"-ಕವನದಲ್ಲಿಯೂ ಕವಿ ಕನ್ನಡ ತಾಯಿಯನ್ನು ಸ್ತುತಿಸಿ ತನಗೆ ವಾತ್ಸಲ್ಯ, ಅಭಯ, ಆಶೀರ್ವಾದ ನೀಡಬೇಕೆಂದು, ಬೇಡಿಕೊಂಡಿದ್ದಾರೆ. ಕನ್ನಡಿಗರಲ್ಲಿ ಇತಿಹಾಸದ ಜ್ಞಾನ ಕೊಟ್ಟು ಅಭಿಮಾನ ಕೆರಳಿಸಬೇಕೆಂದೂ, ರಾಜ್ಯದಲ್ಲಿರುವ ಅರಾಜಕತೆಯನ್ನು ನಿವಾರಿಸಬೇಕೆಂದು ಮತ್ತು ಹುಲುಸಾಗಿ ಕನ್ನಡ ಪೈರು ಬೆಳೆಯಲು ಅಡ್ಡಿಯಾಗಿರುವ ಪರಭಾಷೆ ಎಂಬ ಕಳೆಯನ್ನು ನಿವಾರಿಸಬೇಕೆಂದೂ, ಕನ್ನಡಿಗರಿಗೆ ವಿದ್ಯೆ-ಸಂಪತ್ತನ್ನು ಕೊಟ್ಟು ಹರಸಬೇಕೆಂದೂ ಕನ್ನಡ ತಾಯಿಯಲ್ಲಿ ಪ್ರಾರ್ಥಿಸಿಕೊಂಡಿರುವರು:

"ಪರಭಾಷೆಯ ಕಳೆತಗ್ಗಲಿಹಮ್ಮ
ಕನ್ನಡ ನುಡಿ ಬೆಳೆವರ್ಧಿಸಲಮ್ಮ"
(ನಿಸಾರ್ ಅಹಮದ್ ಕೆ.ಎಸ್. ೧೯೯೫, ಪುಟ-೩೮೮)

ಕರ್ನಾಟಕದಲ್ಲಿ ಪರಭಾಷೆಗಳ ಹಾವಳಿ ಹೆಚ್ಚಾಗಿ ಕನ್ನಡ ಭಾಷೆ ಬೆಳೆಯಲು ಆತಂಕಕಾರಿಯಾಗಿರುವದನ್ನು ಸೂಚಿಸಿದ್ದಾರೆ. ಹೀಗೆ ಇದರಲ್ಲಿ ಕನ್ನಡ ನಾಡು-ನುಡಿಯ ಹಿತಾಸಕ್ತಿ, ಕಾಳಜಿಯನ್ನು ವ್ಯಕ್ತಪಡಿಸಿರುವರು. ಶ್ರೇಯೋಭಿವೃದ್ಧಿಗಾಗಿ ಹಂಬಲಿಸಿರುವರು. 'ಕನ್ನಡ ರಾಜೇಶ್ವರಿ'-ಕವನದಲ್ಲಿಯೂ ಕನ್ನಡ ನಾಡಿನ ಉತ್ಕಟಾಭಿಮಾನವನ್ನು ವ್ಯಕ್ತಪಡಿಸಿರುವರು. ನಾಡಿನ 'ನದಿ-ಗಿರಿ-ಕಾನನ, ಪ್ರಕೃತಿ ಸಂಪತ್ತನ್ನು, ಧರ್ಮ ಸಮನ್ವಯದ ಸಂಕೇತವಾಗಿರುವ ಹಲವಾರು ಧರ್ಮದ ದೇವಾಲಯಗಳನ್ನು, ಹಲವಾರು ಮತ ಧರ್ಮದ-ಪಂಥ ಜನಾಂಗಗಳ ಸಾಮರಸ್ಯವನ್ನು ಹಾಡಿ ಹೊಗಳಿದ್ದಾರೆ.

ನಿಸ್ಸಾರ ಅಹಮದ್‌ರ ಪ್ರಸಿದ್ಧಗೀತೆ-'ನಿತ್ಯೋತ್ಸವ'-ಈ ಭಾವಗೀತೆಯ ಧ್ವನಿಸುರಳಿ (ರಿಕಾರ್ಡಿಂಗ್ ಕ್ಯಾಸೆಟ್) ಮಾಡಲಾಗಿದ್ದು ಕನ್ನಡಿಗರ ಮನಸೂರೆಗೊಂಡು ಪ್ರಸಿದ್ಧವಾಗಿದೆ. ಪ್ರಸ್ತುತ ಈ ಕವನದಲ್ಲಿ ಕವಿಯು ಕನ್ನಡ ತಾಯಿಗೆ ನಿತ್ಯವೂ ಯಾವದರಿಂದ ಯಾವುದರಲ್ಲಿ ಉತ್ಸವ ನಡೆಯುತ್ತದೆಂಬುದನ್ನು ರೂಪಕ-ಪ್ರತಿಮೆ-ಪ್ರತೀಕಗಳ ಮೂಲಕ ಕಾವ್ಯೋತ್ಸವವನ್ನೇ ಮಾಡಿದ್ದಾರೆ.

"ಜೋಗದ ಸಿರಿಬೆಳಕಿನಲ್ಲಿ, ತುಂಗೆಯ ತೆನೆ ಬಳುಕಿನಲ್ಲಿ
ಸಹ್ಯಾದ್ರಿಯ ಲೋಹದದಿರ ಉತ್ತುಂಗದ ನಿಲುಕಿನಲ್ಲಿ
ನಿತ್ಯ ಹರಿದ್ವರ್ಣ ವನದ ತೇಗ-ಗಂಧ-ತರುಗಳಲ್ಲಿ
ನಿತ್ಯೋತ್ಸವ, ತಾಯಿ, ನಿತ್ಯೋತ್ಸವ ನಿಮಗೆ"

(ನಿಸಾರ್ ಅಹಮದ್ ಕೆ.ಎಸ್. ೧೯೯೫, ಪುಟ-೨೩೧)

-ಜೋಗ ಜಲಪಾತದ ವಿದ್ಯುತ್ತಿನ ಬೆಳಕಿನಲ್ಲಿ, ತುಂಗಭದ್ರೆಯ ನೀರಿನಿಂದ ಸಮೃದ್ಧವಾಗಿ ಬೆಳೆದ ಪೈರಿನಲ್ಲಿ, ಸಹ್ಯಾದ್ರಿ ಪರ್ವತದಲ್ಲಿ ಶ್ರೇಷ್ಟವಾದ ಅದಿರನ್ನೇ ಪಡೆಯುವದರಿಂದ, ನಿತ್ಯ ಹರಿದ್ವರ್ಣದ ತೇಗ ಗಂಧದ ಮರ-ಗಿಡ-ಬಳ್ಳಿಗಳ ಚಿಗುರು-ಫಲ-ಪುಷ್ಪಗಳಲ್ಲಿ, ನಿತ್ಯವೂ ಕನ್ನಡ ತಾಯಿಗೆ ಉತ್ಸವ ನಡೆಯುತ್ತಿದೆ. ಗತಕಾಲದ ವೈಭವವನ್ನು ಸಾರಿ ಹೇಳುವ ಇತಿಹಾಸ, ಅರಸರ ಪರಂಪರೆ, ನಾಡಿಗಾಗಿ ಹೋರಾಟದ ಸಾಹಸವನ್ನು ತಿಳಿಸುವ ಶಾಸನ, ಓಲೆಗರಿಗಳಲ್ಲಿ, ದೇವಾಲಯಗಳ ವಾಸ್ತುಶಿಲ್ಪಗಳಲ್ಲಿ ಕನ್ನಡ ತಾಯಿಗೆ ನಿತ್ಯವೂ ಉತ್ಸವ ನಡೆಯುತ್ತಿದೆ. ಇಲ್ಲಿಯ ಜನ ಭಾವೈಕ್ಯತೆಯಿಂದ ಇದ್ದಾರೆ, ಉದಾರತೆ ನಿರ್ಮತ್ಸರವಾದ ಗುಣಸ್ವಭಾವಗಳನ್ನು ಹೊಂದಿದ್ದಾರೆ, ಈ ನಾಡು ವಿಶಾಲವಾದ ಪ್ರದೇಶವನ್ನು ಹೊಂದಿದೆ. ಕನ್ನಡ ನುಡಿಯು ಸದಾ ಬೆಳೆಯುತ್ತಿದೆ. ಹೀಗೆ ಹಲವಾರು ಮಹಿಮೆಗಳ ಮೂಲಕವೂ ಕನ್ನಡ ತಾಯಿಗೆ ನಿತ್ಯವೂ ಉತ್ಸವ ನಡೆಯುತ್ತಿದೆ.

ನವೋದಯದ ಪ್ರಮುಖರಾದ ಪಂಜೆಮಂಗೇಶರಾಯ, ಗೋವಿಂದ ಪೈ, ಬಿ.ಎಂ. ಶ್ರೀ.-ಮುಂತಾದವರಿಂದ ಹಿಡಿದು ನವೋದಯದ ರತ್ನತ್ರಯರಾದ ಬೇಂದ್ರೆ-ಕುವೆಂಪು-ಪುತಿನ-ರ ವರೆಗೆ ಮತ್ತು ಜಿ.ಎಸ್. ಶಿವರುದ್ರಪ್ಪ, ಚೆನ್ನವೀರ ಕಣವಿಯವರವರೆಗಿನ ನವೋದಯ ಕಾವ್ಯವು ಕನ್ನಡ ನಾಡು-

ನುಡಿಯ ಪ್ರೇಮ, ಅಭಿಮಾನ, ಕಾಳಜಿ, ಹಿತಾಸಕ್ತಿಯನ್ನು, ನಾಡಿನ ಏಳ್ಗೆ ಶ್ರೇಯೋಭಿವೃದ್ಧಿಯ ಅಭಿಲಾಷೆಯನ್ನು ಯಾವ ರೀತಿ ಇಟ್ಟುಕೊಂಡಿತ್ತೆಂಬುದನ್ನು ವಿವರಿಸಿ ಪ್ರಮುಖ ಹೆಗ್ಗುರುತುಗಳನ್ನು ತೋರಿಸಲಾಗಿದೆ. ಇಲ್ಲಿ ವಿವರಿಸಿದ –ವಿಶ್ಲೇಷಿಸಿದ ಕಾವ್ಯ ನವೋದಯ ಕವಿಗಳ ಉಜ್ವಲ ಕನ್ನಡ ನಾಡು–ನುಡಿಯ ಭಕ್ತಿ–ನಿಷ್ಠೆ– ಪ್ರೇಮಕ್ಕೆ ಉತ್ತಮ ನಿದರ್ಶನಗಳಾಗಿವೆ. ಭಾರತಾಂಬೆಯ ತನುಜಾತೆಯಾದ ಕನ್ನಡಾಂಬೆಯ ವರ್ಣನೆ ರಾಷ್ಟ್ರದ ಒಂದು ಮುಖವೆಂಬುದನ್ನು ಮರೆಯುವಂತಿಲ್ಲ.

ಕವಿ ದಿನಕರ ದೇಸಾಯಿಯವರ ಕವನದಲ್ಲಿ ನಾಡು ನುಡಿಯ ಬಗೆಗಿನ ಅಪ್ಪಟ ಅಭಿಮಾನವನ್ನು ಕನ್ನಡದ ಬಗೆಗಿನ ವಿಶೇಷ ಪ್ರೀತಿಯನ್ನು ಕಾಣಬಹುದಾಗಿದೆ. ಕವಿ ದಿನಕರ ದೇಸಾಯಿ ಉತ್ತರ ಕನ್ನಡದ ಪ್ರಕೃತಿ ಸೌಂದರ್ಯವನ್ನು ಮೆಚ್ಚಿ ಮನಬಿಚ್ಚಿ ಹಾಡಿದ್ದಾರೆ. ಉತ್ತರ ಕನ್ನಡದ ಜಿಲ್ಲೆಯ ತೆಂಗಿನ ತೋಟದ ಮಂಟಪ ಅಡಿಕೆ ಗೊನೆಯ ಬಾಸಿಂಗ, ಯಾಲಕ್ಕಿಯ ಮಾಲೆ, ಮೆಣಸಿನ ಕಾಳಿನ ಮಂಗಳಸೂತ್ರ, ಬಾಳಿ ಮತ್ತು ತಾಳಿ ಸೋಗೆಯ ಕೊಡೆ ಇವೆಲ್ಲವೂ ಕವಿಗೆ ನಿಸರ್ಗವೆ ಸ್ವರ್ಗವಾದ ಅನುಭೂತಿಯನ್ನುಂಟು ಮಾಡಿವೆ. ಅದಕ್ಕಾಗಿ ಕವಿ–

"ಹುಟ್ಟುವುದಾದರೆ
ಇನ್ನೂ ಇನ್ನೂ
ಉತ್ತರ ಕನ್ನಡ
ದಲ್ಲೆ ಅನ್ನು,"

(ದಿನಕರ ದೇಸಾಯಿ, ೧೯೫೦, ಪುಟ–೬೭)

ಎಂದು ಹೇಳುತ್ತಾನೆ. ಮಹಾಕವಿ ಪಂಪ ಬನವಾಸಿ ನಾಡಿನಲ್ಲಿ ಕೋಗಿಲೆಯಾಗಿ ಮರಿದುಂಬಿಯಾಗಿ ಹುಟ್ಟಲು ಬಯಸಿದಂತೆ ಈ ಕವಿಗೂ ಉತ್ತರ ಕನ್ನಡದಲ್ಲಿಯೇ ಹುಟ್ಟುವ ಆಸೆ ಗಾಢವಾಗಿದೆ. ಉತ್ತರ ಕನ್ನಡ ಜಿಲ್ಲೆಯನ್ನು ಕುರಿತು 'ದಿನಕರನ ಚೌಪದಿ'ಯಲ್ಲಿ– ಉತ್ತರ ಕನ್ನಡದ ಬಗೆಗಿನ ಪ್ರೀತಿ ವ್ಯಕ್ತಗೊಂಡಿದೆ.

'ಉತ್ತರ ಕನ್ನಡದ ಕಚ್ಚೆ' ಎಂಬ ಕವನದಲ್ಲಿ ಉತ್ತರ ಕನ್ನಡದ ಬುಡಕಟ್ಟು ನಿವಾಸಿಗಳಾದ ಹಾಲಕ್ಕಿ ಒಕ್ಕಲಿಗರು, ಕೆಲವು ಕಡೆ ಬ್ರಾಹ್ಮಣರು, ಇತರ ಶೂದ್ರರು ಉಡುವ ಕಚ್ಚೆಯನ್ನು ಕುರಿತು ಕವನ ರಚಿಸಿದ್ದಾರೆ.

"ಯಾರವ್ವನ ಯಾರಪ್ಪನ ಇಚ್ಛೆ
ಉತ್ತರ ಕನ್ನಡ ಜಿಲ್ಲೆಗೆ ಕಚ್ಚೆ
ಕಚ್ಚೆಗೂ ನಮಗೂ ಜೀವದ ದೋಸ್ತಿ
ಕಚ್ಚೆ– ರುಮಾಲೇ ಜೀವನದಾಸ್ತಿ
......................................
ಸ್ವರ್ಗವನೇರಲಿ ಬಡವರ ಚಿಂದಿ

ನೋಡಲಿ ಇಂದ್ರನ ಲೋಕದ ಮಂದಿ
ಯಾರವ್ವನ ಯಾರಪ್ಪನ ಹಂಗು?
ಕಾಸಿದ ಕಬ್ಬಿಣಕೆಲ್ಲಿಯ ಜಂಗು?"
(ದಿನಕರ ದೇಸಾಯಿ, ೧೯೫೦, ಪುಟ-೧೨೫)

ಈ ಬಡಬಗ್ಗರ ಚಿಂದಿಗೆ ಸ್ವರ್ಗವನ್ನೇರುವ ಅವಕಾಶವಿದೆ. ಈ ಜನ ಒಕ್ಕಟ್ಟಾಗಿ ದಾರಿದ್ರ್ಯದ ವಿರುದ್ಧ ಸಮರಸಾರಬೇಕು ಎನ್ನುವ ಕವಿ ಯಾರ ಹಂಗಿಗೂ ಒಳಗಾಗಬೇಕಾದ ಅವಶ್ಯಕತೆಯಿಲ್ಲ, ಎನ್ನುತ್ತಾನೆ. ಕಾಸಿದ ಕಬ್ಬಿಣಕ್ಕೆ ಜಂಗು (ತುಕ್ಕು) ಬರುವುದಿಲ್ಲ. ಅದೇ ರೀತಿ ಕಷ್ಟಗಳ ಕುಲುಮೆಯಲ್ಲಿ ಬೆಂದ ಈ ಜನಕ್ಕೆ ತುಕ್ಕು ಹಿಡಿಯುವ ಪ್ರಮೇಯವೇ ಇಲ್ಲ. ಇವರು ಹೋರಾಟ ಮಾಡಿ ತಮ್ಮ ಪ್ರಗತಿ ಸಾಧಿಸಬೇಕು ಎಂದಿದ್ದಾರೆ.

ಉತ್ತರ ಕನ್ನಡ ಜಿಲ್ಲೆ ನಿಸರ್ಗ ಸೌಂದರ್ಯದ ನೆಲೆ ಬೀಡಲಾಗಿದೆ. ಶ್ರೀಮಂತವಾದ ನಿಸರ್ಗದ ಮಡಿಲಲ್ಲಿ ಬದುಕುವ ಜನರು ಮಾತ್ರ ಬಡವರು. ಕಾರವಾರಕ್ಕೆ ಬಂದ ಮಂತ್ರಿಯೊಬ್ಬರು ಉತ್ತರ ಕನ್ನಡಿಗರಿಗೆ ನೀಡಿದ ಸಲಹೆಯ ವಿಡಂಬನೆ ಹೀಗಿದೆ.

"ಕಾರವಾರಕೆ ಬಂದು
ಕಡಲ ತೀರದಿ ನಿಂದು
ಸುರಲೋಕವೇ ಭೂಮಿಗಿಳಿಯಿತೆಂದು
ಮುಖ್ಯಮಂತ್ರಿಯು ಸಾರಿ
ಹೊಡೆಸಿದನು ಜಯಭೇರಿ
ಸೌಂದರ್ಯವನೆ ತಿಂದು ಬಾಳಿರೆಂದು"
(ದಿನಕರ ದೇಸಾಯಿ, ೧೯೫೦, ಪುಟ-೧೨೫)

ಸೌಂದರ್ಯವನ್ನೇ ತಿಂದು ಬಾಳಿರೆಂದು ಮುಖ್ಯಮಂತ್ರಿ ಜಯಭೇರಿ ಹೊಡೆಸುವ ವ್ಯಂಗ ಉತ್ತರ ಕನ್ನಡದ ಸಂದರ್ಭದಲ್ಲಿ ತಿರ ಪ್ರಸ್ತುತವಾಗಿದೆ. ಸಹ್ಯಾದ್ರಿ ಪರ್ವತಕ್ಕೂ ಅರಬಿ ಸಮುದ್ರಕ್ಕೂ ಮಧ್ಯದಲ್ಲಿರುವ ದಕ್ಷಿಣೋತ್ತರ ಕನ್ನಡ ಜಿಲ್ಲೆಯನ್ನು ಕನ್ನಡ ನಾಡಿನ ಕೊಂಕಣವೆಂದು ಕರೆಯಲಾಗುತ್ತದೆ. ಇದರ ಬಗ್ಗೆ ದಿನಕರ ದೇಸಾಯಿ ಕವನ ರಚಿಸಿದ್ದಾರೆ.

"ಸಗ್ಗದಿಂದ ಸೊಗದಿ ದೇವಿ ತಿರೆಗೆ ಬಂದಳೋ?
ಹಾರಿ ಹರವ ಝರಿಯ ನೀರು
ತುಂಗ ತೆಂಗು ಕೌಂಗು ಗೇರು
ಬಿಸಿಲೊಳೆಸೆವ ಭತ್ತ ಪೈರು
ಬೆಳೆದ ಕಬ್ಬು ಮೂರು ಮೂರು
ಸೊಗದ ಸಾರು ನಮ್ಮ ನಾಡು
ಸುಖದ ಲತೆಯ ತಾಯಿ ಬೇರು"
(ದಿನಕರ ದೇಸಾಯಿ, ೧೯೫೦, ಪುಟ-೧೧೭)

ಸ್ವರ್ಗದ ದೇವಿ ಭುವಿಗೆ ಬಂದು ಕೊಂಕಣದ ಸೌಂದರ್ಯವನ್ನು ಕಂಡು ಅಲ್ಲಿ ನಿಂದಳೇನೋ ಎಂದು ಕವಿ ಶಂಕಿಸುತ್ತಾನೆ. ಪಂಜೆ ಮಂಗೇಶರಾಯರ 'ಎಲ್ಲಿ ಭೂರಮೆ ದೇವ ಸನ್ನಿಧಿ ಬಯಸಿ ಬಿಮ್ಮನೆ ಬಂದಳೋ' ಎಂಬ ಹಾಡಿನ ದಾಟಿಯಲ್ಲಿ ಕವನ ರಚನೆ ಗೊಂಡಿದೆ. ಕೊಂಕಣದ ನದಿ, ಬೆಳೆ ಹಾಗೂ ಪರಿಸರವನ್ನು ವರ್ಣಿಸಿದ್ದಾರೆ.

"ಕಡಲ ಕನ್ನಡ'ವನ್ನು ಕವಿ ವರ್ಣಿಸುವ ಪರಿ ಸೊಗಸಾಗಿವೆ.
ಮನವು ನಲಿದಾಡಲಿಕೆ ಕಡಲು ಕುಣಿದಾಡುವುದು
ಹಸಿರೆ ಉಸಿರಾಡುವುದು ಎಲ್ಲ ಕಡೆಗೆ
ಗಗನವನೆ ಮುತ್ತಿಡುವ ಉತ್ತುಂಗ ಶಿಖರವೇ
ಕಳಸವಲ್ಲವೆ ನಮ್ಮ ಬಾಳಗುಡಿಗೆ"

(ದಿನಕರ ದೇಸಾಯಿ, ೧೯೫೦, ಪುಟ-೧೦೩)

ನಮ್ಮ ನೆರೆಯ ನಾಡಾದ 'ಗೋವೆಯ ವಿಮೋಚನೆ' ಕುರಿತು ಹಾರೈಕೆ ಉಲ್ಲೇಖನಾರ್ಹ.

"ಗೋಮಂತಕದ ತಾಯಿ ಹೇಮಂತದಲಿ ತೊಟ್ಟ
ಮುಕ್ತಿ ಪಿತಾಂಬರದ ಶುಭ್ರ ಬಣ್ಣ
ಕೊನೆಯವರೆಗೂ ಕಡಲ ನೊರೆಯಾಗಿ ಉಕ್ಕೇರಿ
ಸ್ವಾತಂತ್ರ್ಯ ಲಹರಿಗಳ ಕುಣಿಸಲಣ್ಣ"

(ದಿನಕರ ದೇಸಾಯಿ, ೧೯೫೦, ಪುಟ-೨೦)

ಗೋವೆ ಕೊನೆಯವರೆಗೂ ಸ್ವಾತಂತ್ರ್ಯ ಲಹರಿಯನ್ನು ಕಡಲ ನೊರೆಯಂತೆ ಕುಣಿಸಲಿ ಎಂಬ ಆಶಯ ಈ ಕವನದಲ್ಲಿದೆ. ಕನ್ನಡ ನಾಡನ್ನು ಕುರಿತ ಕವಿಯ ಅಭಿಮಾನ ಪ್ರೀತಿ ಇಲ್ಲಿ ಹಲವು ಕವನಗಳಲ್ಲಿ ಅಭಿವ್ಯಕ್ತಗೊಂಡಿದೆ. "ಕನ್ನಡ ತಾಯಿ" ಎಂಬ ಕವನದಲ್ಲಿ ಕರ್ನಾಟಕದ ಭೌಗೋಳಿಕ ಪರಿಸರವನ್ನು ಸಂಸ್ಕೃತಿಯ ಹಿರಿಮೆಯನ್ನು ಸಾರಿ ಹೇಳುವ ಪರಿ ಸೋಗಸಾಗಿದೆ.

"ಮೂರು ಮುನ್ನಿರುಗಳ ನೀಲ ಜಲ ಮಧ್ಯದಲಿ
ಮೂರು ಸಾವಿರ ವರ್ಷದಾಚೆ ಜನಿಸಿ
ಕೋಟಿ ಮಕ್ಕಳ ಹೆತ್ತ ಮದುಕಿಯಾದರು ತಾಯಿ
ತರುಣಿಯೊಳು ನೀನಿರುವೆ ಚೆಲುವ ಸೂಸಿ"

(ದಿನಕರ ದೇಸಾಯಿ, ೧೯೫೦, ಪುಟ-೧೧೦)

ಕನ್ನಡದ ತಾಯಿ ಕೋಟಿ ಮಕ್ಕಳ ಹೆತ್ತು ಮುದುಕಿಯಾದರೂ ಆಕೆ ನಿತ್ಯ ಯುವತಿ ಎಂಬ ಸತ್ಯವನ್ನು ಕವಿ ಹೇಳಿದ್ದಾರೆ. ಕರ್ನಾಟಕಾಂಬೆಯ ಹೆಸರು' ಎಂಬ ಕವನದಲ್ಲಿ

"ಚಂದನದ ನಿನ್ನ ಗುಡಿ
ಸಹ್ಯಾದ್ರಿ ನಿನ್ನ ಮುಡಿ
ಕನ್ನಡದ ವಚನವೇ ನಿನ್ನ ಬಾಯಿ"

(ದಿನಕರ ದೇಸಾಯಿ, ೧೯೫೦, ಪುಟ-೧೦೪)

ಎಂದು ಕನ್ನಡ ನಾಡಿನ ಪ್ರಕೃತಿ ಸೌಂದರ್ಯವನ್ನು ವರ್ಣಿಸುತ್ತಾ ಕನ್ನಡದ ನುಡಿಯೆ ಕರ್ನಾಟಕದ ಬಾಯಿ ಎಂದು ಕವಿ ಹೇಳುತ್ತಾನೆ.

"ಏಕೀಕೃತ ಕರ್ನಾಟಕ" ಎಂಬ ಕವನದಲ್ಲಿ ಕರ್ನಾಟಕ ಏಕೀಕರಣಕ್ಕೆ ಕನ್ನಡಿಗರೆಲ್ಲ ಒಗ್ಗಟ್ಟಾಗಬೇಕಾದ ಅವಶ್ಯಕತೆಯನ್ನು ಕವಿ ಸಾರಿ ಹೇಳುತ್ತಾನೆ. ಭವ್ಯವಾಗಿರುವ ಕನ್ನಡ ನಾಡು ಬರಿಯ ಬಣ್ಣಗಳ ನಕ್ಷೆಯಲ್ಲ. ಜನ ಏಕೀಕರಣದ ಸಲುವಾಗಿ ಒಟ್ಟಾಗಬೇಕು ಎಂಬುದನ್ನು ಗುಡಿಯ ಕಟ್ಟಲು ಕಲ್ಲುಗಳೆಲ್ಲ ಒಟ್ಟಾಗುವ ದೃಷ್ಟಾಂತದ ಮೂಲಕ ಕವಿ ಬಿಂಬಿಸಿದ್ದಾರೆ.

"ಕರಿಯ ಕಲ್ಲುಗಳು ಕೂಡ ಕೂಡಿದವು
ಗುಡಿಯ ಕಳಸಕಾಗಿ
ನರನ ಹೃದಯಗಳು ಒಂದುಗೂಡವೆ
ಮಾತೃ ಭೂಮಿಗಾಗಿ"
(ದಿನಕರ ದೇಸಾಯಿ, ೧೯೫೦, ಪುಟ-೧೦೫)

ಎಂದು ಕವಿ ಪ್ರಶ್ನಿಸುವುದು ಸಹಜವಾಗಿದೆ. ನಿರ್ಜೀವವಾದ ಕಲ್ಲು ಗುಡಿ ಕಟ್ಟುವಾಗ ಒಟ್ಟಾಗುತ್ತವೆ, ಒಂದಾಗುತ್ತವೆ. ಹಾಗೆ ಕನ್ನಡಿಗರೆಲ್ಲರ ಹೃದಯ ಒಂದಾಗಬೇಕು ಎಂಬುದು ಕವಿಯ ವಿಚಾರವಾಗಿದೆ.

'ಕರ್ನಾಟಕದ ರಾಜ್ಯದ ನಕಾಶೆಯನ್ನು ಕುರಿತು ಕವಿ ಅಲ್ಲಿ ಹತ್ತು ಬಣ್ಣ ಬೇಡ, ಕನ್ನಡನಾಡು ಚಿಂದಿ ಚಿಂದಿಯಾಗಿ ಹೋಗುವುದನ್ನು ಕವಿ ಕಲ್ಪಿಸಿಕೊಳ್ಳಲಾರ. ಕವಿಯ ಆಸೆ ಸೂಕ್ತವಾದದು.

"ನನಗೆ ಒಂದೇ ಆಶೆ
ಇರಲಿ ಶುಭ್ರ ನಕಾಶೆ
ಹತ್ತು ಬಣ್ಣಗಳೇಕೆ
ಕನ್ನಡಿಗನೇ ಜೋಕೆ"
(ದಿನಕರ ದೇಸಾಯಿ, ೧೯೫೦, ಪುಟ-೧೦೭)

ಕರ್ನಾಟಕದ ಸಾಂಸ್ಕೃತಿಕ ರಾಜಧಾನಿಯಾದ ಮೈಸೂರನ್ನು ಕುರಿತು ಕವಿ ಬಣ್ಣಿಸಿದ ಪದ್ಯ ಹೃದ್ಯವಾಗಿದೆ.

ಗಂಧದ ಮರದಡಿ
ಕಂದರು ಕುಣಿಯುವ
ಅಂದದ ಧರೆಯಿದು ಮೈಸೂರು
ಕುಂದದೆ ಬೆಳಕಿನ
ಚಂದಿರ ಮೂಡಲು
ಮುಂದಕೆ ನಡೆವುದು ಮೈಸೂರು-
(ದಿನಕರ ದೇಸಾಯಿ, ೧೯೫೦, ಪುಟ-೧೦೦)

ಎಂದು ಗಂಧದ ನಾಡು, ಬೆಳಕಿನ ಹೊನಲು ಸೂಸುವ ಅಂದದ ಧರೆಯಿದು ಎಂದು ಮೈಸೂರಿನ ಹಿರಿಮೆಯನ್ನು ವರ್ಣಿಸಿದ್ದಾರೆ.

ಕನ್ನಡದ ಜನವೊಂದು
ಕನ್ನಡದ ಮನವೊಂದು
ಕನ್ನಡದ ವನವೊಂದು
ಬಂದಾಯ್ತು ಒಂದು
ನಾಡೆಲ್ಲ ಗೂಡೆಲ್ಲ ಹಾಡೆಲ್ಲ ಒಂದು
(ದಿನಕರ ದೇಸಾಯಿ, ೧೯೫೦, ಪುಟ–೧೦೦)

ಕನ್ನಡದ ಜನರೆಲ್ಲ ಒಂದಾಗುವ ಮನಸ್ಸಿದೆ. ಕನ್ನಡವರೆಲ್ಲ ಒಂದಾಗಿವನದಂತೆ ಒಕ್ಕಟ್ಟಿರಬೇಕು ನಾಡಿನ ಜನತೆಗೆ ತಮ್ಮ ಹಾಡಿನಲ್ಲಿ ಕನ್ನಡಿಗರ ಒಕ್ಕಟ್ಟನ್ನು ಸಾಧಿಸಿದ್ದಾರೆ

'ವೀರ ಮೈಸೂರು' ಎಂಬ ಕವನ ತನ್ನ ಸಾಹಸ ಶೌರ್ಯದಿಂದ ಅಜರಾಮರನಾದ ಸುಲ್ತಾನನಸಾಹಸ ಕಥನವನ್ನೊಳಗೊಂಡಿದೆ. ಟಿಪ್ಪು ಸುಲ್ತಾನನ ದೇಹವೇ ಯುದ್ಧದ ಆಯುಧವಾದ ಚಿತ್ರಣವನ್ನು ಕವಿ ವರ್ಣಿಸುವ ರೀತಿ ರೋಮಾಂಚನಗೊಳ್ಳುವಂತಿದೆ.

"ಯುದ್ಧ ರಥವದು ಗಿಡ್ಡಕಾಲು
ನಿನ್ನ ಕೈಯೇ ಇರಿವ ಕೋಲು
ಕೆಚ್ಚಿನಾ ಎದೆ ದೊಡ್ಡ ಹಾಲು"
(ದಿನಕರ ದೇಸಾಯಿ, ೧೯೫೦, ಪುಟ–೭೬)

'ವೀರಗಲ್ಲು' ಎಂಬ ಕವನ ನಾಡಿಗಾಗಿ ಹೋರಾಡಿದ ಕವಿಯ ಸ್ಮಾರಕವಾಗಿ ವೀರಗಲ್ಲನ್ನು ನಿರ್ಲಕ್ಷಿಸಿದ ಬಗೆಯನ್ನು ಅದರ ವಿವರಗಳನ್ನು ನೀಡುತ್ತದೆ. ಕವಿ ಇದು ಕನ್ನಡದ ಕುಲಕ್ಕೆ ಹೆಮ್ಮೆ ಪಡುವ ಸಂಗತಿ ಎಂದು ಹೇಳುತ್ತಾನೆ.

ದೇಶಪ್ರೇಮ ಮತ್ತು ಭಾಷಾ ಪ್ರೇಮಗಳು ನಮ್ಮ ದೇಶದಲ್ಲಿ ಇಂದು ಅತ್ಯಂತ ಗೊಂದಲಕ್ಕೆ ಒಳಗಾಗಿವೆ. ಪ್ರಾಂತ್ಯಗಳು ಮತ್ತು ಪ್ರಾಂತ್ಯ ಭಾಷೆಗಳ ಮೇಲಿನ ಪ್ರೇಮ ಭಾರತೀಯ ಏಕತೆಯ ಕಂಟಕ ಎಂದು ಕೆಲವರು ಕೂಗೆಬ್ಬಿಸುತ್ತಿದ್ದಾರೆ. ಆದರೆ ಜನರು ತಮ್ಮ ಭಾಷೆಯನ್ನು ಮಿಕ್ಕವರ ಮೇಲೆ ಹೇರಿ ಇಡೀ ಭಾರತವನ್ನು ತಮ್ಮದಾಗಿಸಿಕೊಳ್ಳಲು ತೆರೆಮರೆಯಲ್ಲಿ ಪ್ರಯತ್ನಿಸುತ್ತಿದ್ದಾರೆ. ಶ್ರೀ ಕುವೆಂಪು ಅವರು ಸ್ವಾತಂತ್ರ್ಯ ಪೂರ್ವದಲ್ಲಿಯೇ ಈ ಸಮಸ್ಯೆಯನ್ನು ಎತ್ತಿಕೊಂಡು ಸರ್ವ ಸಮ್ಮತವಾದ ತೀರ್ಪಿತ್ತಿದ್ದಾರೆ:

ಭಾರತ ಬದುಕಲು ಕರ್ನಾಟಕ ಬದುಕಬೇಕು. ಕರ್ನಾಟಕ ಉಳಿಯಲು ಭಾರತ ಶಕ್ತಿಯುತವಾಗಿರಬೇಕು. ಆದರೆ ನಮ್ಮಲ್ಲಿ ಏನಾಗಿದೆ. ತಮ್ಮ ಜೀವನ ಯಾಪನೆಗಾಗಿ ಬೇರೆ ಬೇರೆ ದೇಶಗಳಿಂದ ಕರ್ನಾಟಕಕ್ಕೆ ಬಂದ ಜನರು ಕನ್ನಡ ಭಾಷೆ ಮತ್ತು ಸಂಸ್ಕೃತಿಗೆ ಹೊಂದಿಕೊಳ್ಳುವ ಬದಲು

ಅದನ್ನು ತಿರಸ್ಕರಿಸುತ್ತಾ ವಿರೋಧಿಸುತ್ತಾ ಬಂದಿದ್ದಾರೆ. ನೂರಾರು ವರ್ಷಗಳ ಹಿಂದೆ ಈ ದೇಶಕ್ಕೆ ಬಂದವರು ಈಗಿನ ಜನಗಣನೆಯಲ್ಲಿ ತಮ್ಮ ಮಾತೃಭಾಷೆ ಕನ್ನಡ ಎಂದು ಕೊಡುವುದಿಲ್ಲ. ಹೀಗಾಗಿ ಕರ್ನಾಟಕದಲ್ಲಿ ಅನ್ಯಭಾಷಿಗಳು ಶೇಕಡ ನಲವತ್ತೈದು ಎಂದು ಇತ್ತೀಚಿನ ವರದಿಯೊಂದು ತಿಳಿಸುತ್ತದೆ. ಈ ಅಪಾಯವನ್ನು ಕುವೆಂಪು ನಲವತ್ತು ವರ್ಷಗಳ ಹಿಂದೆಯೇ ಕಂಡು ಹೇಳಿದರು.

ಸಾಯುತಿದೆ ನಿಮ್ಮ ನುಡಿ ಓ ಕನ್ನಡದ ಕಂದರಿರ
ಹೊರನುಡಿಯ ಹೊರೆಯಿಂದ ಕುಸಿದು ಕುಗ್ಗಿ!
ರಾಜ ನುಡಿಯೆಂದೊಂದು, ರಾಷ್ಟ್ರನುಡಿಯೆಂದೊಂದು
ದೇವನುಡಿಯೆಂದು ಹತ್ತಿ ಜಗ್ಗಿ
ನಿರಿನಿಟಿಲು ನಿಟಿಲೆಂದು ಮುದಿ ಮೂಳೆ ಮುರಿಯುತಿದೆ
ಕನ್ನಡಮ್ಮನ ಬೆನ್ನು ಬಳುಕಿಬಗ್ಗಿ
(ಅರವಿಂದ ಮಾಲಗಿತ್ತಿ (ಸಂ); ೧೯೯೯, ಪುಟ-೯೯)

ಈ ಮಾತನ್ನು ಕುವೆಂಪು ೧೯೩೫ ರಲ್ಲಿ ಹೇಳಿದರು. ೧೯೮೦-೮೨ ರಲ್ಲಿ ಸಂಸ್ಕೃತವಿವಾದ ಮತ್ತು ಗೋಕಾಕ್ ವರದಿಯ ಹಿನ್ನೆಲೆಯಲ್ಲಿ ಈ ಮಾತುಗಳನ್ನು ಗಮನಿಸಿದಾಗ ಕವಿಯ ಭವಿಷ್ಯ ವಾಣಿಯು ನಿಜವಾಗಿರುವುದನ್ನು ಕಾಣುತ್ತೇವೆ. ಸಂಸ್ಕೃತವನ್ನು ಆಡು ಭಾಷೆಯಾಗಿ ಬಳಸುವ ಅದನ್ನು ಮಾತೃಭಾಷೆ ಎಂದು ಸಾರುವ ಮೂರ್ಖತನಕ್ಕೂ ಈ ಜನ ಹೋದರು ಎಂಬುದನ್ನು ಮರೆಯುವಂತಿಲ್ಲ. ಕವಿ ಈ ಯಾವ ಅತಿರೇಕಕ್ಕೂ ಹೋಗುವದಿಲ್ಲ. ಏಕಾಗಿ ಮಾತೃಭಾಷೆ ಅತ್ಯವಶ್ಯಕ?

ನಿಮ್ಮ ನುಡಿ ನಮ್ಮ ಗಂಡಸುತನಕೆ ಹಿರಿಸಾಕ್ಷಿ
ಗೆಲವಿದ್ದರದಕೆ ನಿಮಗಿಹುದುಶಕ್ತಿ
ನುಡಿಮಡಿದರೆಲ್ಲರೂ ಮೂಕ ಜಂತುಗಳಂತೆ
ಬಾಲವನ್ನಾಡಿಪುದೆ ಪರಮಭಕ್ತಿ
(ಅರವಿಂದ ಮಾಲಗಿತ್ತಿ (ಸಂ); ೧೯೯೯, ಪುಟ-೧೦೦)

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದು ಮಾತೃಭಾಷೆಯ ಶಕ್ತಿಯನ್ನು ಕವಿ ಕರ್ನಾಟಕ ಭಾರತೀಯ ತನುಜಾತೆ ಮಗಳು ಎಂದು ಹೇಳಿದ್ದಾರೆ. ಮಗಳು ಶಕ್ತಿ ಶಾಲಿಯಾದಷ್ಟೂ ತಾಯಿ ಶಕ್ತಿಶಾಲಿಯಾಗುತ್ತಾಳೆ. ಮಗಳು ಕ್ಷೀಣಿಸಿದರೆ ತಾಯಿಗೆ ಭಾರವಾಗಿ ಕುಸಿಯುತ್ತಾಳೆ.

ಎಲ್ಲಾದರು ಇರು: ಎಂತಾದರು ಇರು:
ಎಂದೆಂದಿಗೂ ನೀ ಕನ್ನಡವಾಗಿರು
ಎಂದೆಂದಿಗೂ ತಾನ್
ಕನ್ನಡವೇ ಸತ್ಯ!
ಕನ್ನಡವೇ ನಿತ್ಯ !
ಅನ್ಯವೆನಲದೆ ಮಿಥ್ಯಾ !
(ಅರವಿಂದ ಮಾಲಗಿತ್ತಿ (ಸಂ); ೧೯೯೯, ಪುಟ-೨೮೫)

ಎಂಬ ಮಾತನ್ನು ಹೇಳಿರುವುದು ಅತ್ಯಂತ ಔಚಿತ್ಯ ಪೂರ್ಣವಾಗಿದೆ. ಪ್ರಜಾಪ್ರಭುತ್ವದ ಹಿರಿಮೆಯನ್ನು ಸರ್ವರಿಗೆ ಸಮಬಾಳು ಸರ್ವರಿಗೆ ಸಮಪಾಲು ಎಂಬ ವಿಶಾಲ ಹೃದಯವಂತಿಕೆಯ ವ್ಯಕ್ತಿಮಾತ್ರ ಹೇಳಬಲ್ಲಂಥವು. ದೇಹದ ಉಳಿವಿಗೆ ಎಲ್ಲ ಅಂಗಗಳ ಸ್ವಾತಂತ್ರ ಉಳಿವು ಬೆಳವಣಿಗೆ ಹೇಗೆ ಮುಖ್ಯವೋ ಹಾಗೆ ಭಾರತದ ಉಳಿವಿಗೆ ಪ್ರಾಂತೀಯ ಭಾಷೆ ಮತ್ತು ಸಂಸ್ಕೃತಿಗಳ ಉಳಿವು ಬೆಳವಣಿಗೆ ಅತ್ಯಗತ್ಯ ಎಂಬುದನ್ನು ಕವಿ ಸಮರ್ಥಿಸಿದ್ದಾರೆ.

# ಅಧ್ಯಾಯ–೬

## ಸಮಾರೋಪ

ನವೋದಯ ಕಾವ್ಯಗಳಲ್ಲಿ ದೇಶಭಕ್ತಿ, ಸ್ವಾತಂತ್ರ್ಯ, ರಾಷ್ಟ್ರೀಯತೆ ನಾಡುನುಡಿಗೆ ಸಂಬಂಧಿಸಿದಂತೆ ಮೂಡಿಬಂದ ಕಾವ್ಯಗಳನ್ನು ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಅವುಗಳು ಕೇವಲ ಕಾಲ್ಪನಿಕವಾಗಿರದೆ ಕವಿಗಳು ಅಂದಿನ ವಾಸ್ತವದ ಸಂದರ್ಭವನ್ನು ಅರಿತು ನೋಡಿ ಅನುಭವಿಸಿದ ಕಾವ್ಯಗಳಾಗಿವೆ.

ಕನ್ನಡದ ಹಿರಿಯ ಕವಿಗಳಾದ ಆನಂದಕಂದ, ಕುವೆಂಪು, ಶ್ರೀನಿವಾಸ, ಅಂಬಿಕಾತನಯದತ್ತ ಕನ್ನಡದ ಹೊಸ ಶಕ್ತಿಗೆ ಮೂರ್ತರೂಪ ಕೊಟ್ಟಿದ್ದಾರೆ. ರಾಷ್ಟ್ರಪ್ರೇಮದ ಕವನಗಳು ಅಚ್ಚಗನ್ನಡದ ಒಳ್ನುಡಿಯಲ್ಲಿ ಕರ್ನಾಟಕಕ್ಕೆ ಸ್ಫೂರ್ತಿ ಕೊಡಲು ಕಾರಣವಾದವು. ಕುವೆಂಪು 'ಪಾಂಚಜನ್ಯ'ದಲ್ಲಿ ವಿಶಾಲಭಾರತದ ಕ್ರಾಂತಿ ಶಂಖವನ್ನೂದಿರುವುದು 'ಗಂಡುಗೊಡಲಿ'ಯಲ್ಲಿ ರಾಜರತ್ನಂ ಅವರು ಪರಶುರಾಮ ಕಥೆಯ ರೂಪದಲ್ಲಿ ಕ್ರಾಂತಿಕುಠಾರವನ್ನು ಮಸೆದಿರುವರು. ಕಾಲಮಾನದ ಘೋರಚಿತ್ರವು ಕವಿಹೃದಯವನ್ನು ಬಲವಾಗಿ ತಲುಪಿದೆ ಎಂಬುದು ಸತ್ಯ. ಬೇಂದ್ರೆ ತಮ್ಮ 'ನರಬಲಿ' 'ಮೂವತ್ತುಮೂರು ಕೋಟಿ' 'ತುತ್ತಿನ ಚೀಲ' ಕಾವ್ಯಗಳಲ್ಲಿ ಭೈರವ ಲೀಲೆಯನ್ನು ವರ್ಣಿಸಿದ್ದಾರೆ. ರಾಷ್ಟ್ರೀಯ ಜಾಗೃತಿಗೆ ಪ್ರಚೋದಕವಾಗುವ ಹಲವಾರು ಕಾವ್ಯಗಳು ಈ ಘಟ್ಟದಲ್ಲಿ ಮೂಡಿ ಬಂದಿವೆ. ವೀ.ಸಿ.ಯವರು ತಮ್ಮ ಕವನ ಸಂಗ್ರಹಗಳಲ್ಲಿ ರಾಷ್ಟ್ರೋದ್ಧಾರ ವಿಷಯವಾದ ತಮ್ಮ ಕಳಕಳಿಯನ್ನು ಸತ್ವಯುತವಾಗಿ ವ್ಯಕ್ತಗೊಳಿಸಿರುವರು. ಸಾಲಿರಾಮಚಂದ್ರರಾಯರು ತಮ್ಮ ಕುಸುಮಾಂಜಲಿಯಲ್ಲಿ 'ಆವಿನದುನೊರೆ ಹಾಲನೊಲ್ಲೆನು' ಇತ್ಯಾದಿಯಾದ 'ಹಂಬಲಿ'ನಲ್ಲಿ ತಮ್ಮ ದೇಶ ಪ್ರೇಮವನ್ನು ಎಳಗೂಸಿಗೂ ತಿಳಿಯುವಂತೆ ಹೊರ ಸೂಸಿರುವರು.

ಕಟ್ಟಾ ದೇಶಾಭಿಮಾನಿ ಕವಿಗಳು ಕೇವಲ ಕವಿತೆಗಳನ್ನು ಬರೆದದ್ದು ಮಾತ್ರವಲ್ಲದೆ ಸ್ವಲ್ಪಮಟ್ಟಿಗೆ ಸ್ವಾತಂತ್ರ್ಯ ಸಮರದ ಪ್ರತ್ಯಕ್ಷ ಅನುಭವವನ್ನೆ ಪಡೆದರು. ಬೇಂದ್ರೆಯವರಂತೂ "ಬಲಗಾಲ್ ಬುಡದಿಂ ಬಿಡುಗಡೆ ಬಿಡಿಸಲು ನರಬಲಿಯೇ ಬೇಕು" ಎಂದು ಆಹ್ವಾನ ನೀಡಿದ 'ನರಬಲಿ' ಕವಿತೆಯಲ್ಲಿಯ ತೀಕ್ಷ್ಣವಿವೇಚನೆಯ ಕಾರಣದಿಂದ ಸೆರಮನೆಯನ್ನೆ ಕಂಡು ಬಂದವರು. ಪಂಜೆ ಮಂಗೇಶರಾಯ, ಕಡೆಂಗೋಡ್ಲು ಶಂಕರಭಟ್ಟ ಇನ್ನೂ ಮುಂತಾದ ಕವಿಗಳು ರಾಷ್ಟ್ರೀಯ ಜಾಗೃತಿಯ ಅಭಿಯಾನಕ್ಕೆ ದನಿಗೂಡಿಸಿದವರು. ಕೆಲವರದು ಸಿಂಹಗರ್ಜನೆಯಾದರೆ ಮತ್ತೆ ಹಲವರದು ಸೌಮ್ಯ ಸ್ವರೂಪದ ಪ್ರತಿಭಟನೆಯಾಗಿತ್ತು. ಎಲ್ಲ ಹಿರಿಯ ಪ್ರಾತಿನಿಧಿಕ ಕವಿಗಳ ಕಾವ್ಯಗಳು ನಮ್ಮ ದೇಶದ ಸ್ವಾತಂತ್ರ್ಯ

ಸಮರದಲ್ಲಿ ಭಾವನಾತ್ಮಕವಾಗಿ ಸ್ವಯಂ ಪ್ರೇರಣೆಯಿಂದ ಸಹಭಾಗಿಯಾಗಿ ಜನಮಾನಸವನ್ನು ಸಜ್ಜುಗೊಳಿಸಿ ಜಾಗೃತ ವಾಣಿಗಳ ಅಲೆಗಳ ಮಹಾಪೂರವೇ ಹರಿದು ಬಂದಂತಿದೆ.

ದೇಶಭಕ್ತಿಯ ಕುರಿತು ಮೂಡಿಬಂದ ನವೋದಯ ಕಾವ್ಯಗಳನ್ನು ನಾಡುನುಡಿ, ಸ್ವಾತಂತ್ರ್ಯ, ವಿನ್ಯಾಸಗಳ ಮೂಲಕ ಈ ಮಹಾಪ್ರಬಂಧದಲ್ಲಿ ಅಧ್ಯಯನ ಮಾಡಲಾಗಿದೆ. ನವೋದಯ ಕವಿಗಳ ದೇಶಭಕ್ತಿಯುತ ಕಾವ್ಯಗಳನ್ನು ಆಕರಗಳನ್ನಾಗಿ ಬಳಸಲಾಗಿದೆ. ಕವಿಗಳ ಕಾವ್ಯಗಳು ಮತ್ತು ವಿಮರ್ಶೆ ಈ ಎರಡು ಪ್ರಕಾರದ ಆಕರಗಳನ್ನು ಆಧಾರವಾಗಿಟ್ಟುಕೊಂಡು ಈ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

"ನವೋದಯ ಕಾವ್ಯಗಳಲ್ಲಿ ದೇಶಭಕ್ತಿಯ ವಿನ್ಯಾಸಗಳು" (ಆಯ್ದ ಕವಿಗಳನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯಡಿ ದೇಶಭಕ್ತಿಯುತವಾದ ಕಾವ್ಯಗಳ ಮೂಲಕ ದೇಶಪ್ರೇಮವನ್ನು ಅಧ್ಯಯನ ಮಾಡುವುದು. ಈ ಮಹಾಪ್ರಬಂಧದ ಮುಖ್ಯ ಉದ್ದೇಶವಾಗಿದ್ದರೂ ಅದರ ಹಿನ್ನೆಲೆಯಾಗಿ ನವೋದಯ ಸಾಹಿತ್ಯದ ಕಾಲಘಟ್ಟವನ್ನು, ಆಶಯಗಳನ್ನು ಧೋರಣೆಗಳನ್ನು ಪ್ರೇರಣೆಗಳನ್ನು ಪರಿಕಲ್ಪನಾತ್ಮಕವಾಗಿ ಅವಲೋಕಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಪ್ರಸ್ತುತ ಮಹಾಪ್ರಬಂಧಕ್ಕೆ ಸಂಬಂಧಿಸಿದಂತೆ ಮಹಾಪ್ರಬಂಧಗಳನ್ನು ಅವಲೋಕಿಸಲಾಗಿದೆ. ಮೂರನೇ ಅಧ್ಯಾಯದಲ್ಲಿ ದೇಶಭಕ್ತಿಯ ಪರಿಕಲ್ಪನೆಗಳನ್ನು ಇಟ್ಟುಕೊಂಡು ಭಾವೈಕ್ಯತೆ, ಗಾಂಧೀಜಿಯವರನ್ನು ಕುರಿತು ಕಾವ್ಯಗಳು, ವಿದೇಶಿ ಆಕ್ರಮಣದ ಪ್ರತಿಭಟನಾತ್ಮಕ ಕಾವ್ಯಗಳು ಹೇಗೆ ಮೂಡಿಬಂದಿವೆ ಎಂಬುದನ್ನು ಚರ್ಚಿಸಲಾಗಿದೆ. ನಾಲ್ಕನೇ ಅಧ್ಯಾಯದಲ್ಲಿ ರಾಷ್ಟ್ರೀಯತೆ ಮತ್ತು ಪರಿಕಲ್ಪನೆಗಳ ಅಡಿಯಲ್ಲಿ ಉಪಶೀರ್ಷಿಕೆಗಳಾದ ಬಂಧಮುಕ್ತ ಭಾರತಾಂಬೆಯ ಹಂಬಲದ ಚಿತ್ರಣ, ಸ್ವಾತಂತ್ರ್ಯ ಹೋರಾಟದ ಚಿತ್ರಣ, ಸ್ವಾತಂತ್ರ್ಯ ಬಂದ ಶುಭ ಸಂದರ್ಭ ಆಶೋತ್ತರಗಳು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ, ಐದನೇ ಅಧ್ಯಾಯದಲ್ಲಿ ನವೋದಯ ಕವಿಗಳ ಕಾವ್ಯಗಳಲ್ಲಿ ಅಭಿವ್ಯಕ್ತಗೊಂಡ ದೇಶಪ್ರೇಮ ಭಾಷಾಪ್ರೇಮವನ್ನು ಅಧ್ಯಯನ ಮಾಡಲಾಗಿದೆ. ಸಮಾರೋಪದ ಕೊನೆಗೆ ಫಲಿತಗಳನ್ನು ವಿವೇಚಿಸಲಾಗಿದೆ.

**ಅಧ್ಯಯನದ ಫಲಿತಗಳು:**

ಕಾವ್ಯ ಕೇವಲ ತನ್ನ ನಾದಮಾಧುರ್ಯದಿಂದ ಜನರನ್ನು ರಂಜಿಸಿ ಅಹ್ಲಾದಗೊಳಿಸಬಲ್ಲ ಪ್ರಕಾರವಷ್ಟೇ ಅಲ್ಲ. ಅದಕ್ಕೆ ದೇಶಾಭಿಮಾನದ ಕಿಚ್ಚನ್ನು ಹೊತ್ತಿಸಬಲ್ಲ ಕೆಚ್ಚಿದೆಯೆಂಬುದು ಅಧ್ಯಯನದುದ್ದಕ್ಕೂ ನನ್ನ ಅರಿವಿಗೆ ಬಂದಿದೆ. ನವೋದಯ ಕಾವ್ಯ ಕೇವಲ ಸಂಗೀತ ಪದಗಳ ಮಾಧ್ಯಮವಾಗಿ ಮೂಡಿಬಂದಿಲ್ಲ. ತನ್ನೊಳಗೆ ಜಾಗೃತಿಯ ಗಂಟೆಯ ನಾದವಿಟ್ಟುಕೊಂಡು ಎಚ್ಚರಿಸುತ್ತಾ ರಾಷ್ಟ್ರಕ್ಕಾಗಿ ನಾಡಿಗಾಗಿ ತುಡಿಯುವ ಮತ್ತು ಮಿಡಿಯುವ ಸಾಧನವಾಗಿ ಜನರನ್ನು ತಟ್ಟಿ ಮುಟ್ಟಿ ಎಚ್ಚರಿಸಿದೆ. ಇದು ಕುವೆಂಪುರವರ ಕೈಯಲ್ಲಿ ಬಾರಿಸು ಕನ್ನಡ ಡಿಂಡಿಮವಾ, ಸತ್ತಂತಿಹರನು

ಬಡಿದೆಚ್ಚರಿಸಿ, ಕಚ್ಚಾಡುವರನ್ನು ಕೂಡಿಸಿ ಒಲಿಸಿ ಒಂದೇ ತೆರದಲಿ ಬಾಳಲು ಹರಿಸಿ ಮುನ್ನಡೆಸಿ ದೇಶಭಕ್ತಿಯ, ರಾಷ್ಟ್ರಪ್ರೇಮದ ಹೆಜ್ಜೆಯನ್ನಿರಿಸಿದೆ.

* ಭಾರತ ದೇಶ ವಿಭಿನ್ನ ಸಂಸ್ಕೃತಿ, ಭಾಷೆ, ಜನಾಂಗ, ಧರ್ಮ ಹೊಂದಿದ್ದರೂ ನಾವೆಲ್ಲರೂ ಒಂದೇ ದೇಶದವರು, ಒಂದೇ ತಾಯಿಯ ಮಕ್ಕಳೆಂದು ಸಹೋದರರೆಂದೂ ಭಾವೈಕ್ಯತೆಯನ್ನು ಮೆರೆದಿರುವರು. ಜೀವನದ ಉಸಿರು, ಬಸಿರು ಸರ್ವಸ್ವವೂ ಭಾರತವೆಂದು ಕಂಡಿರುವಾಗ ದೇಶಪ್ರೇಮದ ಅಭಿಮಾನ ವ್ಯಕ್ಯವಾಗಿದೆ. ದೇಶದ ಉನ್ನತಿಗೆ ಸಾಧಿಸಬೇಕು ದೇಶಕ್ಕೆ ದ್ರೋಹ ಬಗೆಯಬಾರದು ಎಂದಿರುವರು.

* ಹಲವಾರು ಭೇಧಗಳನ್ನು ಗಾಳಿಗೆ ತೂರಿ ಪ್ರಕೃತಿಯೇ ನಮ್ಮನ್ನು ಒಂದು ಮಾಡಿದಾಗ ನಾವೆಲ್ಲರೂ ಮೇಲು ಕೀಳೆನ್ನದೇ ಭಾವೈಕ್ಯತೆಯನ್ನು ಸಾಧಿಸಬೇಕೆಂದಿದ್ದಾರೆ. ಹಸುಗಳ ಬಣ್ಣ ಬೇರೆಯಾದರೂ ಹಾಲಿನ ಬಣ್ಣ ಒಂದೇ ಎಂಬಂತೆ ಭಾವೈಕ್ಯತೆಯನ್ನು ಬಿತ್ತರಿಸಿದ್ದಾರೆ.

* ವಿದೇಶ ಆಕ್ರಮಣದ ಪ್ರತಿಭಟನೆಯಲ್ಲಿ ಚೀನಾ ಭಾರತ ಆಕ್ರಮಣ ಮಾಡಿದಾಗ ಹೋರಾಟಕ್ಕೆ ಪಾಂಚಜನ್ಯ ಮೊಳಗಿಸಿದ್ದಾರೆ. ಗುಡುಗು ಸಿಡಿಲಾಗಿ ಹೋರಾಡಿ, ಗೆಲ್ಲದೆ ನಮಗೆ ಉಳಿಗಾಲವಿಲ್ಲ ಎಂದು ನಿಶ್ಚಯಿಸಿ ಕವಿಯ ಕರೆಗೆ ಓಗೊಟ್ಟು ತನು,ಮನ, ಧನಗಳನ್ನು ಅರ್ಪಿಸಿ ಗೆಲ್ಲುವ ಪಣ ತೊಟ್ಟಿದ್ದಾರೆ. ತಾಯಿ ಮಾನ ಉಳಿಸಲು ಹೋರಾಡಿದ ಯೋಧರ ಸಾಹಸ ಶೌರ್ಯಗಳನ್ನು ಕೊಂಡಾಡಿದ್ದಾರೆ. ವೀರಾವೇಶದಿಂದ ದಿಟ್ಟತನದಿಂದ ಹೋರಾಟದ ಕುರಿತು ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

* ನವೋದಯ ಕಾವ್ಯಗಳಲ್ಲಿ ಗಾಂಧೀಜಿಯವರ ಸಾಧನೆ ಸಿದ್ದಿಗಳನ್ನು, ಸ್ವಾತಂತ್ರ್ಯಕ್ಕಾಗಿ ಹೋರಾಡಿ ಮಡಿದ ಮೇಲೆಯೂ ಸ್ವಾತಂತ್ರೋತ್ತರ ಭಾರತಕ್ಕೆ ಅವರ ಅವಶ್ಯವಿದೆಯೆಂದೂ ಕಾವ್ಯಗಳಲ್ಲಿ ಹೇಳಿದ್ದಾರೆ. ಉಪವಾಸ ಕೈಗೊಂಡು ದೇಶಕ್ಕೆ ಪ್ರೇಮ ಬೀಜ ಬಿತ್ತಿ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ಚಿತ್ರಣಗಳಲ್ಲಿ ಕಾವ್ಯಗಳಲ್ಲಿ ಮೂಡಿ ಬಂದಿದೆ.ಸ್ವಾತಂತ್ರ್ಯೋತ್ಸವ ಶುಭ ಸಂದರ್ಭದಲ್ಲಿ ಗಾಂಧೀಜಿಯವರನ್ನು ಸ್ಮರಿಸಿದ್ದಾರೆ. ಗಾಂಧೀಜಿಯವರನ್ನು ಕುರಿತು ಬರೆಯದ ರಮ್ಯಕವಿಯೇ ಇಲ್ಲವೆನ್ನುವೆಷ್ಟರಮಟ್ಟಿಗೆ ಕನ್ನಡ ಸಾಹಿತ್ಯದಲ್ಲಿ ಶಾಶ್ವತವಾಗಿ ನೆಲೆ ನಿಂತಿದ್ದಾರೆ. ಭಾರತದ ಬಿಡುಗಡೆಗಾಗಿ ಹಗಲಿರುಳು ಶ್ರಮಿಸಿ ತಾರೆಯಂತೆ ಕಾವ್ಯಗಳಲ್ಲಿ ಮಿನುಗಿದ ಚಿತ್ರಣವು ಎಲ್ಲರ ಎದೆಯನ್ನು ತಟ್ಟಿದೆ.

* ಅಂದಿನ ರಾಜಕೀಯ ಅಸ್ಥಿರತೆ, ಮಂತ್ರಿಮಂಡಲ, ರಾಜಕೀಯ ನಾಯಕರು, ಜನಪ್ರತಿನಿಧಿಗಳ ಕಾರ್ಯವೈಖರಿ, ಭ್ರಷ್ಟತೆ, ಸ್ವಜನ ಪಕ್ಷಪಾತ ಮುಂತಾದವುಗಳ ಕುರಿತು ವಿಡಂಬನಾ ಕಾವ್ಯಗಳಲ್ಲಿ ಸದಾ ಎಚ್ಚರವಾಗಿರುವ ಅಧಿನಾಯಕನಿಗೆ ಅಂದರೆ ರಾಷ್ಟ್ರಗೀತೆಯ ಸಾಲುಗಳನ್ನೇ ವಿಡಂಬಿಸಿದ್ದಾರೆ.

ರಾಜಕೀಯ ನಾಯಕರನ್ನು ಬಣ್ಣ ಬದಲಾಯಿಸುವ ಗೋಸುಂಬೆಗಳಿಗೆ ಹೋಲಿಸಿದ್ದಾರೆ. ರಾಷ್ಟ್ರದ ಆಗು ಹೋಗುಗಳಲ್ಲಿನ ಅನಾರೋಗ್ಯಕರವಾದ ಲೋಪ ದೋಷಗಳನ್ನು ಕಂಡು ತಮ್ಮ ಕಾವ್ಯಗಳ ಮೂಲಕ ವಿಡಂಬನೆಯ ಚುಚ್ಚುಮದ್ದಿನಿಂದ ಆರೋಗ್ಯಕರ ವಾತಾವಾರಣ ನಿರ್ಮಿಸಲು ಶ್ರಮಿಸಿದ್ದಾರೆ.

* ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಲು ಮಹಿಳೆಯರು ಹಿಂಜರಿಯಲಿಲ್ಲ. ದೇಶಾದ್ಯಂತ ಮಹಿಳೆಯರು ರಾಜಕೀಯ ನಾಯಕರ ಹಾಗೂ ಗಾಂಧೀಜಿಯವರ ಕರೆಗೆ ಓಗೊಟ್ಟು ಸ್ವಾತಂತ್ರ್ಯಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟ ಮಹಿಳೆಯರ ದೇಶನಿಷ್ಠೆಯನ್ನು ಕಾಣಬಹುದು.

* ಬಂಧಮುಕ್ತ ಭಾರತವನ್ನಾಗಿ ಮಾಡಲು ಬಿಡುಗಡೆಗಾಗಿ ಹಂಬಲಿಸಿದ ಚಿತ್ರಣವಿದೆ. ಭಾರತ ಮಾತೆಯ ಬಂಧನದ ದುಃಸ್ಥಿತಿಯನ್ನು ಕಂಡು ಬಿಡುಗಡೆಗಾಗಿ ಭಾರತಮಾತೆಯಲ್ಲಿ ಮೊರೆಹೋಗಿರುವುದನ್ನು ಚಿತ್ರಿಸಿದ್ದಾರೆ. ಬಿಡುಗಡೆಯ ಕನಸು ನನಸಾಗಲು ಸ್ವಾತಂತ್ರ್ಯ ದೇವಿಯನ್ನು ಆಹ್ವಾನಿಸಿದ್ದಾರೆ. ಕವಿಜೀವಗಳು ಸ್ವಾತಂತ್ರ್ಯಕ್ಕಾಗಿ ಹಂಬಲಿಸಿದ ಚಿತ್ರಣವಿದೆ. ಭಾರತದ ಬಂಧನದ ಬಿಡುಗಡೆಯ ವಿಷಯ ವಸ್ತುವನ್ನು ಪರಕೀಯರ ದಾಸ್ಯದಿಂದಾಗಿ ಅವರ ಮೋಹಕ್ಕೆ ಒಳಗಾಗಿ ತನ್ನ ವಿಶಿಷ್ಟ ಸಂಸ್ಕೃತಿ ಪರಂಪರೆಯನ್ನು ಬಿಟ್ಟುಕೊಡದೇ ಅವುಗಳನ್ನು ಉಳಿಸಿಕೊಂಡು ಉನ್ನತಿ ಪಡೆಯಲು ರಾಷ್ಟ್ರೀಯತೆ ಪ್ರಜ್ಞೆಯನ್ನು ಜಾಗೃತಗೊಳಿಸಿ ಓದುಗರಿಗೆ ಅಂದಿನ ವಾಸ್ತವದ ಕಹಿಯನ್ನು ಅರುಹಿದ್ದನ್ನು ವಿವೇಚಿಸಲಾಗಿದೆ.

* " ಮಾಡು ಇಲ್ಲವೇ ಮಡಿ" ಎಂಬ ಮನೋಧರ್ಮದ ಮೂಲಕ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮಕಬೇಕು. 'ಮರಣದಿಂ ಮತ್ತೇ ಜನಿಸುವವೆವು ಧರೆಗೆ ತಾಯಿಚು ಬಿಡುಗಡೆಗಾಗಿ' ಎಂದು ಗೆಲ್ಲುವ ಧೀರೋದಾತ್ತ ಛಲದ ಕಾವ್ಯಗಳನ್ನು ವಿಶ್ಲೇಷಿಸಲಾಗಿದೆ. ತಾನಳಿದರೂ ಚಿಂತೆಯಿಲ್ಲ ದೇಶಕ್ಕೆ ಸ್ವಾತಂತ್ರ್ಯ ಬಂದೇ ಬರುತ್ತದೆ ಎಂದಿದ್ದಾರೆ. ಪಾಂಚಜನ್ಯವನ್ನು ಊದಿ ಕನ್ನಡಿಗರನ್ನು ಬಡದೆಬ್ಬಿಸಿದ ಕವನಗಳು ಸಾಕ್ಷಿಯಾಗಿವೆ.

* ನವೋದಯ ಕಾವ್ಯ ನಲ್ಮೆಯಿಂದ ನಲಿಯುವ ಸಮಯದಲ್ಲಿ ಕವಿಗಳಿಗೆ ಹೃನ್ಮನದ ತುಂಬ ಸ್ವಾತಂತ್ರ್ಯದ ಹಂಬಲ ಸಾಗರೋಪಾದಿಯಲ್ಲಿ ತುಂಬಿತ್ತು. ಅವರ ಮೈ ಮನಸ್ಸುಗಳ ತುಂಬೆಲ್ಲ ಭವ್ಯ ಭಾರತದ ನಿರ್ಮಾಣದ ಕನಸುಗಳನ್ನು ತುಂಬಿಕೊಂಡಿದ್ದರು. ನಾಡಿನ ಬಿಡುಗಡೆಗಾಗಿ ಮಹತ್ವಾಕಾಂಕ್ಷೆಯ ಹೊಂಗನಸನ್ನು ಕಾಣುತ್ತಿದ್ದ ಕವಿಗಳು ಬ್ರಿಟೀಷರ ವಿರುದ್ಧ ಬರೆಯಲು ಹಿಂಜರಿಯಲಿಲ್ಲ. ಭಾರತದ ಬಿಡುಗಡೆಯ ವೀರವ್ರತ ಆಗಿನ ರಾಷ್ಟ್ರಪ್ರೇಮಿಗಳ ವೀರಸಂಕಲ್ಪವಾಗಿತ್ತು. ತಾಯಿನಾಡಿಗಾಗಿ ಅದರ ಬಿಡುಗಡೆಗಾಗಿ ಕನ್ನಡ ನಾಡಿನಲ್ಲೂ ಕವಿಗಳು ನಾಡಿನಾದ್ಯಂತ ಜನತೆಯನ್ನು ಜಾಗೃತಿಗೊಳಿಸುವ ರಾಷ್ಟ್ರಭಕ್ತಿಯನ್ನು ತೋರಿದರು. ಪರದೇಶೀಯವರು ಇಲ್ಲಿಗೆ ಬಂದು ಇಲ್ಲಿಯ

ಜನತೆಯನ್ನು ಆಳುತ್ತಾ ದೈಹಿಕ, ಮಾನಸಿಕ ಹಿಂಸೆ ನೀಡಿದ್ದನ್ನು ನಮ್ಮ ಕನ್ನಡ ಕವಿಗಳು ಚೆನ್ನಾಗಿ ಚಿತ್ರಿಸಿದ್ದಾರೆ.

.* ಕವಿತೆ ಮತ್ತು ಚಳುವಳಿ ಅವಿನಾಭಾವ ಸಂಬಂಧ ಉಳ್ಳವು, ಚಳುವಳಿಯನ್ನು ಅರ್ಥವತ್ತಾಗಿಸಿಕೊಂಡು ಕಾವ್ಯ ಪ್ರಕಟವಾಗಿವೆ.

* ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಾವು ಒಂದು ರಾಷ್ಟ್ರದವರು ರಾಷ್ಟ್ರರಕ್ಷಣೆ ನಮ್ಮ ಕರ್ತವ್ಯ ಎಂಬ ಭಾವನೆ ಎಂದು ಜಾಗೃತವಾಯಿತೋ ಅಂದಿನಿಂದ ನಿರಂತರ ಹೋರಾಟ ಆರಂಭಗೊಂಡಿತು.

* ವಿ. ಸೀತಾರಾಮಯ್ಯನವರು ಸ್ವಾತಂತ್ರ್ಯವನ್ನು ಮೃಗಶಾಲೆಯ ಸಿಂಹಗಳು ಎಂದು ರೂಪಕವಾಗಿ ಬಣ್ಣಿಸಿದ್ದಾರೆ. ಪಂಜರದಲ್ಲಿ ಸಿಕ್ಕಿಬಿದ್ದ ಸಿಂಹದಂತೆ ಅಸಹಾಯಕತೆಯಿಂದ ಪಾರತಂತ್ರ್ಯದಲ್ಲಿರುವ ಭಾರತೀಯರು ಹತಾಶರಾದ ಧ್ವನಿ ಹುರುಳುಗೊಂಡಿದೆ.

* ಸ್ವಾತಂತ್ರ್ಯ ಸಂಗ್ರಾಮ ಬ್ರಿಟೀಷ್ ದುರಾಡಳಿತವನ್ನು ವಿರೋಧಿಸಿ ರಾಜಕೀಯ ಸ್ವಾತಂತ್ರ್ಯವನ್ನು ಬಯಸಿತೇ ವಿನಾ ಅವರ ಸಂಸ್ಕೃತಿಯನ್ನು ಪೂರ್ಣವಾಗಿ ಉಪೇಕ್ಷಿಸಲಿಲ್ಲ. ಶಿಕ್ಷಣ ಸಾರಿಗೆ, ಸಂಪರ್ಕ, ಸಂಘಟನೆ, ಸ್ತ್ರಿ–ಪುರುಷ ಸಮಾನತೆ, ಸಮಾಜ ಸುಧಾರಣೆ, ಸಹಕಾರ ಮೊದಲಾದ ವಿನೂತನವಾದ ಅಂಶಗಳು ಭಾರತೀಯರಿಗೆ ಹೊಸದಿಕ್ಕನ್ನು ತೋರಿಸಿವೆ ಮಾತ್ರವಲ್ಲ. ದೇಶದ ಸ್ವಾತಂತ್ರ್ಯಕ್ಕೂ ಪ್ರೇರಣೆ ನೀಡಿವೆ.

* 'ಕರ್ನಾಟಕತ್ವದ ವಿಶಿಷ್ಟ ಪರಿಕಲ್ಪನೆ ನವೋದಯ ಸಾಹಿತ್ಯಕ್ಕೆ ಅಡಿಪಾಯ ಹಾಕಿತು. ಕನ್ನಡ ನಾಡಿನ ಗತವೈಭವವನ್ನು ಹೇಳುತ್ತಲೇ ಅದರ ಸಾಕಾರಕ್ಕಾಗಿ ಮಾಡಿದ ಪ್ರಯತ್ನದ ಫಲವಾಗಿ ನವೋದಯ ಸಾಹಿತ್ಯ ಸೃಷ್ಟಿಗೊಂಡಿತು.

* ಕುವೆಂಪು ದೇಶದ ಸ್ವಾತಂತ್ರ್ಯದ ಬಗ್ಗೆ ಉತ್ಕಟ ಭಾವನೆ ಹೊಂದಿದ್ದರು. ಕರ್ನಾಟಕ ಭಾರತದ ಅವಿಭಾಜ್ಯ ಅಂಗ ಎಂಬುದು ಅವರ ನಿಲುವು, ಭಾರತ ದೇಶದಲ್ಲಿ ಜನಿಸಿದ್ದೇ ಪುಣ್ಯ ಎಂದು ಪರಿಭಾವಿಸಿದ ಕವಿ 'ಭಾರತಾಂಬೆಯೇ ಜನಿಸಿನಿನ್ನೊಳು ಧನ್ಯನಾದೇನು ದೇವಿಯೇ' ಎಂದು ಉದ್ಗರಿಸಿದ್ದಾರೆ. ಪರಂಪರೆಯಿಂದ ಬಂದ ಧರ್ಮ, ನಂಬಿಕೆ, ದೇವರಿಗಿಂತಲೂ ಸ್ವಾತಂತ್ರ್ಯ ಮುಖ್ಯವಾದುದೆಂಬ ತಮ್ಮ ಅಚಲ ನಿರ್ಧಾರವನ್ನು ವ್ಯಕ್ತಪಡಿಸಿದರು. ಪಾಂಚಜನ್ಯ, ಕೋಗಿಲೆ ಮತ್ತು ಸೋವಿಯತ್ ರಷ್ಯಾದ ಕವನಗಳು ಸ್ವಾತಂತ್ರ್ಯ ಸಂಗ್ರಾಮದ ಸ್ಫೂರ್ತಿಯ ಸೆಲೆಯಾಗಿದ್ದವು.

* ಗೋವಿಂದ ಪೈಗಳ ಚಿಂತಿಸಿದಂತೆ "ಭಾರತವನ್ನುಳಿಯುತ್ತ ನನಗೆ ಜೀವನವೆತ್ತ?" ಎಂಬುದು ಆಗಿನವರ ಅಂತರಾಳದ ಕೊರಗಾಗಿತ್ತು. ಕಳವಳವಾಗಿತ್ತು. ಈ ಕಳವಳಿದಿಂದ ಮುಕ್ತರಾಗಲೆಂದೇ

ದೇಶದ ತುಂಬೆಲ್ಲ ಉಗ್ರ ಚಳುವಳಿ ನಡೆದಿತ್ತು. ಕವಿಗಳ ವಾಣಿಗಳು ಬಡಿದೆಚ್ಚರಿಸುವ ಕೆಲಸವನ್ನು ಮಾಡಿವೆ.ನಾಡು–ನುಡಿ ಉಳಿವಿನ ಹೋರಾಟ ಅಭಿವ್ಯಕ್ತಿಗಳ ಮೊಳಕೆ ಸಿರಿಯನ್ನು ಇಲ್ಲಿ ಗಮನಿಸುವುದಾಗಿದೆ.

* ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಯುತ್ತಿದ್ದ ಆ ಕಾಲದಲ್ಲಿ ಕವಿ ತಮ್ಮ 'ಬೈಗುಗೆಂಪು' ಕವನದಲ್ಲಿ– ಭಾರತ ಪುತ್ರರು ಚೆಲ್ಲಿದ ಚೆಲ್ಲುವ ಶೋಣಿತ ರಣಧುನಿ ಈ ಬೈಗು: ಪರತಂತ್ರತೆಯನು ವಹಿಸುವ ಮಸಣದ ಸೂಡಿನ ಕೇಸರಿ ಈ ಬೈಗು: ಸ್ವಾತಂತ್ರ್ಯದ ಆರಾಧನೆಗೆತ್ತಿದ್ದ ಕುಂಕುಮದಾರುತಿ ಈ ಬೈಗು ಎಂದು ಮರದ ನೆಳಲು ಕವನದಲ್ಲಿ ಎಲ್ಲ ಹಾಳಾದರೂ ಆಗಿ ಹೋಗಲಿ ಇಂದೆ ಬೇಕಾದುದೆನೆಗೆ ಆ ಸ್ವಾತಂತ್ರ್ಯ ಶ್ರೀಯೊಂದೆ ಎಂದು ಘೋಷಿಸಿದ್ದಾರೆ. ಸ್ವಾತಂತ್ರ್ಯಕ್ಕಾಗಿ ಹಂಬಲಿಸಿದ್ದನ್ನು ಕಾಣಬಹುದು.

* ಸ್ವಾತಂತ್ರ್ಯ ಸಂಗ್ರಾಮದ ಕವನಗಳು ಎಷ್ಟು ಶಕ್ತಿಯುತವಾಗಿವೆ ಎಂದರೆ ಜನರಿಗೆ ಯುವಕರಿಗೆ ಕವನಗಳ ಮೂಲಕ ಕರೆನೀಡಿದ್ದಾರೆ.

* ನವೋದಯ ಒಂದು ದೃಷ್ಟಿಯಿಂದ ವಿಶಿಷ್ಟವಾದದ್ದು ಬೇರೆ ಬೇರೆ ಭಾಷೆಗಳ ಸಾಹಿತ್ಯಗಳಲ್ಲಿಯೂ ಈ ನವೋದಯ ಮೂಡಿದರೂ, ಭಾರತ ದಾಸ್ಯದಲ್ಲಿರುವೂ ತಮ್ಮ ಸಾಮರ್ಥ್ಯವನ್ನು ಕಂಡುಕೊಳ್ಳಲು ಬಯಸಿತು.

* ಒಂದು ದೇಶವು ಮತ್ತೊಂದು ದೇಶವನ್ನು ಆಳುವಾಗ ಆಳಿಕೆಗೊಳಪಟ್ಟ ದೇಶವು ಶೋಷಣೆಗೊಳಗಾದಾಗ ಪಾಲಕ ದೇಶವನ್ನು ನಿಂದಿಸುವುದು ಸಹಜ. ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸುವುದು ಸಹಜ. ಈ ಹೋರಾಟ ಕಾಲದಲ್ಲಿ ಸಮಕಾಲೀನ ಕವಿಗಳು ತಮ್ಮ ಲೇಖನಿಯ ಮೂಲಕ ಕೆಚ್ಚಿನ ಕವಿತೆಗಳನ್ನು ಚಿಮ್ಮಿಸಿ ದಾಖಲುಗೊಳಿಸಿದ್ದಾರೆ. ಇಂತಹ ಕಾವ್ಯಗಳಲ್ಲಿ ಭಾವುಕತೆ, ಉದ್ರೇಕ, ಉತ್ತೇಜನಗಳ ಪಾಲು ಹೆಚ್ಚಿದ್ದರೂ ಅವೆಲ್ಲವೂ ದೇಶಭಕ್ತಿಯಿಂದ ಪ್ರೇರಿತವಾಗಿವೆ.

* ನಾಡಿನ ಉಳಿವಿನೊಂದಿಗೆ 'ನುಡಿ'ಯನ್ನು ಕಾಯ್ದುಕೊಳ್ಳಬೇಕಾದ ಅನಿವಾರ್ಯತೆಯನ್ನು ಕಾವ್ಯಗಳಲ್ಲಿ ಎಚ್ಚರಿಸಿದ್ದಾರೆ,. ತಾಯ್ನುಡಿ ಪ್ರೇಮ ನಮಗಿದ್ದರೆ ತಾಯ್ನುಡಿಗೆ ಚಿಂತೆಯೆ ಇಲ್ಲ ಆದರೆ ನಾವೀಗ ಮಾತೃಭಾಷೆ ದೂರ ತಳ್ಳಿ ಪರಭಾಷೆ ಚುಂಬಿಸಿ, ಹಾರ ಹಾಕುತ್ತಾ 'ನಮ್ಮತನ'ವನ್ನು ಕಳೆದುಕೊಳ್ಳತ್ತಿದ್ದೇವೆ ಎನ್ನುತ್ತಾ ತಾಯ್ನುಡಿಗಿರುವ ಸತ್ವ, ಘನತೆ, ಮಾಧುರ್ಯ ಪರಂಪರೆಗಳನ್ನು ಮಹಾಕವಿಗಳನ್ನು ಹೆಸರಿಸುವ ಮೂಲಕ ಆತ್ಮಾಭಿಮಾನವನ್ನು ಜಾಗೃತಗೊಳಿಸಿದ್ದಾರೆ.

* ೧೯೫೦ ಜನವರಿ ೨೬ ರಂದು ಭಾರತ ರಿಪಬ್ಲಿಕ್ ದೇಶವಾಗಿ ರೂಪಗೊಂಡ ಸಂದರ್ಭದಲ್ಲಿ ಜನಸಾಮಾನ್ಯರನ್ನು ಸರ್ವೋತ್ತಮವೆಂದು ಪರಿಗಣಿಸಿ, ಸರ್ವೋದಯದ ಮೂಲಕ ಮನುಷ್ಯತ್ವದ ಏಕತೆಯನ್ನು ಸಾಧಿಸಬೇಕೆಂಬ ಹಂಬಲದ ಕಾಳಜಿಗಳು ಸಾಮಾಜಿಕವಾಗಿ ಸಫಲತೆಗೊಳ್ಳಬೇಕೆಂಬ ಆಶಯ ಕಾವ್ಯಗಳಲ್ಲಿವೆ.

* ಸ್ವಾತಂತ್ರ್ಯವೆಂಬುದು ಎಲ್ಲಾ ಬಂಧನಗಳಾಚೆಯ ಮಹಾಬೆಳಕು. ಈ ಬೆಳಕು ಸದಾ ಬೆಳಗುತ್ತಿರಲಿ ಎಂಬುದು ಕವಿಗಳ ಹಾರೈಕೆಗಳಾಗಿವೆ.

* ಸಾಂಸ್ಕೃತಿಕ ಮತ್ತು ರಾಜಕೀಯ ನೆಲೆಯಲ್ಲಿ ಭಾರತವನ್ನು ತಾಯಿಯ ಸ್ಥಾನದಲ್ಲೂ ಕರ್ನಾಟಕವನ್ನು ಮಗಳ ಸ್ಥಾನದಲ್ಲೂ ಪ್ರಾದೇಶಿಕ ಆಶೋತ್ತರಗಳನ್ನು ಸಮನಾಗಿ ಕಟ್ಟಿಕೊಳ್ಳಬೇಕು. ಸಾಮರಸ್ಯದ ಬಾಳ್ವೆಗೆ ಹೊಂದಿ ನಡೆಯಬೇಕೆಂದಿದ್ದಾರೆ.

* ಕನ್ನಡತ್ವದ ಅಭಿಮಾನವನ್ನು ಉಳಿಸಿಕೊಂಡೆ ಅದು ರಾಷ್ಟ್ರಾಭಿಮಾನವಾಗಿ ಮತ್ತು ಏಕಕಾಲಕ್ಕೆ ವಿಶ್ವಪ್ರಜ್ಞೆಯಾಗಿ ಪ್ರಟಕಗೊಳ್ಳಬೇಕೆಂಬ ಆಶಯವನ್ನು ಕಾಣಬಹುದು.

* ಕುವೆಂಪು ಶ್ರೀದಿನಂ ದಿಟಮಿದು ಮನಹಾದಿನಂ ವಿರಾಟ್‌ದಿನಂ, ಎಂದು ಸ್ವಾತಂತ್ರ್ಯ ಬಂದ ದಿನವನ್ನು ಶುಭದಿನವೆಂದು ತಿಳಿಸಿದ್ದಾರೆ. ಸ್ವಾತಂತ್ರ್ಯವೇ ಶಿವನೆಂಬುದು ಅವರ ಅಭಿಮತವಾದ್ದರಿಂದ, ಸ್ವಾತಂತ್ರ್ಯದ ಬಗ್ಗೆ ಗೌರವ ಮಮತೆಗಳು ಮೂಡಿಬಂದಿವೆ. 'ಸ್ವಾತಂತ್ರ್ಯ' ಮನುಕುಲದ ಉದ್ಧಾರದ ಅಭೀಪ್ಸೆಯಾಗಿ ನಿಂತಿದೆ.

* ಪ್ರಜಾಪ್ರಭುತ್ವದ ಹಿರಿಮೆಯನ್ನು ಸರ್ವರಿಗೆ ಸಮಬಾಳು ಸರ್ವರಿಗೆ ಸಮಪಾಲು ಎಂಬ ವಿಶಾಲ ಹೃದಯವಂತಿಕೆಯ ವ್ಯಕ್ತಿ ಮಾತ್ರ ಹೇಳಬಲ್ಲಂಥವು ದೇಹದ ಉಳಿವಿಗೆ ಎಲ್ಲ ಅಂಗಗಳ ಸ್ವಾತಂತ್ರ್ಯ ಉಳಿವು ಬೆಳವಣಿಗೆ ಹೇಗೆ ಮುಖ್ಯವೋ ಹಾಗೆ ಭಾರತದ ಉಳಿವಿಗೆ ಪ್ರಾಂತೀಯ ಭಾಷೆ ಮತ್ತು ಸಂಸ್ಕೃತಿಗಳ ಉಳಿವು ಬೆಳವಣಿಗೆ ಅತ್ಯಗತ್ಯ ಎಂಬುದನ್ನು ಕವಿಗಳು ಸಮರ್ಥಿಸಿದ್ದಾರೆ.

* ಗಾಂಧಿತತ್ವದ ಬೆಂಕಿ ಆರಿ ಅದರ ಬೂದಿ ನಮ್ಮ ಜನರಿಗೆ ತಲುಪಿದ್ದು ಎಂಬುದು ನಮ್ಮ ಎದುರಿಗಿರುವ ಸತ್ಯವಾಗಿದೆ. ಸಮಾಜದ ಎಲ್ಲರ ಉದ್ಧಾರವೇ ನಿಜವಾದ ನಾಡು ನುಡಿಯ ಉದ್ಧಾರ ಎಂಬ ಭಾವನೆ ನವೋದಯ ಕವಿಗಳ ಕಾವ್ಯಗಳಲ್ಲಿದೆ.

* ನವೋದಯದ ಲೇಖಕರು ಕೇವಲ ಸಾಹಿತ್ಯದ ದಂತಗೋಪುರಗಳಲ್ಲಿ ಉಳಿಯದೆ ಕನ್ನಡ ನಾಡಿನ ಅರುಣೋದಯಕ್ಕೆ ದುಡಿದವರಾಗಿದ್ದರು, ಬಿ.ಎಂ.ಶ್ರೀ. ಅವರು ಹಾಕಿಕೊಟ್ಟ

ಮಾರ್ಗದರ್ಶನವು ಅಖಂಡ ಕರ್ನಾಟಕದ ಸಾಹಿತ್ಯ ಮತ್ತು ಸಂಸ್ಕೃತಿಗಳ ಲೋಕವನ್ನೆ ಹುಡುಕಿ ಚರಿತ್ರೆಯನ್ನು ರೂಪಿಸಿಕೊಳ್ಳಲು ಸಾಧ್ಯವಾಯಿತು.

* ಕನ್ನಡ ನಾಡಿನ ಭಾಷೆ, ಸಂಸ್ಕೃತಿ, ಮತಧರ್ಮ ಹಾಗೂ ಸಮಾಜಗಳ ಚರಿತ್ರೆಯನ್ನು ಪುನರ‍್ರಚಿಸಿಕೊಳ್ಳಬೇಕು. ಸಾಹಿತ್ಯ ಸಂವೇದನೆಯ ಮೂಲಕ ಸರ್ವೋದಯವನ್ನು ಸ್ಥಾಪಿಸಬೇಕು.

ಇಂತಹ ಚಿಂತನೆಗಳ ನೆಲೆಯಲ್ಲಿ ನವೋದಯ ವಿದ್ವಾಂಸರು ಕನ್ನಡ ನಾಡನ್ನು ನಿರೂಪಿಸಿದ್ದಾರೆ. ಗತಕಾಲದ ಭವ್ಯ ನಾಡನ್ನು ಪುನರ‍್ರಚಿಸುವ ನಿಟ್ಟಿನಲ್ಲಿ ನವೋದಯ ಚಿಂತಕರ ಸಂಶೋಧನೆಗಳು ನಡೆದಿವೆ. ಸ್ವಾತಂತ್ರ್ಯ ಸಂಗ್ರಾಮದ ಆಶಯ ಹಾಗೂಈ ಏಕೀಕರಣದ ಅಪೇಕ್ಷೆ ಹೆಚ್ಚು ಕಡಿಮೆ ಒಂದಕ್ಕೊಂದು ಪೂರಕವಾಗಿದ್ದವು.

* ರಾಷ್ಟ್ರೀಯತೆ ಎನ್ನುವುದು ಒಂದು ಮನೋಭಾವ. ರಾಷ್ಟ್ರದ ಸಮಗ್ರತೆ, ಏಕತೆಗೆ ನಿಷ್ಠೆಯಿಂದ ಶ್ರಮಿಸಲು ದೇಶದ ಸಮಸ್ತರಿಗೆ ಸಂಸ್ಕಾರಕೊಟ್ಟು, ಅವರನ್ನೆಲ್ಲ ರಾಷ್ಟ್ರದ ಶ್ರೇಯೋಭಿವೃದ್ಧಿಯಲ್ಲಿ ತೊಡಗಿಸುವ ಚಿಂತನಶೀಲ ರಾಷ್ಟ್ರೀಯತೆಯೂ ಬಂದಿದೆ.

* ಯುವಪೀಳಿಗೆಯಲ್ಲಿ ರಾಷ್ಟ್ರಪ್ರಜ್ಞೆಯ ಪ್ರೇರಣೆ ಸ್ಫೂರ್ತಿ ನೀಡುವ ನಿಟ್ಟಿನಲ್ಲಿ ಕಾವ್ಯವನ್ನು ಮಾಧ್ಯಮವಾಗಿಸಿಕೊಂಡು ೧೯೪೦ ರ ಮೊದಲಿನಿಂದಲೇ ರಾಷ್ಟ್ರನಿರ್ಮಾಣದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಕುವೆಂಪು ರಾಷ್ಟ್ರೀಯತೆಯ ಗುರಿ ಸರ್ವೋದಯ, ಸಮೃದ್ಧ, ಶಾಂತಪ್ರಿಯ ಭಾರತ.

* ಕುವೆಂಪು ಅವರದು ಬರಿಯ ಪ್ರೀತಿ, ಬಣ್ಣನೆ, ಪೂಜೆಗಳಲ್ಲಿ ಪರ್ಯವಸಾನ ಹೊಂದುವ ಶುಷ್ಕ ದೇಶ ಭಕ್ತಿಯಲ್ಲ ರಾಷ್ಟ್ರದ ಜೀವಾಳವಾದ ತರುಣ ಚೇತನಗಳಿಗೆ ರಾಷ್ಟ್ರೀಯತೆಯ ಸಂಸ್ಕಾರ ಕೊಡುವ ವೈಚಾರಿಕತೆ ಭಾರತೀಯರು ಪೂಜಿಸುವ ನೂರು ದೇವರುಗಳೂ ನಿಷ್ಪ್ರಯೋಜಕ ನಿಜವಾದ ದೇವಿ ಭಾರತಾಂಬೆ ಮಾತ್ರ ಎಂದು ಹೇಳುತ್ತ ಭಾರತಾಂಬೆಯನ್ನು ಶ್ರದ್ಧೆ ಭಕ್ತಿ ಗೌರವಗಳಿಂದ ಸೇವಿಸಲು ಪ್ರೇರೇಪಿಸಿದ್ದಾರೆ.

* ಮೌಲಿಕ ಸ್ವಾತಂತ್ರ್ಯ ಪಡೆಯಲು ತ್ಯಾಗ ತಪಗಳಷ್ಟೇ ಸಾಲವು, ರಕ್ತತರ್ಪಣವೂ ಬೇಕು ಆಗ ಮಾತ್ರ ಅದನ್ನು ರಕ್ಷಿಸುವ ಶಕ್ತಿ ಬರುತ್ತದೆ ತ್ಯಾಗ ಸಮರ್ಪಣೆಯ ರಾಷ್ಟ್ರೀಯ ಮನೋಭಾವ ಬೆಳೆಸಿಕೊಳ್ಳಲು ಕರೆ ನೀಡಿದ್ದಾರೆ. ಸ್ವಾತಂತ್ರ್ಯ ಬಂದರೂ ಅದನ್ನು ಕಾಪಾಡಿಕೊಂಡು ಹೋಗುವ ರಾಷ್ಟ್ರಾಭಿಮಾನಿ ಜನಾಂಗ ನಿರ್ಮಾಣ ಇಂದು ಪ್ರಮುಖವಾಗಿದೆ.

* ದೇಶ ಸರ್ವ ಜನಾಂಗದ ಶಾಂತಿಯ ತೋಟ'ವಾಗಬೇಕಾದರೆ, ಜಾತಿ-ಮತಗಳ ಕಟ್ಟೆಯೊಡೆದು ಸಮನ್ವಯದ ಸಹಬಾಳ್ವೆಗೆ ನೆಲೆಯಾಗಬೇಕು.ಅನ್ಯರ ಆದೇಶ ವಿಚಾರಗಳೇನೆ ಇರಲಿ, ತನಗೆ ತನ್ನ

ಅಂತರಂಗದ ದನಿಯೇ ಪ್ರಮುಖವಾಗಬೇಕು. ಅಂಥ ಜನರಿಂದ ಮಾತ್ರ ರಾಷ್ಟ್ರ ನಿರ್ಮಾಣ ಸಾಧ್ಯ.

* ನಾಡು,ನುಡಿ,ಕಲೆ, ಸಂಸ್ಕೃತಿ–ಹೀಗೆ ಒಂದು ರಾಷ್ಟ್ರದ ಸಮಗ್ರತೆಯ ವಿಕಾಸಕ್ಕೆ ಅವಶ್ಯ ಕರ್ನಾಟಕ ಎಂಬುದೇನು ಹೆಸರೆ ಬರಿಯ ಮಣ್ಣಿಗೆ ಮಂತ್ರ, ಶಕ್ತಿ, ತಾಯಿ, ದೇವಿ ಇದ್ದಂತೆ ಎನ್ನುವಲ್ಲಿ ನಾಡಪ್ರೇಮವನ್ನು ಗುರುತಿಸಬಹುದು.

* ರಾಷ್ಟ್ರಪುರುಷನ ಹೃದಯ ಅಂದು ಸ್ವಾತಂತ್ರ್ಯ ದಾಹದಿಂದ ಕುಣಿಯುತ್ತಿತ್ತು. ದೇಶಕ್ಕಾಗಿ ಸರ್ವಸ್ವವನ್ನು ತ್ಯಾಗ ಮಾಡುವ ಸ್ಫೂರ್ತಿಯಿಂದ ತರುಣರು ಮುನ್ನುಗ್ಗುವುದನ್ನು ಕಾಣಬಹುದುತಾಯ್ನಾಡಿನ ಬಂಧ ವಿಮೋಚನೆಗಾಗಿ ಮರಣ ಅಥವಾ ಸ್ವಾತಂತ್ರ್ಯ ಎಂಬ ಉದ್ದೇಶದ ಉಜ್ವಲ ವೀರಸ್ಫೂರ್ತಿಯಾದ ಹಾಡುಗಳನ್ನು ರಚಿಸಿ ಜನಜಾಗೃತಗೊಳಿಸಿದರು.

* ಕನ್ನಡಿಗನು ಏನಾದರೂ ಗಳಿಸಲಿ, ಗಳಿಸಿದ್ದನ್ನು ಹೇಗಾದರೂ ಬಳಸಲಿ, ಆದರೆ ಕನ್ನಡ ಕುಲವನ್ನು ಮಾತ್ರ ಉಳಿಸಲಿ, ಕನ್ನಡಿಗನುದ್ಧಾರವಾಗಬೇಕಾದರೆ ಕನ್ನಡದ ಉದ್ಧಾರವಾಗಬೇಕು. ಹೀಗೆ ಕವಿಗಳು ಕನ್ನಡವನ್ನು ಉಳಿಸಲು–ಬೆಳೆಸಲು ಕೇಳಿಕೊಂಡಿದ್ದಾರೆ.

* ಮಕ್ಕಳ ಕವನಗಳಲ್ಲಿಯೂ ನಾಡು ನುಡಿಯ ಅಭಿಮಾನದ ಚಿತ್ರಣ, 'ಕನ್ನಡಿಗರಾಗಿ ಬೆಳೆಯೋಣ ಎಂಬುದನ್ನು ತಿಳಿಸಿದ್ದಾರೆ. ಕನ್ನಡ ಭಾಷೆ ಆಡಳಿತ ಭಾಷೆಯಾಗಬೇಕು ಎಂಬುದನ್ನು ಕವನಗಳ ಮೂಲಕ ಚಿತ್ರಿಸಿದ್ದಾರೆ.

* ಕಲಿಸಲಿ ಕನ್ನಡ ಎನ್ನುವಂತಹ ಪುರಾಣಿಕರ ಕಾವ್ಯಗಳಲ್ಲಿ ಮಕ್ಕಳಿಗೆ ಮೊದಲು ನಾವು ಭಾರತೀಯರು ಅನಂತರ ಕನ್ನಡಿಗರು ಎಂಬುದನ್ನು ರಾಷ್ಟ್ರ, ನಾಡು–ನುಡಿ ಪ್ರಜ್ಞೆಯನ್ನು ಕವನದ ಮೂಲಕ ಚೆನ್ನಾಗಿ ಚಿತ್ರಿಸಿದ್ದಾರೆ. ನಾಡು–ನುಡಿ–ದೇಶಾಭಿಮಾನವನ್ನು ಜಾಗೃತಗೊಳಿಸಿದ್ದಾರೆ.

* ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದವರ ಅನುಭವಗಳನ್ನು ಸಿಹಿ–ಕಹಿ ಅನುಭವಗಳನ್ನು ಕವನಗಳ ಮೂಲಕ ಯುವಪೀಳಿಗೆಗೆ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.ಹಸಿವು ಮತ್ತು ಸ್ವಾತಂತ್ರ್ಯ ಇವುಗಳ ನಡುವೆ ದೇಶಾಭಿಮಾನವನ್ನು ತುಂಬಲು ಪ್ರಯತ್ನಿಸಿದ್ದಾರೆ.

ನವೋದಯ ಕಾವ್ಯಗಳಲ್ಲಿ ಮೂಡಿಬಂದ ದೇಶಭಕ್ತಿ, ರಾಷ್ಟ್ರೀಯತೆ, ನಾಡುನುಡಿ ಕುರಿತು ಕನ್ನಡ ವಿಮರ್ಶಾಲೋಕ ಸಾಕಷ್ಟು ಚರ್ಚಿಸಿದೆ ಕನ್ನಡದ ಲಿಖಿತ ಕಾವ್ಯ ಪರಂಪರೆಯಲ್ಲಿ ಬಿ.ಎಂ. ಶ್ರೀಯವರ ಕನ್ನಡ ಬಾವುಟ, ಕುವೆಂಪು ಅವರ "ಪಾಂಚಜನ್ಯ"ಪ್ರಕಟಗೊಂಡ ಮೇಲೆ ಸ್ವಾತಂತ್ರ್ಯದ ಸಂಭ್ರಮ ತಲ್ಲಣಗಳು ನಾಡು ನುಡಿ ಕುರಿತ ವಿಚಾರಗಳ ಕುರಿತು ಈ ಮೂಲಕ ಚರ್ಚಿಸಲಾಗಿದೆ.

ನವೋದಯ ಸಾಹಿತ್ಯದ ಎಲ್ಲಾ ಕವಿಗಳ ಕೃತಿಗಳಲ್ಲಿ ಮೂಡಿಬಂದ ದೇಶ ಪ್ರೇಮದ ಕಾವ್ಯಗಳನ್ನು ಅಧ್ಯಯನ ಮಾಡುವುದರ ಮೂಲಕ ಅಂದಿನ ಸಂದರ್ಭದ ಪಾರತಂತ್ರದ ತೊಳಲಾಟ, ಸ್ವಾತಂತ್ರ್ಯದ ಸಂಭ್ರಮಗಳು ಕಾವ್ಯಕ್ಕೊಂದು ವಿಸ್ತಾರತೆಯನ್ನು ತಂದುಕೊಡುವ ಅನಿವಾರ್ಯತೆ ಇದೆ. ನವೋದಯ ಕಾವ್ಯ, ರಾಷ್ಟ್ರೀಯತೆ ದೇಶಪ್ರೇಮಗಳ ಜೊತೆಗೆ, ಪ್ರೀತಿ ಪ್ರಕೃತಿ, ಅನುರಾಗದಂತ ನವಿರಾದ ಭಾವನೆಗಳ ಮೂಲಕ ಅಧ್ಯಯನ ಮಾಡಲಾಗಿದೆ. .

ಕನ್ನಡಿಗರು ತಮ್ಮ ಹೆಂಡತಿಯನ್ನು ತಮ್ಮ ತಾಯಿಯನ್ನು ಪ್ರೀತಿಸುವಂತೆ ದೇಶ, ಭಾಷೆಯನ್ನು ಪ್ರೀತಿಸಬೇಕು ಅಂದರೇನೇ ಅದು ಸುಂದರವಾಗಿ ಬೆಳೆಯುತ್ತದೆ. . ದೇಶಪ್ರೇಮವು ಎಲ್ಲವನ್ನು ಬೆಳೆಸುತ್ತದೆ, ಯಾವುದನ್ನು ಅಳಿಸುವುದಿಲ್ಲ, ನಾಡು-ನುಡಿಯ ಪ್ರಜ್ಞೆಯನ್ನು ತಂದುಕೊಳ್ಳಲು, ಬೆಳೆಸಿಕೊಳ್ಳಲು ಈಗ ಎಲ್ಲರೂ ಮುಂದಾಗಬೇಕಾಗಿದೆ. ಪ್ರಸ್ತುತ "ನವೋದಯ ಕಾವ್ಯಗಳಲ್ಲಿ ದೇಶಭಕ್ತಿಯ ವಿನ್ಯಾಸಗಳು" ವಿಷಯದಲ್ಲಿ ಸಂಶೋಧನೆ ಕೈಗೊಂಡು ವಿಶ್ಲೇಷಣಾತ್ಮಕ ಅಧ್ಯಯನ ಮಾಡಿದ್ದೇನೆ. ಬಹುಮುಖ್ಯವಾಗಿ ದೇಶಪ್ರೇಮ, ರಾಷ್ಟ್ರೀಯತೆಗೆ ಸಂಬಂಧಸಿದ ಕಾವ್ಯಗಳನ್ನು ಅಧ್ಯಯನಕ್ಕೊಳಪಡಿಸಿದ್ದೇನೆ. ಈ ಕುರಿತಾಗಿರುವ ಕಾವ್ಯಗಳನ್ನು ಇನ್ನಷ್ಟು ಅಂತರ್ ಶಿಸ್ತಿಯ ಅಧ್ಯಯನಕ್ಕೆ ಒಳಪಡಿಸಿದರೆ ಇನ್ನೂ ಹಲವಾರು ಅಧ್ಯಯನದ ಸಾಧ್ಯತೆಗಳು ವಿಷಯದ ಒಡಲಾಳದಲ್ಲಿ ಕಂಡುಬರುತ್ತದೆ.

ಸಂಶೋಧನೆಗೆ ಕೊನೆಯಿಲ್ಲ ನಿರಂತರ ಸಾಗುವ ಪ್ರಕ್ರಿಯೆ. ಈ ಕ್ಷೇತ್ರದ ಹರವು ತುಂಬಾ ವಿಸ್ತಾರವಾದುದು. ಅದು ಅಲ್ಪವಿರಾಮ ಅರ್ಧವಿರಾಮದೊಂದಿಗೆ ಆರಂಭವಾಗಿ ಪೂರ್ಣವಿರಾಮದ ಕಡೆಗೆ ಸಾಗುವ ಪ್ರಕ್ರಿಯೆ. ಪ್ರಮುಖವಾದ ಕೆಲವು ಕವಿಗಳ ಕಾವ್ಯಗಳನ್ನು ವಿಶ್ಲೇಷಣಾತ್ಮಕ ಮಾದರಿಯಲ್ಲಿ ಅಧ್ಯಯನ ಮಾಡಿದ್ದೇನೆ. ನನ್ನ ಅಧ್ಯಯನವೇ ಕೊನೆಯಲ್ಲ.ಕನ್ನಡದಲ್ಲಿ ನವೋದಯ ಕಾವ್ಯಗಳಲ್ಲಿ ಅನೇಕ ಅಧ್ಯಯನಗಳು ನಡೆದಿವೆ. ಇಲ್ಲಿ ಪ್ರಮುಖವಾಗಿ ನವೋದಯ ಕಾವ್ಯ ಸಾಹಿತ್ಯವನ್ನು ದೇಶಪ್ರೇಮದ ಹಿನ್ನೆಲೆಯಲ್ಲಿ ಪರಾಮರ್ಶಿಸಲಾಗಿದೆ. ನವೋದಯ ಕಾವ್ಯದುದ್ದಕ್ಕೂ ಚೆಲ್ಲುವರಿದ ದೇಶಭಕ್ತಿ ವಿನ್ಯಾಸಗಳ ನನ್ನ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿ ಒಳಪಡಿಸಿ ವಿಶ್ಲೇಷಣೆ ಮಾಡಿದ್ದೇನೆ. ನವೋದಯ ಸಂದರ್ಭದ ಕಾವ್ಯಗಳು ದೇಶಕ್ಕೆ ನೀಡಿದ ಆದ್ಯತೆ ಸದಾ ಸ್ಮರಣೀಯ.

## ಅನುಬಂಧ-೧

## ಪ್ರಾಥಮಿಕ ಆಕರಗಳು


೧. ಕಡೆಂಗೋಡ್ಲು ಶಂಕರಭಟ್ಟ : ೧೯೨೧; **ಗಾಂಧೀಸಂದೇಶ,** ಕರ್ನಾಟಕ ಸಭಾ ಗ್ರಂಥಮಾಲೆ, ಮಂಗಳೂರು

೨. ಕಡೆಂಗೋಡ್ಲು ಶಂಕರಭಟ್ಟ: ೧೯೮೩; **ಪತ್ರಪುಷ್ಪ,** ಪ್ರಥಮ ವಿಶ್ವಕನ್ನಡ ಸಮ್ಮೇಳನ, ಮಂಗಳೂರು

೩. ಕಡೆಂಗೋಡ್ಲು ಶಂಕರಭಟ್ಟ: ೧೯೯೭; **ಕಾಣಿಕೆ,** ಬಾಲಸಾಹಿತ್ಯ ಮಂಡಲ, ಬೆಂಗಳೂರು.

೪. ಕುವೆಂಪು : ೧೯೫೪ ; **ಕೋಗಿಲೆ ಮತ್ತು ಸೋವಿಯತ್‌ರಷ್ಯಾ,** ಉದಯ ರವಿ ಪ್ರಕಾಶನ, ವಾಣಿ ವಿಲಾಸಪುರಂ, ಮೈಸೂರು.

೫. ಕುವೆಂಪು : ೧೯೬೩; **'ಕೃತ್ತಿಕೆ'** ಉದಯ ರವಿ ಪ್ರಕಾಶನ, ವಾಣಿ ವಿಲಾಸಪುರಂ, ಮೈಸೂರು.

೬. ಕುವೆಂಪು : ೧೯೬೩; **'ಪಾಂಚಜನ್ಯ',** ಉದಯ ರವಿ ಪ್ರಕಾಶನ, ವಾಣಿ ವಿಲಾಸಪುರಂ, ಮೈಸೂರು.

೭. ಕುವೆಂಪು (ಸಂ): ೧೯೬೬, **ಕನ್ನಡದ ದೀಕ್ಷೆ,** ಕ.ವಿ.ವಿ. ಕುವೆಂಪುರವರಿಗೆ ಗೌರವ ಡಾಕ್ಟರೇಟ ಪದವಿ ಪ್ರಧಾನ ಮಾಡಿದ ನಿಮಿತ್ತ/ಕರ್ಚು ಪ್ರಿಂಟಿಂಗ್ ವರ್ಕ್ಸ್ ಧಾರವಾಡ.

೮. ಕುವೆಂಪು : ೧೯೮೭; **ಮಂತ್ರಾಕ್ಷತೆ,** ಉದಯ ರವಿ ಪ್ರಕಾಶನ, ವಾಣಿ ವಿಲಾಸಪುರಂ, ಮೈಸೂರು.

೯. ಕೃಷ್ಣಕುಮಾರ ಸಿ.ಪಿ. (ಸಂ) :೧೯೮೪; **ಆಯ್ದ ಕುವೆಂಪು ಕವನಗಳು,** ಬಾಪ್ಕೊ ಪ್ರಕಾಶನ, ಬೆಂಗಳೂರು.

೧೦. ಗೋಪಾಲಕೃಷ್ಣ ಅಡಿಗ: ೨೦೧೦; **ಸಮಗ್ರ ಕಾವ್ಯ,** ಸಪ್ನ ಬುಕ್ ಹೌಸ್, ಗಾಂಧೀನಗರ, ಬೆಂಗಳೂರು.

೧೧. ಗೋವಿಂದ ಪೈ: ೧೯೬೨; **ಗಿಳಿವಿಂಡು,** ಕರ್ನಾಟಕ ಸಂಘ ಸೆಂಟ್ರಲ್ ಕಾಲೇಜು, ಬೆಂಗಳೂರು.

೧೨. ಚನ್ನವೀರ ಕಣವಿ: ೧೯೯೬; **ಕಣವಿ ಸಮಗ್ರ ಕಾವ್ಯ,** ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು, ರುದ್ರಾಕ್ಷಿಮಠ ಬೆಳಗಾವಿ.

೧೩. ಜಗದೀಶ ಮಂಗಳೂರಮಠ (ಸಂ): ೨೦೦೦; **ಹಚ್ಚೇವು ಕನ್ನಡದ ದೀಪ,** ಡಾ.ಡಿ.ಎಸ್. ಕರ್ಕಿಯವರ ಸಮಗ್ರ ಕಾವ್ಯ, ಸಾಹಿತ್ಯ ಪ್ರಕಾಶನ ಹುಬ್ಬಳ್ಳಿ.

೧೪. ಜ್ಯೋತಿ ಹೊಸೂರ ಮತ್ತು ಬಸವರಾಜ ಮಲಶೆಟ್ಟಿ ಮತ್ತು ನಿಂಗಣ್ಣ ಸಣ್ಣಕ್ಕಿ (ಸಂ); ೧೯೮೨, **ಬೆಳವಲ** (ಡಾ. ಬೆಟಗೇರಿ ಕೃಷ್ಣಶರ್ಮರ ಸಂಭಾವನಾ ಗ್ರಂಥ ಕಾಲಗತಿ ಪ್ರಕಾಶನ ರಾಯಭಾಗ (ಜಿ॥ ಬೆಳಗಾವಿ)

೧೫. ಧಾರವಾಡಕರ ರಾ.ಯ. (ಸಂ) : ೧೯೮೩; **ಶಾಂತಕವಿಗಳ ಮೂರು ಕೀರ್ತನಗಳು,** ಶ್ರೀ ಶಂಕರ ಪಾಟೀಲ ಜಾಗೃತಿ ಪ್ರಿಂಟರ್ಸ್–ಹುಬ್ಬಳ್ಳಿ–ಧಾರವಾಡ.

೧೬. ದಿನಕರ ದೇಸಾಯಿ : ೧೯೪೯; **ರೈತರ ಹಾಡುಗಳು,** ರೈತರ ಕೂಟ ಉತ್ತರ ಕನ್ನಡ ಜಿಲ್ಲೆ.

೧೭. ದಿನಕರ ದೇಸಾಯಿ : ೧೯೫೦; **ಕವನಸಂಗ್ರಹ,** ಸಾಧನ ಮುದ್ರಣಾಲಯ, ಧಾರವಾಡ.

೧೮. ದಿನಕರ ದೇಸಾಯಿ : ೧೯೫೮; **ಹೂಗೊಂಚಲು,** ಕೆನರಾ ವೆಲ್‌ಫರ್ ಟ್ರಸ್ಟಿನ ಜನತಾ ಪ್ರಕಾಶನ, ಅಂಕೋಲಾ.

೧೯. ದಿನಕರ ದೇಸಾಯಿ : ೧೯೭೮; **ದಿನಕರನ ಚೌಪದಿ,** ಕೆನರಾ ವೆಲ್‌ಫರ್ ಟ್ರಸ್ಟ್, ಅಂಕೋಲಾ.

೨೦. ದಿನಕರ ದೇಸಾಯಿ : ೧೯೮೩; **ದಾಸಾಳ,** ಕೆನರಾ ವೆಲ್‌ಫರ್ ಟ್ರಸ್ಟ್, ಉತ್ತರ ಕನ್ನಡ ಜಿಲ್ಲೆ ಅಂಕೋಲಾ

೨೧. ನರಸಿಂಹಸ್ವಾಮಿ ಕೆ.ಎಸ್.: ೨೦೧೨; **ಮಲ್ಲಿಗೆಯ ಮಾಲೆ,** ಸಮಗ್ರ ಕವನ ಸಂಕಲನ, ವಸಂತ ಪ್ರಕಾಶನ, ಬೆಂಗಳೂರು.

೨೨. ನರಸಿಂಹಾಚಾರ್ಯ ಪು.ತಿ.: ೧೯೯೮; **ಪು.ತಿ.ನ. ಸಮಗ್ರ ಕವನಗಳು,** ಲಿಪಿ ಪ್ರಕಾಶನ, ಬ್ಯೂಗಲ್ ರಾಕ್ ರಸ್ತೆ ಬೆಂಗಳೂರು.

೨೩. ನಿಸಾರ್ ಅಹಮದ್ ಕೆ.ಎಸ್. : ೧೯೯೧; **ನಿತ್ಯೋತ್ಸವ,** ಪುಸ್ತಕಾಲಯ, ಬೆಂಗಳೂರು.

೨೪. ನಿಸಾರ್ ಅಹಮದ್ ಕೆ.ಎಸ್.: ೧೯೯೫; **ಸಮಗ್ರ ಕವಿತೆಗಳು,** ಸಿರಿಗೆರೆ, ಚಿತ್ರದುರ್ಗ

೨೫. ನಿರುಪಮಾ ಲಲಿತಾ ಶಾಸ್ತ್ರಿ: ೨೦೧೨, **ರಾಷ್ಟ್ರೀಯತೆ ಮತ್ತು ಕಾವ್ಯ,** ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು.

೨೬. ಪರಡ್ಡಿ ಎಸ್.ಎಸ್, ೨೦೧೧, **ಡಿ.ಎಸ್. ಕರ್ಕಿ ಸಮಗ್ರ ಸಾಹಿತ್ಯ ಅಧ್ಯಯನ,** ರೂಪ ಪ್ರಕಾಶನ, ಮೈಸೂರು.

೨೭. ಪರಮೇಶ್ವರಭಟ್ಟ ಎಸ್.ವ್ಹಿ.: ೧೯೬೫; **ಅಂಚೆಪೆಟ್ಟಿಗೆ,** ಸರಸ ಸಾಹಿತ್ಯ ಪ್ರಕಾಶನ, ಮೈಸೂರು.

೨೮. ಪರಮೇಶ್ವರಭಟ್ಟ ಎಸ್.ವ್ಹಿ.: ೧೯೭೦; . **ಕೃಷ್ಣಮೇಘ,** ಉಷಾ ಸಾಹಿತ್ಯ ಮಾಲೆ, ಮೈಸೂರು.

೨೯. ಪರಮೇಶ್ವರಭಟ್ಟ ಎಸ್.ವ್ಹಿ.: ೧೯೯೦; **ಸಂಜೆಮಲ್ಲಿಗೆ,** ಕೃಷ್ಣಮೂರ್ತಿಪುರಂ, ಮೈಸೂರು.

೩೦. ಪಂಚಾಕ್ಷರಿ ಹಿರೇಮಠ : ೨೦೦೩; **ಸಮಗ್ರ ಕಾವ್ಯ ಸಂಪುಟ–೧,** ಪ್ರೀಯದರ್ಶಿನಿ ಪ್ರಕಾಶನ, ಬೆಂಗಳೂರು.

೩೧. ಪಂಚಾಕ್ಷರಿ ಹಿರೇಮಠ : ೨೦೦೬; **ಸಮಗ್ರ ಕಾವ್ಯ ಸಂಪುಟ-೨**, ಮೋಹಕ ಬೈಂಡ, ರಾಜಾಜಿನಗರ, ಬೆಂಗಳೂರು.

೩೨. ಪಂಜೆರಾಮರಾಯ (ಸಂ) : ೧೯೭೩; **ಪಂಜೆಯವರ ಕೃತಿಗಳು ಪದ್ಯಗಳು ಸಂಪುಟ-೧**, ಓರಿಯಂಟಲ್ ಲಾಂಗ್‌ಮನ್ ಲಿಮಿಟೆಡ್ ಮುಂಬಯಿ, ಕಲ್ಕತ್ತ, ಬೆಂಗಳೂರು-ಮದರಾಸ್-ನವದೆಹಲಿ

೩೩. ಬುದ್ದಣ್ಣ ಹಿಂಗಮಿರೆ (ಸಂ) : ೧೯೮೭; **ಕರ್ಕಿಯವರ ಆಯ್ದ ಕವನಗಳು**, ಆಕಳವಾಡಿ ಬುಕ್ ಡಿಪೊ ವಿಜಯ ರೋಡ ಧಾರವಾಡ.

೩೪. ಬೆಟಗೇರಿ ಕೃಷ್ಣಶರ್ಮ(ಆನಂದಕಂದ) : ೧೯೫೧; **ಕಾರಹುಣ್ಣಿವೆ**, ಶರತ್ ಪ್ರಕಾಶನ ಮಂದಿರ ಧಾರವಾಡ.

೩೫. ಬೆಟಗೇರಿ ಕೃಷ್ಣಶರ್ಮ(ಆನಂದಕಂದ) :೧೯೭೨; **ಉತ್ಸಾಹಗಾಥಾ** ಪುರಂದರ ಪ್ರಕಟನಾಲಯ, ಧಾರವಾಡ.

೩೬. ಬೇಂದ್ರೆ ದ.ರಾ.: ೧೯೫೧; **ಗಂಗಾವತರಣ**, ಮನೋಹರ ಗ್ರಂಥ ಮಾಲಾ ಧಾರವಾಡ.

೩೭. ಬೇಂದ್ರೆ ದ.ರಾ.:೧೯೫೧; . **ಗರಿ**, ಮನೋಹರ ಗ್ರಂಥ ಮಾಲಾ ಧಾರವಾಡ.

೩೮. ಬೇಂದ್ರೆ ದ.ರಾ.: ೧೯೫೯;. **ಸಂಚಯ**, ಸಮಾಜ ಪುಸ್ತಕಾಲಯ ಧಾರವಾಡ

೩೯. ಬೇಂದ್ರೆ ದ.ರಾ.: ೧೯೬೨; **ಯಕ್ಷ ಯಕ್ಷಿ**, ಮನೋಹರ ಘಾಣೇಕರ, ಪ್ರತಿಭಾ ಗ್ರಂಥಮಾಲೆ ಧಾರವಾಡ

೪೦. ಬೇಂದ್ರೆ ದ.ರಾ. :೧೯೬೮; **ಅರಳು ಮರಳು**, ಶ್ರೀಮಾತಾ ಪ್ರಕಾಶನ, ಸಾಧನಕೇರಿ, ಧಾರವಾಡ.

೪೧. ಬೇಂದ್ರೆ ದ.ರಾ.: ೧೯೭೦; **ಬಾಹತ್ತರ**, ಗೀತಾಬುಕ್ ಹೌಸ್ ಮೈಸೂರು.

೪೨. ಬೇಂದ್ರೆ ದ.ರಾ. : ೧೯೭೦; **ವಿನಯ**, ಗೀತಾ ಬುಕ್ ಹೌಸ್ ಮೈಸೂರು.

೪೩. ಬೇಂದ್ರೆ ದ.ರಾ.: ೧೯೮೨; **ನಾದಲೀಲೆ**, ಸಮಾಜ ಪುಸ್ತಕಾಲಯ, ಧಾರವಾಡ.

೪೪. ಮಾಸ್ತಿ ವೆಂಕಟೇಶ ಅಯ್ಯಂಗಾರ್: ೧೯೩೫; **ಮಲಾರ**, ಡಿ ಸುಬ್ರಹ್ಮಣ್ಯ, ಬೆಂಗಳೂರು.

೪೫. ಮುಗಳಿ ರಂ.ಶ್ರೀ: ೧೯೪೦; **ಬಾಸಿಗ**, ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ.

೪೬. ಮುಗಳಿ ರಂ.ಶ್ರೀ: ೧೯೫೧; **ಅಪಾರ ಕರುಣೆ**, ಕಾವ್ಯ ಪ್ರಕಾಶನ ಸಮಿತಿ, ಸಾಂಗಲಿ.

೪೭. ರಾಜರತ್ನಂ ಜಿ.ಪಿ. :೧೯೬೯; **ಶಾಂತಿ**, ಮಲ್ಲೇಶ್ವರಂ ಬೆಂಗಳೂರು.

೪೮. ರಾಜರತ್ನಂ ಜಿ.ಪಿ. : ೧೯೭೧; **ಜಪಾನಿನ ಹಿಮಗಿರಿ ಮತ್ತು ಇತರ ಕವನಗಳು**, ಮಲ್ಲೇಶ್ವರಂ ಬೆಂಗಳೂರು.

೪೯. ರಾಜರತ್ನಂ ಜಿ.ಪಿ.: ೨೦೧೨; **ರತ್ನನ ಪದಗಳು ನಾಗನ ಪದಗಳು**, ಸಪ್ನಬುಕ್ ಹೌಸ್, ಬೆಂಗಳೂರು

೫೦. ಸೀತಾರಾಮಯ್ಯ ವಿ.: ೧೯೯೦; **ಸ್ನೇಹ-ವಿಶ್ವಾಸ (ಸಮಗ್ರ ಕಾವ್ಯ ಸಂಪುಟ)** ವಿ.ಸೀ. ಸಂಪದ (ವಿ.ಸೀ ಸಂಸ್ಮರಣ ವೇದಿಕೆ) ಅಶೋಕ ನಗರ, ಬೆಂಗಳೂರು.

೫೧. ಸೀತಾರಾಮಯ್ಯ ವಿ. : ೨೦೧೦; **ಸಮಗ್ರ ಕಾವ್ಯ ಸಂಪುಟ-೧,** ಕನ್ನಡ ಸಂಸ್ಕೃತಿ ಇಲಾಖೆ, ಕನ್ನಡ ಜೆ.ಸಿ. ರಸ್ತೆ ಬೆಂಗಳೂರು.

೫೨. ಸಿದ್ದಯ್ಯ ಪುರಾಣಿಕ (ಕಾವ್ಯಾನಂದ): ೧೯೬೭;. **ಕರುಣಾ ಶ್ರಾವಣ,** ಜನಪದ ಸಾಹಿತ್ಯ ಅಕಾಡೆಮಿ, ೬ನೇ ಮೇನ್, ಸರಸ್ವತಿಪುರಂ, ಮೈಸೂರು.

೫೩. ಸಿದ್ದಯ್ಯ ಪುರಾಣಿಕ (ಕಾವ್ಯಾನಂದ): ೧೯೬೯; **ಮೊದಲು ಮಾನವನಾಗು,** ತಾರಾಗ್ರಂಥ ಪ್ರಕಾಶನ ಧಾರವಾಡ.

೫೪. ಸಿದ್ದಯ್ಯ ಪುರಾಣಿಕ (ಕಾವ್ಯಾನಂದ) : ೧೯೮೭; **ಚರಗ,** ಶ್ರೀಗಿರಿ ಪ್ರಕಾಶನ, ೪/೫ ಎ, ಅಲಿ ಅಸ್ಕರ್ ರೋಡ್ ಬೆಂಗಳೂರು.

೫೫. ಸಿದ್ದಯ್ಯ ಪುರಾಣಿಕ (ಕಾವ್ಯಾನಂದ): ೧೯೯೧; **ಮರುಳ ಸಿದ್ದನ ಕಂತೆ,** ಶ್ರೀಮತಿ ಗಿರಿಜಾದೇವಿ ಪುರಾಣಿಕ, ಶ್ರೀಗಿರಿ ಪ್ರಕಾಶನ ಕುಡಿ-೨, ಬೆಂಗಳೂರು.

೫೬. ಶ್ರೀಕಂಠಯ್ಯ ಬಿ.ಎಂ. (ಸಂ): ೧೯೯೫; **ಕನ್ನಡ ಬಾವುಟ,** ಕನ್ನಡ ಸಾಹಿತ್ಯ ಪರಿಷತ್ತು ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ ಬೆಂಗಳೂರು.

೫೭. ಶಿವರುದ್ರಪ್ಪ ಜಿ.ಎಸ್.: ೧೯೯೧; **ಜಿ.ಎಸ್. ಶಿವರುದ್ರಪ್ಪನವರ ಸಮಗ್ರಕಾವ್ಯ,** ಸ್ನೇಹ ಪ್ರಕಾಶನ, ಬೆಂಗಳೂರು.

೫೮. ಶಿವರಾಮ ಕಾರಂತ: ೧೯೯೦, ಸೀಳ್ಗವನಗಳು, ಎಸಬಿಎಸ್ ಪಬ್ಲೀಷರ್ಸ ಡಿಸ್ಟ್ರಿಬ್ಯೂಟರ್ಸ್ ಬೆಂಗಳೂರು.

# ಅನುಬಂಧ-೨

## ಪರಾಮರ್ಶನ ಗ್ರಂಥಗಳು

೧. ಅನಂತನಾರಾಯಣ ಎಸ್: ೧೯೯೧, **ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ**, ಗಂಗಾತರಂಗ, ಸರಸ್ವತಿಪ್ಮರಂ ಮೈಸೂರು.

೨. ಅಯ್ಯನಗೌಡ್ರ ಎಸ್.ವಿ. ೧೯೯೯, **ಕೆ.ಎಸ್.ನಿಸಾರ ಅಹಮ್ಮದರವರ ಕಾವ್ಯ ಸಾಹಿತ್ಯ**, ಪ್ರಸಾರಾಂಗ ಕವಿವಿ ಧಾರವಾಡ

೩. ಅರವಿಂದ ಮಾಲಗತ್ತಿ (ಪ್ರಸಂ) : ೧೯೯೯; **ಕುವೆಂಪು ಕೃತಿ ವಿಮರ್ಶೆ**, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಮಾನಸ ಗಂಗೋತ್ರಿ ಮೈಸೂರು.

೪. ಅಶೋಕ ಟಿ.ಪಿ. (ಸಂ): ೧೯೮೬; **ಸಾಹಿತ್ಯ ಸಂಪರ್ಕ ವಿಮರ್ಶೆ**, ಅಕ್ಷರ ಪ್ರಕಾಶನ, ಸಾಗರ.

೫. ಆಲೂರು ವೆಂಕಟರಾಯರು: ೧೯೯೯; **ಕರ್ನಾಟಕತ್ವದ ವಿಕಾಸ**, ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ರಸ್ತೆ ಚಾಮರಾಜಪೇಟೆ, ಬೆಂಗಳೂರು.

೬. ಆಮೂರ ಜಿ.ಎಸ್.: ೨೦೧೬; **ಒಮ್ಮುಖ**, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ ಕಯ್ಯಾರ ಕಿಞ್ಞಣ್ಣರೈ: ೧೯೮೯; **ಮಹಾಕವಿ ಗೋವಿಂದ ಪೈ**, ಆಕಳವಾಡಿ ಬುಕ್ ಡಿಪೋ, ಧಾರವಾಡ.

೭. ಆಮೂರ ಜಿ.ಎಸ್. ಮತ್ತು ಜೋಶಿ ಜಿ.ಡಿ (ಸಂ): ೨೦೧೮, **ಹುಯಿಲಗೋಳ ನಾರಾಯಣರಾವ್ ಸಾಹಿತ್ಯ** ಸಂಪುಟ-೩,ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು.

೮. ಕಸ್ತೂರಿ ನೀಲತ್ತಹಳ್ಳಿ; ೨೦೦೮ ; **ಗಾಂಧಿ ತತ್ವ ಚಿಂತನೆ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೯. ಕೀರ್ತಿನಾಥ ಕುರ್ತಕೋಟಿ; ೧೯೮೩, **ಯುಗಧರ್ಮ ಮತ್ತು ಸಾಹಿತ್ಯ ದರ್ಶನ**; ವಿಶ್ವಕನ್ನಡ ಸಮ್ಮೇಳನ, ನೃಪತುಂಗ ರಸ್ತೆ ಬೆಂಗಳೂರು.

೧೦. ಕೀರ್ತಿನಾಥ ಕುರ್ತಕೋಟಿ:೨೦೧೫; **ನವ್ಯ ಕಾವ್ಯ ಪ್ರಯೋಗ** (ಸಾಹಿತ್ಯಿಕ ವಿಮರ್ಶಾತ್ಮಕ ವಿವೇಚನೆ) ಕುರ್ತಕೋಟಿ ಮೆಮೋರಿಯಲ್ ಟ್ರಸ್ಟ್ ದೇಸಾಯಿ ಕಾಲನಿ, ಯುನಿವರ್ಸಿಟಿ ಕ್ರಾಸ್ ಧಾರವಾಡ.

೧೧. ಕುವೆಂಪು : ೧೯೮೯; **ಸ್ವಾಮಿ ವಿವೇಕಾನಂದ**, ಶ್ರೀರಾಮಕೃಷ್ಣ ಆಶ್ರಮ, ಯಾದವಗಿರಿ ಮೈಸೂರು.

೧೨. ಕೃಷ್ಣಮೂರ್ತಿ ವೈ.ಎಸ್. ಮತ್ತು ಹೆಚ್.ಪಿ. ಅನುರಾಧ : ೧೯೯೯; **ನಾಡಗೀತೆಗಳು**, ಹಂಸಧ್ವನಿ ಪ್ರಕಾಶನ, ಕಾಟನ್ ಪೇಟೆ ಮುಖ್ಯ ರಸ್ತೆ, ಬೆಂಗಳೂರು.

೧೩. ಗೋಪಾಲ ಕೃಷ್ಣ ಅಡಿಗ: ೨೦೧೦, **ಸಮಗ್ರ ಕಾವ್ಯ**, ಸಪ್ನಬುಕ್ ಹೌಸ್, ಗಾಂಧಿನಗರ, ಬೆಂಗಳೂರು.

೧೪. ಗೌರೀಶ ಕಾಯ್ಕಿಣಿ: ೧೯೯೯, **ಸ್ವಾತಂತ್ರೋತ್ತರ ವಿಚಾರಸಾಹಿತ್ಯ**, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೧೫. ಗೌರೀಶ ಕಾಯ್ಕಿಣಿ: ೨೦೧೨; **ಮಾನವ್ಯ ಕವಿ,(ಬಿ.ಎ. ಸನದಿಯವರ ಕಾವ್ಯಾವಲೋಕನ)** ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೆಟ್ ಲಿಮಿಟೆಡ್, ಬೆಂಗಳೂರು.

೧೬. ಚಂದ್ರಶೇಖರ ಪಾಟೀಲ: ೨೦೧೧; **ಶಾಲ್ಮಲಾ ನನ್ನ ಶಾಲ್ಮಲಾ**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು.

೧೭. ಚೆನ್ನವೀರ ಕಣವಿ ಮತ್ತು ಕೆ, ರಾಘವೇಂದ್ರರಾವ್ (ಸಂ): ೧೯೭೬; **ಆಧುನಿಕ ಕನ್ನಡ ಕಾವ್ಯ**, ಕನ್ನಡ ಅಧ್ಯಯನ ಪೀಠ,ಪಠ್ಯ ಪುಸ್ತಕ ನಿರ್ದೇಶನಾಲಯ, ಧಾರವಾಡ

೧೮. ಧನವಂತ ಹಾಜವಗೋಳ : ೨೦೧೦; **ಸಾಹಿತ್ಯ ವಿಮರ್ಶೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಜೆ.ಸಿ.ನಗರ ಬೆಂಗಳೂರು.

೧೯. ನಾವಡ ಎ.ವಿ.: ೧೯೯೭; **ವಾಙ್ಮಯ ತಪಸ್ವಿ ಕಡೆಂಗೋಡ್ಲು ಶಂಕರಭಟ್ಟ ಸ್ಮಾರಕಗ್ರಂಥ**, ಡಿ.ವಿ.ಕೆ, ಮೂರ್ತಿ ಕೃಷ್ಣಮೂರ್ತಿಪುರಂ, ಮೈಸೂರು.

೨೦. ನಾಗಭೂಷಣ ಓ.ಎಲ್.: ೧೯೯೮; **ವಿಮರ್ಶೆಯ ಪರಿಭಾಷೆ**, ಅಂಕಿತ ಪುಸ್ತಕ ಪ್ರಕಾಶನ,ಬೆಂಗಳೂರು.

೨೧. ಪ್ರಭಾವತಿ ಹಲಕುರ್ಕಿ, ೨೦೧೧ 'ಡಾ. ಪಂಚಾಕ್ಷರಿ ಹಿರೇಮಠ ಜೀವನ ಹಾಗೂ ಸ್ವತಂತ್ರ ಕವಿತೆಗಳ ದರ್ಶನ", ಮಲ್ಲೇಂದ್ರ ಶಿರೋಳ, ಕೀರ್ತಿಶ್ರೀ ಪ್ರಕಾಶನ, ಧಾರವಾಡ

೨೨. ಪಾಟೀಲ ಪುಟ್ಟಪ್ಪ ಡಾ. :೨೦೦೩; **ಕನ್ನಡದ ಕಂಪು**, ಸಾಹಿತ್ಯ ಪ್ರಕಾಶನ, ಸಿಟಿಕ್ಲಿನಿಕ್ ಸಂಕೀರ್ಣ, ದಾಜಿಬಾನಪೇಟೆ ಹುಬ್ಬಳ್ಳಿ.

೨೩. ಪಾಟೀಲ ಪುಟ್ಟಪ್ಪನಾಡೋಜ: ೨೦೦೭; **ನಾಡುನುಡಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

೨೪. ಬರಗೂರು ರಾಮಚಂದ್ರಪ್ಪ:೨೦೦೭; **ಕನ್ನಡ ಪ್ರಜ್ಞೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೫. ಬಂಜಗೆರೆ ಜಯಪ್ರಕಾಶ: ೨೦೧೦; **ಕನ್ನಡ ರಾಷ್ಟ್ರೀಯತೆ**, ಕ್ರಾಂತಿಸಿರಿ ಪ್ರಕಾಶನ, ವಿನಾಯಕ ಬಡಾವಣೆ, ೩ನೇ ಹಂತ ವಿಜಯನಗರ ಬೆಂಗಳೂರು.

೨೬. ಬಿರಾದಾರ ಎಂ.ಜಿ. (ಡಾ): ೨೦೦೦; **ಕನ್ನಡ ರಾಷ್ಟ್ರೀಯತೆ**, ಕ್ರಾಂತಿಸಿರಿ ಪ್ರಕಾಶನ, ಬೆಂಗಳೂರು.

೨೭. ಬುದ್ದಣ್ಣ ಹಿಂಗಮಿರೆ (ಸಂ): ೧೯೭೭; **ಇಳಿದು ಬಾ ತಾಯಿ,** ಸಮಾಜ ಪುಸ್ತಕಾಲಯ, ಧಾರವಾಡ.

೨೮. ಭಟ್ ಜಿ.ಎಸ್. (ಸಂ):೧೯೯೩; **ಮಾಸ್ತಿ ಸಾಹಿತ್ಯ ಚಿಂತನ,** ಚೇತನ ಬುಕ್ ಹೌಸ್,ನಾರಾಯಣ ರಸ್ತೆ, ಮೈಸೂರು.

೨೯. ಭಗವತಿ ಎಚ್.ಎಸ್. ಮತ್ತು ಎಸ್.ಎಸ್. ಮೇಲಿನಮನಿ.: ೨೦೧೩; **ಹೊಸಗನ್ನಡ ಸಾಹಿತ್ಯಾವಲೋಕನ,** ವಿದ್ಯಾನಿಧಿ, ಪ್ರಕಾಶನ, ಗದಗ.

೩೦. ಮರುಳಯ್ಯ ಸಾ.ಶಿ. (ಸಂ): ೧೯೮೧; **ಕಾವ್ಯಾನಂದ (ಡಾ.ಸಿದ್ದಯ್ಯ ಪುರಾಣಿಕರ ಅಭಿನಂದನ ಗ್ರಂಥ)** ಸಿದ್ದಯ್ಯ ಪುರಣಿಕರ ಅಭಿನಂದನ ಸಮಿತಿ, ಚಾಮರಾಜಪೇಟೆ, ಬೆಂಗಳೂರು.

೩೧. ಯಲ್ಲಪ್ಪ ಹಲಕುರ್ಕಿ, ೨೦೧೨, **'ತೇರು ಸಾಗುವ ದಾರಿ'** ಶ್ರೀಮತಿ ಲಕ್ಷ್ಮೀಬಾಯಿ ಯ. ಹಲಕುರ್ಕಿ ಶ್ರೀ ವೀರಭದ್ರೇಶ್ವರ ಪ್ರಕಾಶನ, ಧಾರವಾಡ

೩೨. ರಂಗಸ್ವಾಮಿ ಎ. (ಪ್ರ.ಸಂ.) : ೨೦೧೧; **ಸ್ವಾತಂತ್ರ್ಯ ಸಂಗ್ರಾಮ ಮತ್ತು ನವೋದಯ ಕಾಲ,** ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಮಾನಸ ಗಂಗೋತ್ರಿ ಮೈಸೂರು.

೩೩. ರಾಮಸ್ವಾಮಿ. ಎಸ್.ಆರ್. (ಸಂ): ೨೦೧೦; **ಸ್ವಾತಂತ್ರ್ಯೋದಯದ ಮೈಲಿಗಲ್ಲುಗಳು,** ರಾಷ್ಟ್ರೋತ್ಥಾನ ಸಾಹಿತ್ಯ ಬೆಂಗಳೂರು.

೩೪. ರಾಜೇಗೌಡ ಹ.ಕ.(ಸಂ): ೧೯೮೪; **ಕುವೆಂಪು ಸಾಹಿತ್ಯ ಲೋಕ–೨,** ಕುವೆಂಪು ಅಧ್ಯಯನ ಕೇಂದ್ರ ೪೭೭. ೬೪ ನೇ ಅಡ್ಡ ರಸ್ತೆ, ೫ನೇ ಬ್ಲಾಕ್ ರಾಜಾಜಿನಗರ ಬೆಂಗಳೂರು.

೩೫. ವಸಂತಕುಮಾರ ತಾಳ್ತಜೆ ಮತ್ತು ಚಂದ್ರಮೌಳಿ ಕೆ. (ಸಂ): ೧೯೯೬; **ಸೋಪಾನ,** ಬಿ.ಎ. ಸನದಿ ಸನ್ಮಾನ ಸಮಿತಿ, ಬೆಳಗಾವಿ ಅವರ ಪರವಾಗಿ ಸುವರ್ಣಗಿರಿ ಪ್ರಕಾಶನ ಮುಂಬಯಿ.

೩೬. ವಿಷ್ಣು ನಾಯ್ಕ: ೧೯೮೯, **ಕವಿ ಕರ್ಮಯೋಗಿ ದಿನಕರ ದೇಸಾಯಿ,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೩೭. ವೆಂಕಟಸುಬ್ಬಯ್ಯ ಜಿ. ಪ್ರೊ(ಸಂ): ೨೦೧೪; **ಬಿಡಿ ಕವನ ಮತ್ತು ಗದ್ಯ ಸಂಕಲನಗಳ ಸಮಾಲೋಕನ,** ಸಪ್ನಬುಕ್ ಹೌಸ್, ಗಾಂಧಿನಗರ ಬೆಂಗಳೂರು.

೩೮. ವೇಣುಗೋಪಾಲರಾವ್ ಎ.ಎಸ್. (ಡಾ.) : ೧೯೯೧; **ಪು.ತಿ. ನರಸಿಂಹಾಚಾರ್ಯರ ಕಾವ್ಯ ಒಂದು ಅಭ್ಯಾಸ,** ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾ ಪರಿಷತ್ತು ಮೈಸೂರು.

೩೯. ಸನದಿ ಬಿ.ಎ. ಮತ್ತು ಸವಿತಾ ನಾಗಭೂಷಣ (ಸಂ): ೨೦೦೬; **ಸುವರ್ಣ ಕಾವ್ಯ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಜೆ.ಸಿ.ನಗರ ಬೆಂಗಳೂರು.

೪೦. ಸನದಿ ಬಿ.ಎ. (ಸಂ) : ೨೦೧೦; ಭಾರತ **ಸ್ವಾತಂತ್ರ್ಯ ಗಾಯತ್ರಿ,** ಸಾಹಿತ್ಯ

ಅಕಾಡೆಮಿ ನವದೆಹಲಿ.

೪೧. ಸಿದ್ದಯ್ಯ ಪುರಾಣಿಕ: ೨೦೦೮; **ಸಮಗ್ರ ಕಾವ್ಯ,** ಶ್ರೀಗಿರಿ ಪ್ರಕಾಶನ, ಬೆಂಗಳೂರು.

೪೨. ಸಿದ್ದಲಿಂಗ ಪಟ್ಟಣಶೆಟ್ಟಿ: ೧೯೯೬; **ಸಾಲಿರಾಮಚಂದ್ರರಾಯರ ಸಮಗ್ರ ಕಾವ್ಯ,** ಕನ್ನಡ ಪುಸ್ತಕ ಪ್ರಾಧಿಕಾರ, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು.

೪೩. ಸೂರ್ಯನಾಥ ಕಾಮತ್, ೧೯೮೦, 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ತೃತೀಯ ಸಂಪುಟ ಗೀತಾಬುಕ್ ಹೌಸ್ ಮೈಸೂರು.

೪೪. ಶಂಕರ ನಾರಾಯಣರಾವ್ ಎನ್.ಪಿ.: ೨೦೧೪; **ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು (ರಾಷ್ಟ್ರೀಯ ಚಳುವಳಿಯ ಸಮಗ್ರ ಪರಿಚಯ)** ನವಕರ್ನಾಟಕ ಪ್ರಕಾಶನ, ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೪೫. ಶಂಕರನಾರಾಯಣರಾವ್, ೧೯೯೧,**ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು,** ನವಕರ್ನಾಟಕ ಪ್ರಕಾಶನ, ಬೆಂಗಳೂರು

೪೬. ಶಾಸ್ತ್ರಿ ಪಿ.ವಿ. (ಕಿಬ್ಬಳ್ಳಿ): ೧೯೯೧; **ಸಾಹಿತ್ಯದ ಪ್ರಕಾರಗಳು** ಪ್ರತಿಭಾ ಗ್ರಂಥಮಾಲೆ, ಶಿವಾಜಿ ಬೀದಿ, ಧಾರವಾಡ.

೪೭. ಶಿವರುದ್ರಪ್ಪ ಜಿ.ಎಸ್. (ಸಂ) : ೧೯೭೬; **ನವೋದಯ,** ಶರಥ್ ಪ್ರಕಾಶನ, ಸರಸ್ವತಿಪುರಂ ಮೈಸೂರು.

೪೮. ಶಿವರುದ್ರಪ್ಪ ಜಿ.ಎಸ್. (ಸಂ): ೧೯೭೬; **ಸ್ವಾತಂತ್ರ್ಯ ಚಳುವಳಿ ಕನ್ನಡ ಸಾಹಿತ್ಯದಲ್ಲಿ ನವೋದಯ,** ಶರತ್ ಪ್ರಕಾಶನ, ಮೈಸೂರು.

೪೯. ಶಿವರುದ್ರಪ್ಪ ಜಿ.ಎಸ್. (ಸಂ): ೧೯೮೮; **ರಾಷ್ಟ್ರೀಯತೆ, ಮತ್ತು ಆಧುನಿಕ ಕನ್ನಡ ಸಾಹಿತ್ಯ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ನೃಪತುಂಗ ರಸ್ತೆ, ಬೆಂಗಳೂರು.

೫೦. ಶಿವರುದ್ರಪ್ಪ ಜಿ.ಎಸ್. (ಸಂ): ೧೯೮೮; **ಸಾಹಿತ್ಯ ಮತ್ತು ಸಾಮಾಜಿಕಪ್ರಜ್ಞೆ,** ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು.

೫೧. ಶಿವಾನಂದ ಗುಬ್ಬಣ್ಣವರ: ೧೯೯೧, **ಲಾವಣಿ ಸಾಹಿತ್ಯದಲ್ಲಿ ರಾಷ್ಟ್ರೀಯತೆ :** ಅಕ್ಷಯ ಪ್ರಕಾಶನ ಧಾರವಾಡ

೫೨. ಶ್ರೀಕಂಠಯ್ಯ ಬಿ.ಎಂ.: ೧೯೮೫; **ಕನ್ನಡ ಮಾತು ತಲೆ ಎತ್ತುವ ಬಗೆ,** ಕರ್ನಾಟಕ ವಿದ್ಯಾವರ್ಧಕ ಸಂಘ ಧಾರವಾಡ.

೫೩. ಶೇಷಗಿರಿರಾವ್ ಎಲ್. ಎಸ್.: ೨೦೦೬; **ಹೊಸಗನ್ನಡ ಸಾಹಿತ್ಯ ಚರಿತ್ರೆ,** ಅಂಕಿತ ಪ್ರಕಾಶನ, ಬಸವನ ಗುಡಿ, ಬೆಂಗಳೂರು.

೫೪. ಶೇಷಗಿರಿರಾವ್ ಎಲ್.ಎಸ್.: ೧೯೯೬; **ಕನ್ನಡ ಕನ್ನಡಿಗ–ಕರ್ನಾಟಕ,** ಕನ್ನಡ ಶಕ್ತಿ ಕೇಂದ್ರ,

ಮಿಂಚು, ಇವರ ಪರವಾಗಿ ಕನ್ನಡ ಪುಸ್ತಕ ಪ್ರಾಧಿಕಾರ ಚಾಮರಾಜಪೇಟೆ, ಬೆಂಗಳೂರು.

೫೫. ಶೇಷಗಿರಿರಾವ್ ಎಲ್.ಎಸ್., ೧೯೮೪,**ಆಚಾರ್ಯ ಬಿ.ಎಂ.ಶ್ರೀ,** ಸ್ಮಾರಕ ಪ್ರತಿಷ್ಠಾನ ಬೆಂಗಳೂರು.

೫೬. ಶೇಷಗಿರಿರಾವ್ ಎಲ್.ಎಸ್., ೧೯೮೮,**ಬೇಂದ್ರೆಯವರು ಮತ್ತು ನವೋದಯ ಕಾವ್ಯ,** ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೭. ಶ್ರೀನಿವಾಸಯ್ಯ ಹೊ: ೧೯೮೪; **ಕನ್ನಡದ ಕಣ್ವ ಬಿ.ಎಂ. ಶ್ರೀ,** ಬಿ.ಎಂ.ಶ್ರೀ ಪ್ರತಿಷ್ಠಾನ ಬೆಂಗಳೂರು.

೫೮. ಶ್ರೀನಿವಾಸಯ್ಯ ಹೊ.: ೧೯೯೩; **ಸಾಹಿತ್ಯ ಲೋಕದಲ್ಲಿ ಮಹಾತ್ಮಾಗಾಂಧಿ,** ಕರ್ನಾಟಕ ಗಾಂಧಿ, ಸ್ಮಾರಕ ನಿಧಿ, ಕುಮಾರ ಪಾರ್ಕ ಪೂರ್ವ ಬೆಂಗಳೂರು.

## ಅನುಬಂಧ-೩

### ಸಂಶೋಧನಾ ಮಹಾಪ್ರಬಂಧಗಳು

೧. ಜ್ಯೋಶಿ ಜಿ.ಡಿ. ೧೯೯೨, ಹುಯಿಲಗೋಳ ನಾರಾಯಣ ರಾಯರ ಜೀವನ ಹಾಗೂ ಸಾಹಿತ್ಯ, ಕ.ವಿ.ವಿ.ಧಾರವಾಡ

೨. ರಾಜಮ್ಮ ನಾಯಕ, ೧೯೯೨, ಕಡೆಂಗೋಡ್ಲು ಶಂಕರಭಟ್ಟರ ಬದುಕು ಬರಹ-ಒಂದು ಅಧ್ಯಯನ ಕ.ವಿ.ವಿ. ಧಾರವಾಡ

೩. ಸುಭಾಸ್ ಪೋರೆ (ಸಂ); ೧೯೯೯, ಜಿ.ಎಸ್. ಶಿವರುದ್ರಪ್ಪನವರ ಸಾಹಿತ್ಯ ಒಂದು ಅಧ್ಯಯನ, ಕ.ವಿ.ವಿ. ಧಾರವಾಡ

೪. ಶ್ರೀಪಾದಶೆಟ್ಟಿ, ೧೯೮೮, ದಿನಕರ ದೇಸಾಯಿ ಬದುಕು-ಬರಹ, ಕ.ವಿ.ವಿ. ಧಾರವಾಡ

೫. ಮಂದಾಕಿನಿ ಪುರೋಹಿತ: ೧೯೯೧, ಡಾ.ಎಂ.ಕೆ.ಇಂದಿರಾ ಸಮಗ್ರ ಅಧ್ಯಯನ, ಹೇಮಂತ ಸಾಹಿತ್ಯ, ರಾಜಾಜಿನಗರ ಬೆಂಗಳೂರು

# ಅನುಬಂಧ-೪

## ಇಂಗ್ಲೀಷ್ ಗ್ರಂಥಗಳು

Bipin Chandra and others, 1981, India's Struggle for Independence Penguin Books, India Pvt, Ltd. 11 Community Center, Panchsheel Park New Delhi, India

## ಅನುಬಂಧ-೫

ವಿಶ್ವಕೋಶ ಹಾಗೂ ನಿಘಂಟುಗಳು

೧. ಕಿಟೆಲ್ ಎಫ್. (ರೆ), ೧೮೯೪. **A.Kannada English Dictionary** ಬಾಸೆಲ್ ಮಿಶನ್ ಬುಕ್ ಆಂಡ್ಯ್ ಟ್ರಾಕ್ ಡಿಪೋಸ್ಟಿಟೂರಿ- ಮಂಗಳೂರು,

೨. ನಾಯಕ ಹಾ.ಮಾ. (ಸಂ); ೧೯೮೦. **ಕನ್ನಡ** ವಿಶ್ವಕೋಶ,ಕನ್ನಡ ಅಧ್ಯಯನ ಸಂಸ್ಥೆ, ವಿಶ್ವವಿದ್ಯಾಲಯ, ಮೈಸೂರು.

೩. ವೆಂಕಟನಾರಾಯಣರಾವ್‌ಬಿ. ಮತ್ತು ಶ್ರೀನಿವಾಸ ಮೂರ್ತಿಎಂ.ಆರ್. (ಸಂ); ೧೯೬೫. ಇಂಗ್ಲೀಷ್-ಕನ್ನಡ-ನಿಘಂಟು, ಮೈ.ವಿ.ವಿ.

4. FUNK & WAG , 1949, A Standerd Dictionoryof English Language Funk, New York

